# ಪರಿವಿಡಿ

# ಮುನ್ನುಡಿ

ಈಗ ರಾಜಾಸ್ಥಾನವೆಂದು ಕರೆಯಲಾಗುವ ಧೀರ ರಜಪೂತರ ನಾಡಿನಲ್ಲಿ ಶೌರ್ಯ, ಸಾಹಸಗಳು ಆಧ್ಯಾತ್ಮಿಕತೆಯೊಡನೆ, ಶ್ರೀಮಂತ ಜನಪದ ಪರಂಪರೆಯೊಡನೆ ಮತ್ತು ಅಂಧಶ್ರದ್ಧೆಗಳೊಡನೆ ಕೂಡ ಬೆರೆತಿವೆ. ಅವರ ಕೆಲವು ಪ್ರದೇಶಗಳಲ್ಲಿ ಪರಿವರ್ತನೆಯ ಗಾಳಿ ಇನ್ನೂ ಬೀಸಬೇಕಿದೆ. ಜನ ಇನ್ನೂ ಗತಕಾಲವೊಂದರಲ್ಲಿ ಬದುಕುತ್ತಿದ್ದಾರೆ.

ಈ ಪುಸ್ತಕದಲ್ಲಿ ರಾಜಾಸ್ಥಾನದ ಅನೇಕ ವೈಭವಗಳನ್ನು ಒಂದು ಗುಳಿಗೆಯ ರೂಪದಲ್ಲಿ ಬಣ್ಣಿಸಿದ್ದೇನೆ; ಏಕೆಂದರೆ ಪೂರ್ಣಪ್ರಮಾಣದ ಚಿತ್ರಣಕ್ಕೆ ಟನ್‌ಗಟ್ಟಲೆ ಬೇಕಾಗುತ್ತದೆ.

ಈ ಕಷ್ಟಸಾಧ್ಯವಾದ ಕೆಲಸವನ್ನು ಕೈಗೊಳ್ಳಲು ನನಗೆ ನಿರಂತರ ಪ್ರೇರಣೆ ಕೊಟ್ಟುದಕ್ಕಾಗಿ ಹಿಂದಿನ ಸಾರ್ವಜನಿಕ ಸಂಪರ್ಕ ನಿರ್ದೇಶಕರಾದ ಶ್ರೀ ಆರ್.ಎಸ್. ಭಟ್ ಅವರಿಗೆ ಮತ್ತು ಪುಸ್ತಕಕ್ಕೆ ಸಾಮಗ್ರಿ ಸಂಗ್ರಹಿಸುವುದರಲ್ಲಿ ನೆರವು ಹಾಗೂ ಧಾರಾಳ ಸಹಕಾರ ನೀಡಿದ್ದಕ್ಕಾಗಿ ಸಾರ್ವಜನಿಕ ಸಂಪರ್ಕದ ಸಂಯುಕ್ತ ನಿರ್ದೇಶಕರಾದ ಶ್ರೀ.ಎನ್.ಕೆ. ಪರೀಖ್ ಅವರಿಗೆ ನನ್ನ ವಂದನೆಗಳು ಸಲ್ಲುತ್ತವೆ. ಖ್ಯಾತ ಲೇಖಕ ಶ್ರೀ ಮನೋಹರ ಪ್ರಭಾಕರ್ ಅವರಿಗೆ, ಪ್ರಸಿದ್ಧ ಪತ್ರಕರ್ತ ಶ್ರೀ ಬಿ.ಸಿ. ವರ್ಮಾ ಅವರಿಗೆ ಮತ್ತು ಇತರ ಅನೇಕ ಮಿತ್ರರಿಗೆ ಕೂಡ ನಾನು ಕೃತಜ್ಞ.

**ಡಿ.ಆರ್. ಅಹುಜ**

# ಪ್ರದೇಶ ಮತ್ತು ಜನ

ರಾಜಾಸ್ಥಾನ–ರಜಪೂತರ ನಿವಾಸ–ಭಾರತ ಗಣರಾಜ್ಯದಲ್ಲಿ ಎರಡನೆಯ ವಿಶಾಲತಮ ರಾಜ್ಯ. ವಿಸ್ತೀರ್ಣದಲ್ಲಿ ಇಂಗ್ಲೆಂಡಿಗಿಂತ ದೊಡ್ಡದು. ಅದು, ಟಿ.ಎಚ್. ಹೆಂಡ್ಲಿಯ ಪ್ರಕಾರ, ತುಸು ಅನಿಯತವಾದ ಪಕ್ಕಗಳನ್ನುಳ್ಳ ಒಂದು ಜಾತಿಯ ಚಪ್ಪಟೆ ಮೀನಿನ ಆಕಾರದಲ್ಲಿದೆ. ಅರಾವಳಿ ಪರ್ವತ ಶ್ರೇಣಿ ಈ ಪ್ರದೇಶವನ್ನು ಎರಡು ಸಹಜ ವಿಭಾಗಗಳನ್ನಾಗಿ ವಿಭಜಿಸುತ್ತದೆ: ವಾಯುವ್ಯ ಮತ್ತು ಆಗ್ನೇಯ. ಮೊದಲನೆಯದು ನೀರಿನ ಕೊರತೆಯನ್ನುಳ್ಳ ಮರಳು ಪ್ರದೇಶ; ಅದು ಪಶ್ಚಿಮದಲ್ಲಿ ಮತ್ತು ವಾಯುವ್ಯದಲ್ಲಿ ಬರಿಯ ಮರುಭೂಮಿಯಿಂದ ಕ್ರಮೇಣ ಹೊಮ್ಮಿ ಅರಾವಳಿ ಪರ್ವತಗಳ ಮತ್ತು ಹರ್ಯಾಣದ ಗಡಿಪ್ರದೇಶದ ಆಸುಪಾಸಿನಲ್ಲಿ ಪೂರ್ವ ಹಾಗೂ ಈಶಾನ್ಯದತ್ತ ಇರುವ ಸಾಕಷ್ಟು ಫಲವತ್ತಾದ ಭೂಮಿಯಾಗುತ್ತದೆ. ಆಗ್ನೇಯ ವಿಭಾಗ ವಾಯುವ್ಯ ವಿಭಾಗಕ್ಕಿಂತ ಎತ್ತರ ಮತ್ತು ಫಲವತ್ತಾಗಿದ್ದು, ವ್ಯಾಪಕ ಪರ್ವತ ಶ್ರೇಣಿಗಳಿಂದಲೂ, ಕಾಡು ಪ್ರದೇಶದ ತುಣುಕುಗಳಿಂದಲೂ, ಹಲವು ದೊಡ್ಡ ನದಿಗಳಿಂದಲೂ, ಫಲವತ್ತಾದ ಪ್ರಸ್ಥಭೂಮಿಗಳಿಂದಲೂ, ಸೊಗಸಾದ ಮಣ್ಣಿನ ಹರಹುಗಳಿಂದಲೂ ಕೂಡಿ, ಬಹಳ ವೈವಿಧ್ಯಪೂರ್ಣ ಸ್ವರೂಪವುಳ್ಳದ್ದಾಗಿದೆ.

ಅರಾವಳಿ ಶ್ರೇಣಿ ಜಗತ್ತಿನ ಪ್ರಾಚೀನತಮ ಸ್ತರೀಕೃತ ಶ್ರೇಣಿ ಎಂದು ಭೂವಿಜ್ಞಾನಿಗಳು ಭಾವಿಸುತ್ತಾರೆ; ರಾಜ್ಯದ ಒಟ್ಟು ವಿಸ್ತೀರ್ಣದಲ್ಲಿ ಶೇ. 58ರಷ್ಟನ್ನು ಬಂಜರುಗೊಳಿಸುವಲ್ಲಿ ಮತ್ತು ಶೇ. 36ರಷ್ಟನ್ನು ಅರೆ ಬಂಜರುಗೊಳಿಸುವಲ್ಲಿ ಇದರ ಕೊಡುಗೆ ದೊಡ್ಡದು.

ಮುಂಬೈನಿಂದ ರಾಜಾಸ್ಥಾನಕ್ಕೆ ಬರುತ್ತಿರುವ ಪ್ರವಾಸಿ, ಅಬುವನ್ನು ಮುಟ್ಟುತ್ತಿರುವಾಗಲೆ ಗುಜರಾತಿನ ಹಸಿರು ಪೊದೆಗಳನ್ನೂ ತೋಪುಗಳನ್ನೂ ಕಳೆದುಕೊಳ್ಳತೊಡಗುತ್ತಾನೆ. ಬೆಟ್ಟದಿಂದಾಚೆಗೆ, ನೈರುತ್ಯ ರಾಜಾಸ್ಥಾನದ ಎತ್ತರವಾದ ಬರಡು ಪ್ರಸ್ಥಭೂಮಿಯನ್ನು ರೂಕ್ಷವಾದ ಕಡಿದುಬಂಡೆಗಳೂ, ಪರ್ವತ ಶ್ರೇಣಿಗಳೂ ಭಂಗಗೊಳಿಸುತ್ತವೆ; ಅಲ್ಲಿ ಇಲ್ಲಿ ಕೋಟೆಕೊತ್ತಲಗಳು ಕಿರೀಟವಿಡುತ್ತವೆ. ನೀರಾವರಿ ಅಣೆಕಟ್ಟುಗಳು ಅಥವಾ ಆಳವಾದ ಬಾವಿಗಳು ಕಣಿವೆಗಳೊಳಗಿರುವ ಓಯಸಿಸ್ ಕ್ಷೇತ್ರಗಳಿಗೆ ಜಲಮೂಲವಾಗಿವೆ. ಕುರಿ ಮತ್ತು ಆಡಿನ ಮಂದೆಗಳು, ಹಾಗೂ ಒಂಟೆಗಳ ತಂಡಗಳು, ಪಕ್ಕದಲ್ಲೇ ಹೆಜ್ಜೆ ಹಾಕುವ ತಮ್ಮ ಕಟ್ಟುಮಸ್ತಾದ,

ಬಿರುನೋಟದ ಒಡೆಯರೊಡನೆ ಸಾಲುಗಟ್ಟಿ ಸಾಗುತ್ತವೆ.

ಮುಸುಕು ಹಾಕಿಕೊಂಡ, ಲಜ್ಜಾನ್ವಿತ ಸ್ತ್ರೀಯರು ಭಾರವಾದ ತಮ್ಮ ಲಂಗವನ್ನು ಬಳುಕಿಸಿ ನಡೆಯುತ್ತ, ದೊಡ್ಡ ಕೊಡಗಳಲ್ಲಿ ನೀರು ತುಂಬಿ, ನೇರವಾದ ತಮ್ಮ ತಲೆಗಳ ಮೇಲಿರಿಸಿಕೊಳ್ಳುತ್ತಾರೆ ಮತ್ತು ಭಾರ ಹೊರುತ್ತ ನೃತ್ಯದ ಭಾವನೆಯನ್ನು ಮೂಡಿಸುತ್ತಾರೆ. ಅವರ ಹಳದಿ, ಕೆಂಪು, ದಟ್ಟನೀಲಿ ಮತ್ತು ಕೇಸರಿ ಬಣ್ಣದ ವಸ್ತ್ರಗಳು ಸುತ್ತಣ ಭೂದೃಶ್ಯದ ವರ್ಣನ್ಯೂನತೆಯನ್ನು ತುಂಬಿಕೊಡುವಂತೆ ತೋರುತ್ತವೆ.

ಕಡಿದುಬಂಡೆಗಳು ಜೋಧ್‌ಪುರಕ್ಕೆ ಹಿನ್ನೆಲೆಯಾಗುತ್ತವೆ ಮತ್ತು ಒಂದು ಹೆಗ್ಗುರುತಾಗಿ ನಾಗೌರದ ಮಧ್ಯಕಾಲೀನ ಕೋಟೆ ಹೊಮ್ಮುವಂಥ ಕೊನೆಯಿಲ್ಲದ ಬರಡು ಮೈದಾನದೊಳಗೆ ಕಣ್ಮರೆಯಾಗುತ್ತವೆ. ಇದರಿಂದಾಚೆ, ದೂರತರ ಉತ್ತರದಲ್ಲಿ ಮರಳು, ಮರಳು ಮತ್ತೂ ಮರಳು; ಅದನ್ನು ಯಾವುದಾದರೂ ಮುಳ್ಳುಪೊದೆ ಅಥವಾ ಒಂಟಿ ಜಾಲಿ ಮರ, ಕುಬ್ಜವೃಕ್ಷ ಆಗಾಗ ತಡೆಗಟ್ಟುತ್ತವೆ: ಅವು ಬಿಸಿಲು ಸುಡುವ, ಗಾಳಿ ಗುಡಿಸುವ ಈ ವಿಸ್ತಾರದಲ್ಲಿ ಒಂಟಿ ಬಾವಿಯೊಂದರಿಂದ ಜೀವನಾವಕಾಶ ಪಡೆಯುತ್ತವೆ.

ಇದು ರಾಜಾಸ್ಥಾನದ ಬಂಜರು ಪಶ್ಚಿಮ, ಭಾರತೀಯ ಮಹಾ ಮರುಭೂಮಿಯ ಥಾರ್-ಭಾಗ; ಅದು ಲಕ್ಷಾಂತರ ವರ್ಷಗಳಿಂದ ಜನಶೂನ್ಯವಾಗಿ ಉಳಿದಿದೆ. ಮಾರ್ಚ್ ಮಾಸದ ಆದಿಯಲ್ಲೇ ಕುಲುಮೆಯಂತೆ ಜ್ವಲಿಸುವ ಈ ಪ್ರದೇಶ ಮಹಾಭಾರತದಲ್ಲಿ ಉಲ್ಲೇಖಗೊಂಡಿರುವ ಮರು-ಕಾಂತಾರ, ಮೃತ್ಯುಪ್ರಾಂತ.

ರಾಜಾಸ್ಥಾನ ದೆಹಲಿಯಿಂದ ಬರುವ ಪ್ರವಾಸಿಗೆ ಪೂರ್ತಿ ಬೇರೆಯೆ ಆದ ಮುಖವನ್ನು ತೋರಿಸುತ್ತದೆ. ರಾಜಧಾನಿಯನ್ನು ಬಿಟ್ಟ ಕೂಡಲೆ ಅರಾವಳಿ ಶ್ರೇಣಿ ದಾರಿಗೆ ಅಂಚು ಕಟ್ಟುತ್ತದೆ ಮತ್ತು ಆಳ್ವರ್ ತಲುಪುವುದಕ್ಕೆ ಮುನ್ನ ಸ್ಪಷ್ಟವಾಗಿ ಎದ್ದುಕಾಣುತ್ತದೆ. ಮುಂಗಾರಿನ ಮೊದಲ ಮಳೆಗೆ ಉನ್ಮತ್ತ ಹಸುರಿಗೆ ತಿರುಗುವ ಬೂದು-ಹಳದಿ ಕುರುಚಲು ಬಂಡೆಗಳನ್ನು ಮುಸುಕುತ್ತವೆ. ಆಳ್ವರ್, ಭರತ್‌ಪುರ್ ಮತ್ತು ಸವಾಯಿ ಮಧೋಪುರಗಳ ಕಾಡುಗಳು ಹುಲಿ, ಚಿರತೆ, ಕಾಡುಹಂದಿ, ನೀಲಿ ಗೂಳಿಗಳ ಮತ್ತು ಜಿಂಕೆ ವಂಶದ ಸುಂದರ ಹಾಗೂ ಚುರುಕು ಪ್ರಾಣಿಗಳ ಆವಾಸವಾಗಿವೆ.

ಇಲ್ಲಿನ ಮೈದಾನಗಳು ಮಟ್ಟಸವಾಗಿದ್ದು, ಮೆಕ್ಕಲು ಮಣ್ಣಿನಿಂದ ಫಲವತ್ತಾಗಿವೆ. ಕೆಳಗೆ ದಕ್ಷಿಣಕ್ಕೆ, ಚಿತ್ತೂರ್‌ಘರ್ ಮತ್ತು ಭಿಲ್ವಾರ ಜಿಲ್ಲೆಗಳಲ್ಲಿ, ಕೋಟ ಮತ್ತು ಬುಂಡಿಯಲ್ಲಿ ಗೋಧಿ, ಜೋಳ, ಭತ್ತ ಮತ್ತು ಕಬ್ಬಿನ ಗದ್ದೆಗಳು ಸಭ್ಯತೋರ್ಕೆಯ, ನಿಶ್ಚಿಂತ ಜನದಟ್ಟಣೆಯುಳ್ಳ ಗ್ರಾಮ, ನಗರಗಳ ನಡುವೆ ನದೀತೀರಗಳಲ್ಲಿ ಹರಡಿಕೊಂಡಿವೆ.

ತನ್ನ ಪಶ್ಚಿಮ ಪ್ರತಿರೂಪಕ್ಕೆ ವಿರುದ್ಧವಾಗಿ, ಪೂರ್ವ ರಾಜಾಸ್ಥಾನದಲ್ಲಿ ಮರಳುಗಾಡು ರಾಜ್ಯವೆಂಬ ಭಾವನೆಯನ್ನು ಸಮರ್ಥಿಸುವಂಥದು ಬಹಳಷ್ಟಿದೆ. ರಾಜಾಸ್ಥಾನದ ಈ ಪ್ರದೇಶ, ಅರಾವಳಿಗಳ 600 ಕಿಲೋಮೀಟರ್ ಉದ್ದದ ನೈಸರ್ಗಿಕ ಗೋಡೆಯಿಂದ ವಿಶಿಷ್ಟವಾಗಿದೆ; ಹೆಚ್ಚು ಕಡಿಮೆ ಅವುಗಳ ಕೇಂದ್ರ ಅಜ್ಮೀರ್‌ದಲ್ಲಿದೆ.

ಈ ಚಿತ್ರವತ್ತಾದ ನಗರಕ್ಕೆ ಆಧಾರವಾದ ಪ್ರಸ್ಥಭೂಮಿ ಉತ್ತರ ಭಾರತದ ಅತ್ಯುನ್ನತಿಯನ್ನು ಗುರುತಿಸುತ್ತದೆ; ಹಾಗಾಗಿ, ಅದನ್ನು ಭಾರತದ ಜಲಾನಯನ ಭೂಮಿ ಎಂದು ಕರೆಯಲಾಗುತ್ತದೆ. ಮೌಂಟ್ ಅಬು ಹತ್ತಿರದ ಶ್ರೇಣಿಯ ಅತ್ಯುನ್ನತ ನೆಲೆಯಾದ ಗುರುಶಿಖರವನ್ನು ಈ ಪ್ರದೇಶದ ಚಾವಣಿಯೆಂದು ಸಮರ್ಪಕವಾಗಿ ಬಣ್ಣಿಸಬಹುದು.

## ಚಾರಿತ್ರಿಕ ಹಿನ್ನೆಲೆ

ಪುರಾತತ್ವ ಶಾಸ್ತ್ರಜ್ಞರು ರಾಜಾಸ್ಥಾನದ ಪ್ರಾಚೀನತೆಯನ್ನು ಆರಂಭ ಶಿಲಾಯುಗದಷ್ಟು ಹಿಂದಕ್ಕೊಯ್ದಿದ್ದಾರೆ. ಸುಮಾರು ಒಂದು ಲಕ್ಷ ವರ್ಷಗಳ ಹಿಂದೆ ಮನುಷ್ಯ ಪ್ರಾಯಶಃ ಬನಸ್ ತೀರಗಳಲ್ಲಿ ಮತ್ತು ಇತರ ಅರಾವಳಿ ನದೀ ಕಣಿವೆಗಳಲ್ಲಿ ವಾಸಿಸುತ್ತಿದ್ದ. ಈ ಆದಿಮಾನವ ಶಿಲಾಯುಧಗಳಿಂದ ತನ್ನ ಆಹಾರಕ್ಕಾಗಿ ಬೇಟೆಯಾಡುತ್ತ ಸದಾ ಸಂಚಾರಿಯಾಗಿದ್ದ. ಬೈರಾತ್, ರಯಧ್ ಮತ್ತು ಭನ್‌ಗಢ್‌ದಂತಹ ವಿವಿಧ ನಿವೇಶನಗಳಲ್ಲಿ ಈ ಆಯುಧಗಳ ಮಾದರಿಗಳು ಕಂಡುಬಂದಿವೆ.

ಒಂದು ಕಾಲದಲ್ಲಿ, ವಾಯುವ್ಯ ರಾಜಾಸ್ಥಾನ ಇಂದಿನಂತೆ ನಿಷೇಧಕ ಮರುಭೂಮಿಯಾಗಿರಲಿಲ್ಲ. ಈ ಪ್ರದೇಶಕ್ಕೆ ದೊಡ್ಡ ನದಿಗಳಾದ ಸರಸ್ವತಿ ಮತ್ತು ದೃಷದ್ವತಿ ನೀರುಣಿಸುತ್ತಿದ್ದುವು. ಹರಪ್ಪನ್ ಮಹಾಸಂಸ್ಕೃತಿ, ಹಾಗೆಯೆ ಬೂದು ಸರಕು (ಗ್ರೇವೇರ್) ಮತ್ತು ರಂಗಮಹಲ್ ಸಂಸ್ಕೃತಿಗಳು ಅವುಗಳ ಕಣಿವೆಗಳಲ್ಲಿ ವರ್ಧಿಸಿದುವು. ಮನು ಅಷ್ಟೊಂದು ಉಜ್ವಲವಾಗಿ ಕೀರ್ತಿಸುವ ಬ್ರಹ್ಮಾವರ್ತ ದೇಶವೇ ಇದು. ಈ ಪ್ರದೇಶದಲ್ಲಿ, ಅದರಲ್ಲೂ ಕಲಿಬಂಗನ್‌ದಲ್ಲಿ ನಡೆದ ಉತ್ಖನನಗಳು, ಸುಮಾರು ಐದು ಸಾವಿರ ವರ್ಷಗಳ ಹಿಂದೆ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಪ್ರಬುದ್ಧ ನಗರ ಸಂಸ್ಕೃತಿಯೊಂದನ್ನು ಬೆಳಕಿಗೆ ತಂದಿವೆ. ಹರಪ್ಪನ್, ಅಂತೆಯೆ 'ಗ್ರೇವೇರ್' ಹಾಗೂ ರಂಗಮಹಲ್ ಸಂಸ್ಕೃತಿಗಳು ರಾಜಾಸ್ಥಾನದ ಬಹುಭಾಗವನ್ನು ಆವರಿಸಿ, ಇನ್ನೂ ದಕ್ಷಿಣಕ್ಕೆ ನೂರಾರು ಕಿಲೋಮೀಟರ್ ದೂರ ವಿಸ್ತರಿಸಿದ್ದುವು.

ಈ ಪ್ರದೇಶ ಕ್ರಿಸ್ತಪೂರ್ವ ನಾಲ್ಕನೆಯ ಮತ್ತು ಅನಂತರದ ಶತಮಾನಗಳಲ್ಲಿ ಹಲವಾರು ಗಣರಾಜ್ಯಗಳಾಗಿ ವಿಭಜಿತವಾಗಿತ್ತೆಂದು ಸಾಧಿಸಲು ಐತಿಹಾಸಿಕ ಸಾಕ್ಷ್ಯವಿದೆ. ಇಂಥ ಎರಡು ಗಣರಾಜ್ಯ ಶಕ್ತಿಗಳಾಗಿದ್ದ ಮಾಳವರು ಮತ್ತು ಸಿಬಿಗಳು ಅಲೆಕ್ಸಾಂಡರ್ ಚಕ್ರವರ್ತಿಯನ್ನು ಪಂಜಾಬಿನಿಂದ ಸಿಂದ್‌ನತ್ತ ಅಟ್ಟುವಷ್ಟು ಪ್ರಬಲವಾಗಿದ್ದುವು. ಉತ್ತರ ಬಿಕನೀರ್ ಆಗ ಮತ್ತೊಂದು ಗಣರಾಜ್ಯಾತ್ಮಕ ಯೋಧ ಬುಡಕಟ್ಟಾದ ಯೌಧೇಯರ ವಶದಲ್ಲಿತ್ತು. ಮಹಾಭಾರತದ ಮತ್ಸ್ಯರು, ಜೈಪುರದ ಬಹು ಭಾಗವನ್ನೊಳಗೊಂಡ ಪೂರ್ವ ರಾಜಾಸ್ಥಾನದ ಮೇಲೆ ಪ್ರಭುತ್ವ ಸ್ಥಾಪಿಸಿದ್ದರು. ಅವರ ರಾಜಧಾನಿ ಜೈಪುರದ ಉತ್ತರಕ್ಕೆ ಸು.80 ಕಿಲೋಮೀಟರ್ ದೂರವಿರುವ ಬೈರಾತ್‌ದಲ್ಲಿತ್ತು. ಈ ಪ್ರದೇಶದ ಪ್ರಾಚೀನತೆಯನ್ನು ಅಶೋಕನ ಎರಡು ಶಾಸನಗಳು ಮತ್ತು ಕ್ರಿಸ್ತಪೂರ್ವ ನಾಲ್ಕು ಮತ್ತು ಐದನೆಯ ಶತಮಾನದ ಬೌದ್ಧ ಮಠಗಳ ಅವಶೇಷಗಳು ಮತ್ತಷ್ಟು ಸಮರ್ಥಿಸುತ್ತವೆ.

ಭರತ್‌ಪುರ, ಧೋಲ್‌ಪುರ ಮತ್ತು ಕರೌಲಿ ಆಗ ಮಥುರಾನಗರವನ್ನು ರಾಜಧಾನಿ ಮಾಡಿಕೊಂಡಿದ್ದ ಶೂರಸೇನ ಜನಪದದ ಭಾಗವಾಗಿದ್ದುವು. ಈಚಿನ ಹಲವಾರು ಮೌರ್ಯಶಿಲ್ಪಗಳು ಮತ್ತು ಕುಂಭ ಕೃತಿಗಳು ಭರತ್‌ಪುರ ಜಿಲ್ಲೆಯ ನೋಹ್‌ದಲ್ಲಿ ಉತ್ಖನನಗಳಲ್ಲಿ ಸಿಕ್ಕಿವೆ. ಉತ್ತರ ಮತ್ತು ಮಧ್ಯ ರಾಜಾಸ್ಥಾನಗಳು ಕುಶಾನರ ಅವಧಿಯಲ್ಲಿ ಮತ್ತು ಕ್ರಿ.ಶ. ಮೂರನೆಯ ಶತಮಾನದಲ್ಲುಂಟಾದ ಕುಶಾನರ ಪತನದ ಬಳಿಕ ಶ್ರೀಮಂತವಾಗಿದ್ದುವೆಂದು ಶಾಸನಗಳು ತೋರಿಸಿಕೊಡುತ್ತವೆ. ರಾಜಾಸ್ಥಾನದ ಪ್ರಾಚೀನತರ ಗಣರಾಜ್ಯಗಳು ತಮ್ಮನ್ನು ತಾವು ಪುನರ್‌ಘೋಷಿಸಿಕೊಂಡುವು; ಈ ಪ್ರದೇಶದ ಬಹುಭಾಗ, ಗುಪ್ತರ ಅವಧಿಯಲ್ಲೆ ಏಳ್ಗೆಯಲ್ಲಿದ್ದ ಮಾಳವ ಗಣರಾಜ್ಯದ ಅಂಗವಾಗಿ ಪರಿಣಮಿಸಿತು; ಅದು, ತೋರಮಾನನ ಕೈಕೆಳಗೆ ಹೂಣರು ಕ್ರಿ.ಶ. ಆರನೆಯ ಶತಮಾನದಲ್ಲಿ ಈ ಸಂಪದ್ಭರಿತ ಪ್ರದೇಶಗಳನ್ನು ಸೂರೆ ಮಾಡಿ ಗಣರಾಜ್ಯಗಳನ್ನು ನಿಗ್ರಹಿಸುವತನಕ ಬಹಳಷ್ಟು ಸ್ವಾಯತ್ತತೆಯನ್ನು ಅನುಭವಿಸಿತು. ಮುಂದೆ ಯಶೋಧರ್ಮ ಹೂಣರನ್ನು ಹಿಂದಕ್ಕಟ್ಟಿದ. ಗುಪ್ತರ ಪ್ರಭಾವ ಆಗ್ನೇಯ ರಾಜಾಸ್ಥಾನದಲ್ಲಿ ನವೀಕೃತವಾಯಿತು. ಕ್ರಿ.ಶ. ಏಳನೆಯ ಶತಮಾನದಲ್ಲಿ, ಪ್ರಾಚೀನತರ ಗಣರಾಜ್ಯಗಳು ಸ್ವತಂತ್ರ ರಾಜ್ಯಗಳಾಗಿ ಬದಲಾಗ ತೊಡಗಿದವು. ಇವುಗಳಲ್ಲಿ, ಮೌರ್ಯರ ಕೈಕೆಳಗಿನ ಚಿತ್ತೂರ್, ಗುಬಿಲರ ಕೈಕೆಳಗಿನ ಮೇವಾರ್ ಮತ್ತು ಗುರ್ಜರರ ಕೈಕೆಳಗಿನ ಗುರ್ಜರತ್ರ (ಪಶ್ಚಿಮ ರಾಜಾಸ್ಥಾನ) ಅತ್ಯಂತ ಪ್ರಮುಖವಾದುವು.

ಒಂದರ ಮೇಲೊಂದರಂತೆ ಬಂದ ವಿದೇಶಿ ದಾಳಿಗಳು ಸಂಸ್ಕೃತಿಮಿಲನವೊಂದನ್ನುಂಟು ಮಾಡಿದ್ದುವು; ಊಹಿತ ಸಮಾಜಸಂಕರವನ್ನು ತಡೆಗಟ್ಟಲು ಸಂಪ್ರದಾಯವಾದಿ ಹಿಂದೂಗಳ ಕಣ್ಣಿನಲ್ಲಿ ಏನಾದರೊಂದನ್ನು ಮಾಡಬೇಕಿತ್ತು. ಕ್ರಿ.ಶ. 647ರಲ್ಲಿ ಹರ್ಷನ ಮರಣಾನಂತರ, ಪ್ರಬಲ ಕೇಂದ್ರಾಧಿಕಾರವಿರಲಿಲ್ಲ. ಸನ್ನಿವೇಶವನ್ನು ಎದುರಿಸಿದ್ದು ಸ್ಥಳೀಯ ಅಥವಾ ಪ್ರಾದೇಶಿಕ ಹಂತದಲ್ಲಿ. ಹುಟ್ಟಿಕೊಂಡ ಹೊಸ ನಾಯಕರ ಆಳಿಕೆಯಲ್ಲಿ ಜಾತಿಪದ್ಧತಿಯನ್ನು ಬಿಗಿಗೊಳಿಸಿದ್ದು ಈ ಬಲಾತ್ಕಾರವೇ.

ರಾಜಾಸ್ಥಾನದ ಉದ್ದಗಲಕ್ಕೂ ಪ್ರಬಲತಮ ರಾಜಕೀಯ ಮತ್ತು ಸೈನಿಕ ಶಕ್ತಿಯಾಗಿ ಗುರ್ಜರ-ಪ್ರತೀಹಾರರ ಉದಯವನ್ನು ಎಂಟನೆಯ ಶತಮಾನ ಕಂಡಿತು; ಅವರ ಸಾಮ್ರಾಜ್ಯ ಎರಡು ಶತಮಾನಗಳಿಗೂ ಹೆಚ್ಚು ಕಾಲ ಬಾಳಿತು. ನಾಗಭಟ II, ಗೋವಿಂದ III, ಮಹೇಂದ್ರಪಾಲ I ಮತ್ತು ಇತರ ಆಳರಸರ ಕೈಕೆಳಗೆ ಸಿಂದ್‌ನ ಒಂದು ಸಣ್ಣ ಭಾಗದೊಳಗೆ ಅರಬ್ ಆಕ್ರಮಣಕಾರರನ್ನು ಅಡಗಿಸಿದ್ದು ಈ ಸಾಮ್ರಾಜ್ಯವೇ. ಆದರೆ ಅರಬರ ವಿರುದ್ಧ ಈ ಸಾಮ್ರಾಜ್ಯಶಾಹಿಯನ್ನು ಬೆಂಬಲಿಸುತ್ತಿದ್ದ ದಳವಾಯಿಗಳಲ್ಲಿ ಅನೇಕರು ಸೈನಿಕ ಕೀರ್ತಿಗಾಗಿ ಹಂಬಲಿಸತೊಡಗಿದರು; ಇದು ಅವರವರಲ್ಲಿ ಸತತ ಘರ್ಷಣೆ ವೈರಗಳಿಗೆ ಕಾರಣವಾಯಿತು. ಪ್ರತೀಹಾರ ಸಾಮ್ರಾಜ್ಯ ಕರಗಿ ಹೋಗಿ, ಹಲವಾರು ಪಾಳೆಯಪಟ್ಟುಗಳು ಅದರ ಸ್ಥಾನಕ್ಕೆ ಬಂದುವು. ಅವುಗಳಲ್ಲಿ ಇವು ಕೆಲವು; ಗುಹಿಲರ ಕೈಕೆಳಗಿನ ಮೆದಪೆಟ, ಪರಮಾರರ ಕೈಕೆಳಗಿನ ಅಬು, ಸೋಲಂಕಿಗಳ ಕೈಕೆಳಗಿನ ಪಶ್ಚಿಮ ರಾಜಾಸ್ಥಾನ, ಮತ್ತು ಚೌಹಾನರ ಅಥವಾ

ಚಾಹಮಾನರ ಕೈಕೆಳಗಿನ ಸಂಬ್ಬರ್–ಅಜ್ಮೀರ್.

ಹನ್ನೆರಡನೆಯ ಶತಮಾನದ ಕೊನೆಯವರೆಗೆ, ಈ ರಜಪೂತ ಪಾಳೆಯಪಟ್ಟುಗಳು ತುರ್ಕ ದಾಳಿಗಳನ್ನು ಎದುರಿಸಿದುವು. ಚೌಹಾನರು ದೆಹಲಿಯನ್ನು ಹಿಡಿದು, ತಮ್ಮ ಪೂರ್ವಿಕರಾದ ಪ್ರತಿಹಾರರ ವೈಶಿಷ್ಟ್ಯವಾಗಿದ್ದ ಶೌರ್ಯ, ಸಾಹಸಗಳನ್ನು ಪ್ರದರ್ಶಿಸಿದರು. ಕಾಥೇವಾಡದ ಸೋಮನಾಥದತ್ತ ಸಾಗುವಾಗ ಮತ್ತು ಮರಳುವಾಗ ಘಜನಿ ಸೈನ್ಯ ರಾಜಾಸ್ಥಾನದ ಪಾಳೆಯಪಟ್ಟುಗಳ ಮೇಲೆ ಆಕ್ರಮಣ ನಡೆಸಿತು; ಆದರೆ ಚೌಹಾನ್ ದೊರೆಗಳು–ಅರ್ಸೋರಾಜ, ಬಿಸಾಲದೇವ್ ಮತ್ತು ಪೃಥ್ವಿರಾಜ II – ಅದನ್ನು ತಡೆದರು.

ಆದರೂ, ರಜಪೂತರು ಈ ನಡುವೆ ಉದ್ದಕ್ಕೂ ತಮ್ಮತಮ್ಮಲ್ಲೇ ಹೋರಾಡುತ್ತ, ತಮ್ಮ ಸಂಪನ್ಮೂಲಗಳನ್ನು ಬರಿದು ಮಾಡುತ್ತಿದ್ದರು; ಹೀಗೆ ಆಂತರಿಕ ದೌರ್ಬಲ್ಯವಿದ್ದರೂ, ಉಳಿದ ಭಾರತದ ಪಾಲಿಗೆ ವಿದೇಶೀ ಆಕ್ರಮಣದ ವಿರುದ್ಧ ಗುರಾಣಿಯಾಗಿದ್ದರು.

ಆದರೆ ಈ ಸೋಲು ರಜಪೂತರ ಶೌರ್ಯದ ಮತ್ತು ತಮ್ಮ ಪಿತ್ರಾರ್ಜಿತ ಆಸ್ತಿಯ ಪ್ರತ್ಯಂಗುಲಕ್ಕಾಗಿ ಹೋರಾಡಬೇಕೆಂಬ ಅವರ ನಿರ್ಧಾರದ ಅಂತ್ಯವಾಗಿರಲಿಲ್ಲ. ಮತ್ತೂ ಐನೂರು ಅಥವಾ ಹೆಚ್ಚು ವರ್ಷಗಳವರೆಗೆ ಭಯಂಕರ ಪ್ರತಿರೋಧ ಮುಂದುವರಿಯಿತು. ಜೇಮ್ಸ್ ಟಾಡ್ ಹೇಳುವಂತೆ:

> ರಾಜಪುಟಾಣದ ಪ್ರತಿಯೊಂದು ದಾರಿಯೂ ಸೂರೆಗೊಳಗಾದವರ ಮತ್ತು ಸೂರೆಗಾರರ ರಕ್ತಪ್ರವಾಹಗಳಿಂದ ಒದ್ದೆಯಾಯಿತು. ಆದರೆ ಎಲ್ಲವೂ ವಿಫಲ; ಹೊಸ ದಾಸ್ತಾನು ಒದಗಿಬರುತ್ತಲೇ ಇತ್ತು, ಕೊಲೆಯನ್ನು ಪವಿತ್ರಗೊಳಿಸಿದ, ಕೊಳ್ಳೆಯನ್ನು ಶಾಸನಬದ್ಧಗೊಳಿಸಿದ, ವಿನಾಶವನ್ನು ಪ್ರತಿಭಟಿಸಿದ ಆದೇ ಪಶ್ಚಾತ್ತಾಪರಹಿತ ಭಾವನೆಗೆ ಉತ್ತರಾಧಿಕಾರಿಯಾಗಿ ವಂಶದ ಮೇಲೆ ವಂಶ ಬಂತು–ಈ ಹತಾಶ ಸಂಘರ್ಷಗಳಲ್ಲಿ ಇಡೀ ಬುಡಕಟ್ಟುಗಳು ಕೊಚ್ಚಿಹೋದುವು; ಅವುಗಳ ಹೆಸರುಗಳಷ್ಟೇ ಅವುಗಳ ಪೂರ್ವಾಸ್ತಿತ್ವ ಮತ್ತು ಪ್ರಸಿದ್ಧಿಯ ಸ್ಮಾರಕಗಳಾಗಿವೆ.

ಒಂದಾದ ಮೇಲೊಂದರಂತೆ ವಂಶಗಳು ಬಂದ ಈ ಪ್ರಕ್ರಿಯೆಯಲ್ಲಿ, ಭಿಲ್, ಮೀನ, ಗುಜರ್ ಮತ್ತು ಮೇರ್ ಬುಡಕಟ್ಟುಗಳ ಸ್ಥಳೀಯ, ಮೂಲ ರಾಜರು ರಜಪೂತರಿಂದ ನಾಶಗೊಂಡರು; ರಜಪೂತರೂ ಒಂದು ಕುಲವಾದ ಮೇಲೆ ಮತ್ತೊಂದರಂತೆ, ಪರಾಜಿತರಾದರು. ಚಾರಣರು ಕೀರ್ತಿಸುವ ರಜಪೂತರ ಮೂವತ್ತಾರು ಆಳುವ ಕುಲಗಳಲ್ಲಿ ಎಂಟು ಅಥವಾ ಒಂಬತ್ತು ಮಾತ್ರ 1947ರಲ್ಲಿ ಭಾರತ ಸ್ವತಂತ್ರವಾದಾಗ ಅಧೀನ ಪ್ರಾಂತಗಳನ್ನು ವಶದಲ್ಲಿಟ್ಟುಕೊಂಡು ಆಳುತ್ತಿದ್ದುವು.

ಪಠಾಣರು, ಆಫ್ಘನ್ನರು, ಮಂಗೋಲರು ಮತ್ತು ಮುಘಲರನ್ನು ರಜಪೂತರು ಹಿಮ್ಮೆಟ್ಟಿಸಿದರು. ಕ್ರಿ.ಶ. 1527ರಲ್ಲಿ ಮೇವಾಡದ ರಾಣಸಂಗನ ನೇತೃತ್ವದ ಅತ್ಯುನ್ನತ ರಜಪೂತ ಒಕ್ಕೂಟ ಫತೇಪುರ್ ಸಿಕ್ರಿಯ ಹತ್ತಿರದ ಖನುವದಲ್ಲಿ ನಡೆದ ಯುದ್ಧದಲ್ಲಿ

ಬಾಬರನ ಫಿರಂಗಿದಳಕ್ಕೆ ಸೋತುಹೋಯಿತು. ಆದರೂ, ರಜಪೂತರು 1615ರವರೆಗೆ ತಮ್ಮ ಶತ್ರುಗಳಿಗೆ ಅನೇಕ ಯುದ್ಧಗಳಲ್ಲಿ ಮೇಲುಗೈಯಾದರು; ಆ ವರ್ಷ, ಜಹಾಂಗೀರನ ಆಳಿಕೆಯ ಅವಧಿಯಲ್ಲಿ ಮಹಾರಾಣಾ ಅಮರಸಿಂಘ್ ಅಧೀನತೆಯ ಷರತ್ತುಗಳನ್ನು ಒಪ್ಪಿಕೊಳ್ಳುವುದರೊಂದಿಗೆ ಮುಘಲರ ರಾಜಾಸ್ಥಾನದ–ಅಷ್ಟೇಕೆ ಬಹುಪಾಲು ಭಾರತದ – ವಿಜಯ ಪೂರ್ಣಗೊಂಡಿತು.

ಮುಘಲರ ಅವಧಿಯಲ್ಲಿ, ರಜಪೂತ ಸಂಸ್ಥಾನಗಳ ಅದೃಷ್ಟವು ಸಾಮ್ರಾಜ್ಯದ ಅದೃಷ್ಟದೊಡನೆ ಸಂಬದ್ಧವಾಗಿತ್ತು; ತಮ್ಮ ಮುಘಲ್ ಪ್ರಭುಗಳೊಡನೆ ಪ್ರಬಲತಮ ಸಂಬಂಧ ಬೆಳೆಸಿದ್ದ ಕೆಲವು ಸಂಸ್ಥಾನಗಳು–ಉದಾಹರಣೆಗೆ, ಅಂಗರ್ (ಜೈಪುರ್), ಬಿಕನೀರ್, ಬುಂಡಿ ಮತ್ತು ಕೋಟ–ಪ್ರಾಮುಖ್ಯದಲ್ಲಿ ಮತ್ತು ಸಂಪತ್ತಿನಲ್ಲಿ ಅಭ್ಯುದಯ ಹೊಂದಿದವು. ಆದರೆ ಮುಘಲ್ ಸಾಮ್ರಾಜ್ಯ ದುರ್ಬಲವಾಗಿ ಕಡೆಗೆ ಕುಸಿದಂತೆಲ್ಲ, ರಾಜಾಸ್ಥಾನದ ಸಂಸ್ಥಾನಗಳು ಹೊಸ ರಾಜಕೀಯ, ಸೈನಿಕ ಮತ್ತು ಆರ್ಥಿಕ ಬೆದರಿಕೆಗಳಿಗೆ ಗುರಿಯಾದುವು.

ಔರಂಗಜೇಬನ ಉತ್ತರಾಧಿಕಾರಿಯಾದ ಬಹದೂರ್‌ಷಹನ ಮರಣದೊಡನೆ (1712)ಮುಘಲ್ ಸಾಮ್ರಾಜ್ಯದ ಅವನತಿ ತ್ವರಿತವಾಯಿತು. ಮುಘಲ್ ಸಾಮ್ರಾಜ್ಯ ಶಾಹಿ ಹಿಂದಿನ 150 ವರ್ಷಗಳಲ್ಲಿ ಹರಳುಗಟ್ಟಿಸಿದ್ದ ಊಳಿಗಮಾನ್ಯ ಸಮಾಜ ವಿದ್ದಂತಹ ರಾಜಾಸ್ಥಾನದಲ್ಲಿ, ಅನಿಶ್ಚಿತತೆ, ಸಂಶಯ, ವಿನಾಶಗಳ ಯುಗವೊಂದು ಮೊದಲಾಯಿತು. ಜೈಪುರದ ಸವಾಯಿ ಜೈಸಿಂಹ ಮತ್ತು ಮಾರ್ವಾರದ ಅಜಿತಸಿಂಹರಂತಹ ದೊರೆಗಳು ಬದುಕಿದ್ದಷ್ಟು ಕಾಲ, ಮುಘಲ್ ಪ್ರಾಬಲ್ಯದಿಂದ ಮತ್ತು ದೆಹಲಿಯ ಕೈಗೊಂಬೆ ರಾಜರಿಂದ ರಾಜಾಸ್ಥಾನವನ್ನು ಸ್ವತಂತ್ರಗೊಳಿಸುವ ಹೋರಾಟ ಮುಂದುವರಿಯಿತು. ಆದರೆ ಅವರ ತರುವಾಯ, ಅಂತರ್ಯುದ್ಧ, ಪರಸ್ಪರ ಮಾರಕ ಕಲಹಗಳು ಮತ್ತು ಅನಾಯಕತ್ವಗಳ ದೀರ್ಘಾವಧಿಯೊಂದು ಮೊದಲಾಯಿತು.

ಅಂಬರ್‌ದ ಆಳರಸರು ಮುಘಲ್ ಚಕ್ರವರ್ತಿಗಳ ಪಕ್ಷ ವಹಿಸಿದಾಗ, ಮೇವಾರದ ದೊರೆಗಳು ಅವರೊಡನೆ ಬಾಬರನ ಕಾಲದಿಂದಲೂ ಹೋರಾಡುತ್ತಿದ್ದರು. 1614ರಲ್ಲಿ ಮೇವಾರದ ರಾಣಾ ಅಮರಸಿಂಹ ಜಹಾಂಗೀರನಿಗೆ ಶರಣಾಗತನಾದ; ಅಂದಿನಿಂದ ಮೇವಾರದ ದೊರೆಗಳು ಔರಂಗಜೇಬನ ಕಾಲದವರೆಗೆ ಮುಘಲರಿಗೆ ನಿಷ್ಠರಾಗಿದ್ದರು. ಸಂತಾನವಿಲ್ಲದ ಮಹಾರಾಜ ಜಸವಂತಸಿಂಹನ ಮರಣಾನಂತರ, 1678ರಲ್ಲಿ ಔರಂಗಜೇಬ್ ರಾಜ್ಯವನ್ನು ಸೇರಿಸಿಕೊಳ್ಳಬಯಸಿದ. ಮೂವತ್ತು ದೀರ್ಘ ವರ್ಷಗಳ ಕಾಲ ಮೇವಾರ ಸಮರ್ಥ ಸೇನಾನಿ ದುರ್ಗಾದಾಸನ ಕೈಕೆಳಗೆ ಮುಘಲರೊಡನೆ ಕಾದಿತು; ಆಮೇಲೆ 1709ರಲ್ಲಿ ಒಂದನೆಯ ಬಹದೂರ್‌ಷಹ ಅಜಿತಸಿಂಹನ ಗಾದಿಯ ಹಕ್ಕನ್ನು ಒಪ್ಪಿಕೊಂಡ.

ರಾಜಾಸ್ಥಾನದ ಇತಿಹಾಸಕಾರರು 1751–92ರ ಅವಧಿಯನ್ನು ರಜಪೂತ್–ಮರಾಠ ಹೋರಾಟದ ಅವಧಿಯೆಂದು ಗುರುತಿಸಿದ್ದಾರೆ. ಸವಾಯಿ ಜಯಸಿಂಹ ಬದುಕಿದ್ದಾಗಲೆ ಮರಾಠಾ ಒಳದಾರಿಗಳು ರಾಜಾಸ್ಥಾನದಲ್ಲಿ

ನಿರ್ಮಿತವಾದುವು. ಅವನ ಇಬ್ಬರು ಮಕ್ಕಳ ನಡುವಣ ಉತ್ತರಾಧಿಕಾರದ ಯುದ್ಧದಿಂದ ದಕ್ಷಿಣದ ಈ ಕೊಳ್ಳೆಕಾರರಿಗೆ ರಜಪೂತ ದೊರೆಗಳ ಆಂತರಿಕ ವ್ಯವಹಾರಗಳಲ್ಲಿ ತಲೆಹಾಕಿ ತೀರ್ಪುಕೊಡಲು ಮತ್ತೊಂದು ಅವಕಾಶವೊದಗಿತು. ನಿಷೇಧಕ ಜೈಸಲ್ಮೇರ್ ಮತ್ತು ಬಿಕನೀರ್ ಹಾಗೂ ತಕ್ಕಮಟ್ಟಿಗೆ ಜೋಧ್‌ಪುರ ಬಿನಾ, ಮರಾಠರು ಇಡೀ ರಾಜಾಸ್ಥಾನ ವನ್ನು ಹೊಕ್ಕು ಲೂಟಿ ಮಾಡಿದರು.

1755ರ ಹೊತ್ತಿಗೆ ಅವರು ಮುಘಲರ ಪ್ರಾಂತೀಯ ಅಧಿಕಾರದ ಪ್ರಮುಖ ನೆಲೆಯಾದ ಅಜ್ಮೀರನ್ನು ವಶಪಡಿಸಿಕೊಂಡರು. ಮರಾಠರು ಅಜ್ಮೀರದ ಘನತೆಯನ್ನು ಮರಳಿಸಲು ಯತ್ನಿಸಿದರು. ಆದರೆ ಯಶಸ್ವಿಯಾಗಲಿಲ್ಲ. ಅವರ ಸೈನ್ಯಗಳು ಚೌತ್, ಟಂಕರ್ ಮತ್ತಿತರ ತೆರಿಗೆಗಳ ವಸೂಲಿಗಾಗಿ ಮತ್ತೆ ಮತ್ತೆ ರಜಪೂತ ದೊರೆಗಳ ಮೇಲೆ ಆಕ್ರಮಣ ಮಾಡಬೇಕಾಯಿತು. ಮರಾಠರು ನಡೆಸಿದ ಘೋರ ಅತ್ಯಾಚಾರ ಗಳು ರಾಜಸ್ಥಾನಕ್ಕೆ ವಿನಾಶವನ್ನೂ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಜೀವನದಲ್ಲಿ ಅವನತಿಯನ್ನೂ ತಂದುವು.

ತಮ್ಮ ದಂಡನಾಯಕರಾದ ಮಬ್ದಾಜಿ, ಲಕ್ವದಾದ ಮತ್ತು ಅಂಬಾಜಿಯರ ಕೈಕೆಳಗೆ ಮರಾಠರು ರಾಜಾಸ್ಥಾನಕ್ಕೆ ಅನೇಕ ಸಲ ದಂಡಯಾತ್ರೆ ನಡೆಸಿದರು; ಕೆಲವೊಮ್ಮೆ ದೊರೆಗಳನ್ನು ವಾಸ್ತವವಾಗಿ ಒತ್ತೆಯಾಳುಗಳನ್ನಾಗಿ ಹಿಡಿದರು. ಉದಯಪುರದ ಮಹಾರಾಣ ಕುಂಭಾಲ್‌ಗಢದಿಂದ ಬಂದ ತನ್ನ ಎದುರಾಳಿ ಹಾಗೂ ಮೇವಾರ ಸಿಂಹಾಸನ ಸ್ಪರ್ಧಿಯನ್ನು ಹೊರಹಾಕುವುದರಲ್ಲಿ ಸಮರ್ಥನಾದ. ಈ ವಿಜಯ ಮರಾಠ ಸಹಾಯದಿಂದ ಸಾಧಿತವಾಯಿತು. ಅದು ಅತ್ಯಂತ ಮುಖ್ಯ ರಜಪೂತ ಸಂಸ್ಥಾನವಾದ ಮೇವಾರದ ಆಂತರಿಕ ವ್ಯವಹಾರಗಳಲ್ಲಿ ಮರಾಠರಿಗೆ ಅಭಿಪ್ರಾಯಾಧಿಕಾರವನ್ನಿತ್ತು. ರಾಜಾಸ್ಥಾನದಲ್ಲಿ ಮರಾಠ ಪ್ರಾಬಲ್ಯದ ತುತ್ತತುದಿಯನ್ನು ಅಂಕಿಸಿತು.

ಈ ಘಟನೆ ಮರಾಠರನ್ನು ಮತ್ತಷ್ಟು ಉದ್ಧತರನ್ನಾಗಿಸಿತು; ರಜಪೂತರು ಅವರ ಬಗೆಗೆ ಅತ್ಯಂತ ಕಹಿ ಭಾವನೆ ತಳೆದರು. ಆದರೂ, ತಮ್ಮ ನೈತಿಕ ಮತ್ತು ಸೈನಿಕ ಅವನತಿಯ ಸ್ಥಿತಿಯಲ್ಲಿ ರಜಪೂತರಿಗೆ ಮರಾಠರನ್ನು ತರಾಟೆಗೆ ತೆಗೆದುಕೊಳ್ಳುವ ಶಕ್ತಿಯಿರಲಿಲ್ಲ. ಆಳರಸರ ದೌರ್ಬಲ್ಯ ಮತ್ತು ಅಂತಃಪುರಗಳ ಒಳಸಂಚುಗಳು ಗೊಂದಲದ ಸ್ಥಿತಿಯನ್ನು ಇನ್ನಷ್ಟು ಕೆಡಿಸಿದುವಷ್ಟೆ.

1818ರ ವೇಳೆಗೆ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿ ರಾಜಾಸ್ಥಾನದ ಬಹುತೇಕ ಎಲ್ಲ ಸಂಸ್ಥಾನಗಳೊಡನೆ ಪೂರೈಸಿದ ಮೈತ್ರಿ ಒಪ್ಪಂದದಿಂದ ಮರಾಠರ ಅದೃಷ್ಟಗತಿ ಯಲ್ಲಿ ತಿರುವುಂಟಾಯಿತು. ಮರಾಠರ ಲೂಟಿಗಳು ಮತ್ತು ಅಮೀರ್‌ಖಾನನ ಕೈಕೆಳಗೆ ಪಿಂಡಾರಿ ಕೊಳ್ಳೆಗಳು ಮಿತಿಮೀರುವ ಮುನ್ನವೆ ಬ್ರಿಟಿಷ್ ರಕ್ಷಣೆ ರಜಪೂತ ಸಂಸ್ಥಾನಗಳಿಗೆ ಸ್ವಾಗತಾರ್ಹ ವರವಾಗಿ ಒದಗಿಬಂತು. ಆದರೆ ಅರ್ಥವೆಂದರೆ, ಮರಾಠರ ಮತ್ತು ಪಿಂಡಾರಿಗಳ ಭಯೋತ್ಪಾದನೆಯ ಅಂತ್ಯ ಮತ್ತು ಆಪಳಿತದಲ್ಲಿ ಸಂಪೂರ್ಣ ಆಂತರಿಕ ಸ್ವಾತಂತ್ರ್ಯ.

1818–57ರ ಅವಧಿ ರಾಜಾಸ್ಥಾನದ ಪಾಲಿಗೆ ಸಂಕ್ರಮಣ ಕಾಲವಾಗಿತ್ತು. ಅದು

ಅಜ್ಞಾನದ ಅಂಧಕಾರದಲ್ಲಿ ಬದುಕುತ್ತಿತ್ತು. ಈಗ ಅದು ಸಂಪರ್ಕಿಸಿದ ಪಾಶ್ಚಾತ್ಯ ನಾಗರಿಕತೆ ಅದರ ಹಳೆಯ ನಂಬಿಕೆಗಳಿಗೆ ತೀವ್ರವಾದ ಪೆಟ್ಟು ಕೊಟ್ಟಿತು. ನೂತನ ವ್ಯವಸ್ಥೆಯಲ್ಲಿ ರಜಪೂತರ ಕತ್ತಿ, ಗುರಾಣಿಗಳಿಗೆ ಅವಕಾಶ ಉಳಿಯಲಿಲ್ಲ; ನಡೆಯುತ್ತಿದ್ದ ಬದಲಾವಣೆಗಳು, ಸಂಸ್ಥಾನಗಳನ್ನಾಳುತ್ತಿದ್ದವರು ಅರ್ಥ ಮಾಡಿಕೊಳ್ಳಲಾಗದಷ್ಟು ತ್ವರಿತವಾಗಿದ್ದುವು. ರಜಪೂತ ದೊರೆಗಳು ಆಂಗ್ಲರನ್ನು ತಮ್ಮ ರಕ್ಷಕರೆಂದು ಪರಿಗಣಿಸಿದರು ಮತ್ತು ತಮ್ಮ ಗತವೈಭವದಲ್ಲಿ ಲಕ್ಷ್ಯವಿರಿಸಿದ್ದರು. ಬ್ರಿಟಿಷರ ವಿರುದ್ಧ ನಡೆದ 1857ರ ಬಂಡಾಯದಲ್ಲಿ ರಾಜಾಸ್ಥಾನದ ದೊರೆಗಳಾಗಲಿ ಜನರಾಗಲಿ ದಂಗೆಯಲ್ಲಿ ಪಾಲ್ಗೊಳ್ಳದುದಕ್ಕೆ ಈ ವಿಚಿತ್ರ ಪರಿಸ್ಥಿತಿಗಳ ಸಂಚಿತ ಪರಿಣಾಮವೇ ಕಾರಣ.

ರಜಪೂತ ಸಂಸ್ಥಾನಗಳ ಅರಸರು ನಿಷ್ಕ್ರಿಯರಾಗಿ ಅಥವಾ ಮೌನ ಪ್ರೇಕ್ಷಕರಾಗಿ ಉಳಿದಿದ್ದಂತಹ 1857ರ ಹೋರಾಟದ ನಿರ್ದಯ ದಮನದ ಬಳಿಕ, ಭಾರತ ಸರ್ಕಾರ ಪ್ರಭುತ್ವಕ್ಕೆ ವರ್ಗಾವಣೆಗೊಂಡಿತು; ರಕ್ಷಿತ ದೊರೆಗಳು ಸಾಮ್ರಾಜ್ಯರಕ್ಷಣೆಯಲ್ಲಿ ಭಾಗಿಗಳಾದರು. ಅವರ ಸ್ಥಾನ ಈಗ ಸುಭದ್ರವಾಗಿತ್ತು. ಆದರೆ ಅವರು ಇತರ ಸರ್ಕಾರಗಳೊಡನೆ ವ್ಯವಹರಿಸುವ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳಲಾಗಿತ್ತು. ಸಂಸ್ಥಾನಗಳ ಆಂತರಿಕ ಆಡಳಿತವನ್ನು ಕಾಲಕಾಲಕ್ಕೆ ಕೂಲಂಕಷವಾಗಿ ಪರೀಕ್ಷಿಸಿ, ಸುಧಾರಿಸಲಾಗುತ್ತಿತ್ತು. ಶತಮಾನಗಳ ಕಾಲ ಅಲಕ್ಷಿತವಾಗಿದ್ದ ಜನತೆಯ ಯೋಗಕ್ಷೇಮ ಸ್ವಲ್ಪ ಗಮನ ಸೆಳೆಯತೊಡಗಿತು.

ಬಹಳ ಹಿಂದೆಯೆ ಆಗಬೇಕಿದ್ದ ಈ ಸುಧಾರಣೆಗಳು ಜನರಲ್ಲಿ ಅವರ ಹಕ್ಕುಗಳ ಪ್ರಜ್ಞೆಯನ್ನುಂಟು ಮಾಡಿದುವು ಮತ್ತು ಪಕ್ಕದ ಬ್ರಿಟಿಷ್ ಸಂಸ್ಥಾನಗಳಿಗೆ ಸಮಾನಸ್ಕಂಧರಾಗಿರಬೇಕೆಂಬ ಅಭೀಪ್ಸೆಯನ್ನು ಎಚ್ಚರಿಸಿದುವು. ಜನತೆಯ ಅಶಾಂತಿ ಪ್ರಜಾಮಂಡಲಗಳ ಮೂಲಕ ಅಭಿವ್ಯಕ್ತವಾಯಿತು; ಮುಂದೆ, ರಜಪೂತ ಸಂಸ್ಥಾನಗಳನ್ನು ಮಹಾರಾಜರ ಮತ್ತು ಬ್ರಿಟಿಷ್ ಪ್ರಭುಗಳ ಇಮ್ಮಡಿ ಬಂಧನದಿಂದ ಬಿಡುಗಡೆಗೊಳಿಸಲು ಅವರು ಹೂಡಿದ ಚಳವಳಿ ಕ್ರಮೇಣ ಬೆಳೆಯಿತು.

ದೇಶಕ್ಕೆ ಸ್ವಾತಂತ್ರ್ಯ ಬಂದು, ಸಾರ್ವಭೌಮತ್ವ ಅಳಿದ ಮೇಲೆ ಈ ಆಸೆ ಈಡೇರಿತು. ಸರ್ದಾರ್ ವಲ್ಲಭಭಾಯಿ ಪಟೇಲ್ ಆರಂಭಿಸಿದ 'ರಕ್ತರಹಿತ ಕ್ರಾಂತಿ'ಯ ಪ್ರಕ್ರಿಯೆಯಲ್ಲಿ ರಜಪೂತ ಸಂಸ್ಥಾನಗಳ ಒಗ್ಗೂಡಿಕೆ ಎರಡು ವರ್ಷಗಳಿಗೂ ಕಡಮೆ ಅವಧಿಯಲ್ಲಿ ಹಂತಹಂತವಾಗಿ ಪೂರ್ಣವಾಯಿತು. 1949ರ ಮಾರ್ಚ್ 30ರಂದು ರಜಪೂತ ಸಂಸ್ಥಾನಗಳು ವಿಲೀನವಾಗಿ, ಭಾರತ ಗಣರಾಜ್ಯದ ಎರಡನೆಯ ವಿಶಾಲತಮ ರಾಜ್ಯ ರೂಪುಗೊಂಡಿತು.

## ಜನಾಂಗಿಕ ಮಾಹಿತಿ

ಭೌಗೋಳಿಕವಾಗಿ ರಾಜಾಸ್ಥಾನಕ್ಕಿಂತ ವೈವಿಧ್ಯಪೂರ್ಣವಾದ ಪ್ರದೇಶವೊಂದನ್ನು ಕಲ್ಪಿಸಿಕೊಳ್ಳುವುದು ಕಷ್ಟ: ಅದು, ಎತ್ತರವಾದ ಬಂಡೆಗಳ ಮತ್ತು ಉರುಳುವ ಮರಳ ದಿಬ್ಬಗಳ, ಸುಡುವ ಸೆಕೆಯ ಮತ್ತು ಹೆಪ್ಪುಗಟ್ಟಿಸುವ ಚಳಿಯ, ಫಲವತ್ತಾದ

ಮೈದಾನಗಳ ಹಾಗೂ ಆಳವಾದ ಕಮರಿಗಳ ಮತ್ತು ಕಾಡುಗಳ, ಪೂರ್ವದ ಭರತಪುರದಲ್ಲಿ ಚದರ ಕಿಲೋಮೀಟರ್‌ಗೆ 138 ಜನಸಾಂದ್ರತೆಯುಳ್ಳ ದಟ್ಟ ಜನಸಂಖ್ಯಾ ಪ್ರಾಂತಗಳ ಮತ್ತು ಅತೀವ ಪಶ್ಚಿಮದ ಜೈಸಲ್ಮೇರ್‌ದಲ್ಲಿ ಚದರ ಕಿಲೋಮೀಟರ್‌ಗೆ ನಾಲ್ಕರಷ್ಟು ಕಡಮೆ ಜನಸಾಂದ್ರತೆಯುಳ್ಳ ವಿರಳ ಜನಸಂಖ್ಯಾ ಖಂಡಗಳ ಪ್ರದೇಶ.

ಇಂಥ ವೈವಿಧ್ಯದ ಪ್ರದೇಶವೊಂದರಲ್ಲಿ, ಸಮ್ಮಿಲಿತವಾದ–ಆದರೆ ಏಕಕಾಲದಲ್ಲಿ ತಮ್ಮ ಸ್ಥಳೀಯ ವರ್ಣಗಳನ್ನುಳಿಸಿಕೊಂಡ–ಅನೇಕ ಸಾಮಾಜಿಕ ವಿನ್ಯಾಸಗಳ ಸಾಮಗ್ರ್ಯವೊಂದು ಅಸ್ತಿತ್ವದಲ್ಲಿರುವುದು ಸಹಜವೇ. ಹೆಸರೇ ಸೂಚಿಸುವಂತೆ, ರಾಜಾಸ್ಥಾನ ಹೆಮ್ಮೆಯ ರಜಪೂತರ ಪ್ರಾಂತ. ಅವರನ್ನು ಶೌರ್ಯದ ಮೂರ್ತಿ ರೂಪಗಳೆಂದು ಪರಿಗಣಿಸಲಾಗುತ್ತದೆ; ಯುದ್ಧಗಳಲ್ಲಿನ ಅವರ ಸಾಹಸ, ಧೈರ್ಯಗಳು ಐತಿಹ್ಯಗಳಾಗಿವೆ.

ಈ ಪ್ರದೇಶದ ಜನಸಂಖ್ಯೆಯನ್ನು ದಶವಾರ್ಷಿಕ ಎಣಿಕೆ 1971ರಲ್ಲಿ 2,57,65,806 ಎಂದು ಗೊತ್ತು ಮಾಡಿತು. ಜನಸಂಖ್ಯಾ ವಿತರಣೆ ನಗರಪ್ರದೇಶಗಳಿಗಿಂತ ಗ್ರಾಮಾಂತರ ಪ್ರದೇಶಗಳ ಸ್ಪಷ್ಟ ಮೇಲುಗೈಯನ್ನು ತೋರಿಸಿತು; ಎರಡನೆಯದು ಒಟ್ಟಿನ ಶೇ. 84ರಷ್ಟಿತ್ತು.

ಅಖಿಲ ಭಾರತ ಕಣ್ಣಲೆಯೊಂದರಲ್ಲಿ, ಪರಿಶಿಷ್ಟ ಬುಡಕಟ್ಟುಗಳ ಆವಾಸವಾಗಿ ರಾಜಾಸ್ಥಾನ ಆರನೆಯ ಸ್ಥಾನ ಪಡೆಯುತ್ತದೆ. ಅವು ದೇಶದ ಇತರ ಭಾಗಗಳ ಅನುಪಾತವಾದ ಶೇ 6.87ಕ್ಕೆದುರಾಗಿ ರಾಜ್ಯದ ಒಟ್ಟು ಜನಸಂಖ್ಯೆಯ ಶೇ. 11,02ರಷ್ಟಿವೆ.

ಬಹುಶಃ ಇಂದಿಗೂ ರಾಜಾಸ್ಥಾನದ ಅತ್ಯುತ್ತಮ ಇತಿಹಾಸಕಾರನಾದ ಜೇಮ್ಸ್ ಟಾಡ್ ರಜಪೂತರನ್ನು ಸಿಥಿಯನ್ ಮೂಲದವರೆಂದು ನಂಬಿದ; ಅದು, ಮಧ್ಯ ಏಷ್ಯಾದಲ್ಲಿ ಕಾಕಸಸ್‌ನಿಂದ ಒಂದು ಕಡೆ ಸಿಂಧೂ ಕಣಿವೆಯತ್ತ ಮತ್ತು ಇನ್ನೊಂದು ಕಡೆ ಯೂರೋಪಿನ ಜರ್ಮನಿಕ್ ಭಾಗಗಳತ್ತ ಚಲಿಸಿದ ಬುಡಕಟ್ಟು. ಸೈನಿಕ ಶೌರ್ಯ ಮತ್ತು ರಾಜಕೀಯ ವಿವೇಕದಿಂದ ಪ್ರಾಮುಖ್ಯಕ್ಕೇರಿದ ನಾಡಿನ ಈ ಆಳುವ ಜನಾಂಗವನ್ನು ಒತ್ತಟ್ಟಿಗಿರಿಸಿ ನೋಡಿದರೆ, ಪ್ರಾಚೀನ ನಿವಾಸಿಗಳು ಭಿಲ್ಲರು ಮತ್ತು ಮೀನರು; ಅವರು ಅತ್ಯಂತ ಪ್ರಮುಖ ಪರಿಶಿಷ್ಟ ಬುಡಕಟ್ಟುಗಳಲ್ಲಿ ಎರಡಾಗಿದ್ದು, ರಾಜ್ಯದ ಪರಿಶಿಷ್ಟ ಬುಡಕಟ್ಟುಗಳ ಒಟ್ಟು ಜನಸಂಖ್ಯೆಯ –31,25,506–ಶೇ39.26 ಮತ್ತು ಶೇ50.08 ರಷ್ಟಿದ್ದಾರೆ. ಭಿಲ್ಲರು ಬಹುತೇಕ ಉದಯಪುರ, ದುಂಗರಪುರ ಮತ್ತು ಬನಸ್ವರಗಳ ಗುಡ್ಡಗಾಡು ಜಿಲ್ಲೆಗಳಲ್ಲಿ ಜಿಲ್ಲೆಗಳಲ್ಲಿ ಕೇಂದ್ರೀಕೃತರಾಗಿದ್ದಾರೆ; ಮೀನರು ಮುಖ್ಯವಾಗಿ ಜಯಪುರ, ಸವಾಯಿ, ಮಧೋಪುರ ಮತ್ತು ಉದಯಪುರ ಜಿಲ್ಲೆಗಳಲ್ಲಿ ನೆಲೆಗೊಂಡಿದ್ದಾರೆ.

ಇತರ ಪ್ರಮುಖ ಪರಿಶಿಷ್ಟ ಬುಡಕಟ್ಟುಗಳಲ್ಲಿ, ಗರಸಿಯ ಮತ್ತು ಸಹ್ರಿಯ ಜನರ ಕೊಡುಗೆ ಪರಿಶಿಷ್ಟ ಬುಡಕಟ್ಟು ಜನಸಂಖ್ಯೆಗೆ ಕ್ರಮವಾಗಿ ಸು.ಶೇ. 3 ಮತ್ತು 4ರಷ್ಟು. ಗರಸಿಯುಗಳು ಪಲಿ ಮತ್ತು ಸಿರೊಹಿ ಜಿಲ್ಲೆಗಳಲ್ಲಿ ಕೇಂದ್ರೀಕೃತವಾಗಿದ್ದರೆ,

ಸಹ್ರಿಯಗಳು ಕೋಟ ಜಿಲ್ಲೆಯ ಎರಡು ತಹಶೀಲುಗಳಿಗೆ ಸೀಮಿತವಾಗಿದ್ದಾರೆ.

ಮೀನರು ಸಂಖ್ಯೆಯ ದೃಷ್ಟಿಯಿಂದ ಅಧಿಕವಾಗಿದ್ದರೂ, ಭಿಲ್ಲರು ರಾಜ್ಯದಲ್ಲಿ ಅತ್ಯಂತ ಮಹತ್ವಪೂರ್ಣ ಬುಡಕಟ್ಟು ಗುಂಪಾಗಿದ್ದಾರೆ. ಅತ್ಯಂತ ಹಿಂದುಳಿದ ಗುಂಪೆಂದರೆ ಸಹ್ರಿಯಗಳು. ರಾಜಸ್ಥಾನದ ಪರಿಶಿಷ್ಟ ಬುಡಕಟ್ಟುಗಳೆಲ್ಲ ಹಿಂದೂ ಸಾಮಾಜಿಕ ವ್ಯವಸ್ಥೆಯಲ್ಲಿ ಅಂತರ್ಗತವಾಗಿವೆ.

1971ರ ಜನಗಣತಿಯ ಪ್ರಕಾರ, ರಾಜ್ಯದ ಪರಿಶಿಷ್ಟ ಜಾತಿಗಳ ಜನಸಂಖ್ಯೆ 40,75, 580;ಅದು ಒಟ್ಟು ಜನಸಂಖ್ಯೆಯ ಶೇ 17ರಷ್ಟು. ಈ ಶೇಕಡಾವಾರು 14.67ರಷ್ಟಿರುವ ಅಖಿಲ ಭಾರತ ಶೇಕಡಾವಾರಿಗಿಂತ ಅಧಿಕ.

ಪರಿಶಿಷ್ಟ ಜಾತಿಗಳು ರಾಜ್ಯಾದ್ಯಂತ ಹರಡಿಹೋಗಿವೆ; ಆದರೆ ಉಚ್ಚತಮ ಕೇಂದ್ರೀಕರಣ ಜಯಪುರದಲ್ಲೂ ನ್ಯೂನತಮ ಕೇಂದ್ರೀಕರಣ ದುಂಗರ್‌ಪುರ್ ಜಿಲ್ಲೆಯಲ್ಲೂ ಉಂಟು. ಒಟ್ಟಿಗೆ ತೆಗೆದುಕೊಂಡರೆ, ಪರಿಶಿಷ್ಟ ಬುಡಕಟ್ಟು ಮತ್ತು ಜಾತಿಗಳು ರಾಜ್ಯದ ಒಟ್ಟು ಜನಸಂಖ್ಯೆಯ ಶೇ 28.13ರಷ್ಟಾಗುತ್ತವೆ. ಒಂದು ಗಮನಾರ್ಹ ಲಕ್ಷಣವೆಂದರೆ, ಪರಿಶಿಷ್ಟ ಬುಡಕಟ್ಟುಗಳ ಬೆಳವಣಿಗೆಯು ಸಾರ್ವತ್ರಿಕ ಜನಸಂಖ್ಯೆಯದಕ್ಕಿಂತ ಕಡಮೆಯಿದ್ದರೆ, ಪರಶಿಷ್ಟ ಜಾತಿಗಳ ಬೆಳವಣಿಗೆಯ ಪ್ರಮಾಣ ಅದನ್ನು ಮೀರಿದೆ. ಶೇ 26.2ರಷ್ಟು ಸಾರ್ವತ್ರಿಕ ಬೆಳವಣಿಗೆಯ ಪ್ರಮಾಣಕ್ಕೆ ವಿರುದ್ಧವಾಗಿ ಬುಡಕಟ್ಟು ಜನತೆ ಶೇ 13.16ರ ಪ್ರಮಾಣದಲ್ಲಿ ಮತ್ತು ಪರಿಶಿಷ್ಟ ಜಾತಿಗಳು ಶೇ. 34.27ರ ಪ್ರಮಾಣದಲ್ಲಿ ವೃದ್ಧಿಸುತ್ತಿವೆ.

ದೇಶದ ಮತ್ತು ಪ್ರಪಂಚದ ನಿರಂತರ ಪರಿವರ್ತನೆಗಳು ಹಳೆಯ ಜಾತಿಪದ್ಧತಿಯನ್ನು ನಿಸ್ಸಂಶಯವಾಗಿ ಅಲುಗಾಡಿಸಿವೆ; ಆದರೆ ಅದರ ಅವಶೇಷಗಳು, ರೂಢಿಯೆ ರಾಜನಾಗಿರುವ ಈ ಪ್ರದೇಶದಲ್ಲಿ ಇನ್ನೂ ಉಳಿದುಕೊಂಡಿವೆ. ರಾಜಸ್ಥಾನದ ಸಮಾಜದ ಸಂಕೀರ್ಣ ನೆಯ್ಗೆಗೆ ಅತ್ಯುತ್ತಮ ಮಾರ್ಗದರ್ಶಿಯೆಂದರೆ, 'ರಾಜಸ್ಥಾನ್ ಕಿ ಜಾತಿಯನ್'[1];ಅದು ಎಂಟು ವಿಶಾಲ ಶೀರ್ಷಿಕೆಗಳಲ್ಲಿ ಸಮಾಜವನ್ನು ಜಾತಿಗಳು, ಉಪಜಾತಿಗಳು ಮತ್ತು ಪಂಗಡಗಳನ್ನಾಗಿ ವಿಂಗಡಿಸುತ್ತದೆ.

ಪ್ರಾಚೀನ ವಂಶಸ್ಥರೆಂದೂ ಉದಾತ್ತ ಕುಲೀನರೆಂದೂ ಹೇಳಿಕೊಳ್ಳುವ ಯೋಧಪ್ರವೃತ್ತಿಯ ರಜಪೂತರು ಸಿಸೋಡಿಯ, ರಾಠೋರ್, ಚೌಹಾನ್, ಕಚವಹ, ಭಟ್ಟಿ, ಪನ್ವಾರ್, ಸೋಲಂಕಿ ಮುಂತಾದ ಪ್ರಸಿದ್ಧ ಪಂಗಡಗಳಿಗೆ ಸೇರಿರುವುದು ಮಾತ್ರವಲ್ಲದೆ, 'ಮುಸಲ್ಮಾನ್ ರಜಪೂತರು' ಅಥವಾ 'ಮುಸಲ್ಮಾನ್ ಸಿಪಾಹಿಗಳು' ಎಂಬ ಶಾಖೆಗಳನ್ನುಳ್ಳವರಾಗಿದ್ದಾರೆ. 1193–1684ರ ನಡುವೆ ಇಸ್ಲಾಂ ಮತಕ್ಕೆ ಸೇರುವಂತೆ ಬಲಾತ್ಕರಿಸಲಾದ ಭಟ್ಟಿ ರಜಪೂತರನ್ನು ಸಿಂಧಿ ಸಿಪಾಹಿಗಳೆಂದು ಕರೆಯಲಾಗುತ್ತಿತ್ತು; ಸುಮಾರು 1383ರಲ್ಲಿ ಈ ಪರಿವರ್ತನೆಗೆ ಗುರಿಯಾದ ಚೌಹಾನರು ಶೇಖವಟಿ ಮತ್ತು ನಾಗೌರ್ ಪ್ರದೇಶಗಳಲ್ಲಿ ಕೈಮಖಾನಿ ಎಂಬ ದೊಡ್ಡ ಗುಂಪೊಂದನ್ನು ರೂಪಿಸಿದರು.

---

[1] ಬಜರಂಗ್ ಲಾಲ್ ಲೋಹಿಯ, 'ರಾಜಸ್ಥಾನ್ ಕಿ ಜಾತಿಯನ್', ಕಲ್ಕತ್ತ, 1954.

ಹಿಂದೆ ಹೇಳಿದ ಪುಸ್ತಕ 1891ರ ಜನಗಣತಿ ವರದಿಯ ಅಪರೂಪದ ಪ್ರತಿಯೊಂದರ ಆಧಾರದ ಮೇಲೆ ಸಂಕಲಿತವಾಗಿದ್ದು, ರಾಜ್ಯದ ಪಶ್ಚಿಮಭಾಗದ ನಿವಾಸಿಗಳ ಮೇಲೆ ಮುಖ್ಯವಾಗಿ ಕೇಂದ್ರೀಕೃತವಾಗಿದೆ. ರಜಪೂತರ ಮತ್ತು ಮುಸ್ಲಿಮರ ಜೊತೆಗೆ ಅದು 'ಚಾರಣರು ಮತ್ತು ವಂದಿಮಾಗಧ ಕುಲಗಳು' ಎಂಬ ಶೀರ್ಷಿಕೆಯಡಿಯಲ್ಲಿ ಕಡೆಯ ಪಕ್ಷ ಬ್ರಾಹ್ಮಣರ 34 ಜಾತಿ ಮತ್ತು ಉಪಜಾತಿಗಳನ್ನು ಹೆಸರಿಸುತ್ತದೆ; ಅವರಲ್ಲಿ, ರಜಪೂತರ ಮಿತ್ರ, ಮಾರ್ಗದರ್ಶಿ ಮತ್ತು ದಾರ್ಶನಿಕನಾದ ಚಾರಣ್ ಹಾಗೂ ತನ್ನ ಆಶ್ರಯದಾತರ ವಂಶವೃಕ್ಷ ಹಾಗೂ ಇತರ ಕಾಲಾನುಪೂರ್ವಿ ದಾಖಲೆಗಳನ್ನು ರಕ್ಷಿಸುವ ಭಟ್ ಇದ್ದಾರೆ.

ರಾಜಾಸ್ಥಾನದಲ್ಲಿ 'ಲೇಖಕರು ಮತ್ತು ಇತಿವೃತ್ತಕಾರರು' ಎಂದು ವರ್ಗೀಕರಿಸಲಾದ ಎಂಟು ಕುಲಗಳಿವೆ. ಕಾಯಸ್ಥರು ಮತ್ತು ಖತ್ರಿಗಳ ಜೊತೆಗೆ ಈ ಪಟ್ಟಿ ಅಸ್ವಾಲರು, ಮೊಹ್ನಾಟರು, ಭಂಡಾರಿಗಳು, ಸಿಂಘಿಗಳು, ಲೋಢರು ಮತ್ತು ಮೊಹತರನ್ನು ಒಳಗೊಳ್ಳುತ್ತದೆ; ಅವುಗಳ ಸದಸ್ಯರಲ್ಲಿ ಅನೇಕರು ವ್ಯಾಪಾರ, ಕೈಗಾರಿಕೆಗಳಲ್ಲಿ, ಅಂತೆಯೆ ಆಡಳಿತದಲ್ಲಿ ಪ್ರಸಿದ್ಧರಾಗಿದ್ದಾರೆ.

ಕಡೆಯ ಪಕ್ಷ ಏಳು ಕುಲಗಳು–ಧೋಲಿ, ಧಧಿ, ಹಿಂಜರ, ಜಗ್ರಿ–ಪತುರ್, ಭಗ್ತನ್, ಕಲವತ್ ಮತ್ತು ಭಂದ್–'ಗಾಯಕರು ಮತ್ತು ವಾದ್ಯ ಸಂಗೀತಗಾರರು' ಎಂಬ ಗುಂಪಿಗೆ ಸೇರಿಸಲ್ಪಟ್ಟಿವೆ. ಅವರಲ್ಲಿ, ಹಿಂಜರರು, ಕಲವತರು ಮತ್ತು ಭಂದರು ಮನೋರಂಜಕರೂ ವಿದೂಷಕರೂ ಹಾಸ್ಯಗಾರರೂ ಆಗಿದ್ದಾರೆ.

ಮಾರವಾಡಿಗಳೆಂದು ಸಾಮಾನ್ಯವಾಗಿ ಕರೆಯಲಾಗುವ ವ್ಯಾಪಾರಿ ಜನಾಂಗಗಳು ಇವರನ್ನೂ ಒಳಗೊಳ್ಳುತ್ತವೆ: ಮಹಾಜನ, ಸರವಾಗಿ, ಪೋರವಾಲ, ಶ್ರೀಮಾಲ, ಶ್ರೀಶ್ರೀಮಾಲ, ಅಗರವಾಲ, ಮಹೇಶ್ವರಿ, ವಿಜಯವರ್ಗೀಯ, ಸುನ್ನಾ, ಬೋಹ್ರಾ, ಫರಿವಾಲ, ಬಾಲ್ದಿಯ ಮತ್ತು ಲೋಹಿಯ.

ದೀರ್ಘತಮ ಪಟ್ಟಿಯೆಂದರೆ ಕುಶಲಕರ್ಮಿಗಳ ವರ್ಗಗಳು: ಅವು ಸೇವಕ ವರ್ಗಗಳನ್ನು ಒಳಗೊಳ್ಳುತ್ತವೆ. ಬಡಗಿಗಳು, ನಾಯಿಂದರು, ದರ್ಜಿಗಳು, ಕಮ್ಮಾರರು, ಪಾತ್ರೆ ತಯಾರಕರು, ವಸ್ತ್ರ–ಮುದ್ರಕರು, ಬಣ್ಣಗಾರರು, ಪಟವಾರಿಗಳು, ಮಗ್ಗದವರು, ಅಗಸರು, ಕುಂಬಾರರು, ಮೋಚಿಗಳು, ಜಲಗಾರರು, ಕಲ್ಲುಕುಟಿಕರು, 'ನಾಟರು', 'ಸನ್ಸಿ'ಗಳು, 'ಬಾದ್ರಿ'ಗಳು ಮತ್ತು ಇತರ ನೂರಾರು ಕೆಲಸಗಾರರು ಈ ಪಟ್ಟಿಗೆ ಸೇರುತ್ತಾರೆ ಮತ್ತು ಗ್ರಾಮೀಣ ರಾಜಾಸ್ಥಾನದಲ್ಲಿ ಯಾವ ಬದುಕು ಯುಗಯುಗಗಳಿಂದಲೂ ಬಂದಿದೆಯೊ ಅದನ್ನುಳಿಸಲು ತಮ್ಮ ಕೊಡುಗೆಯನ್ನೀಯುತ್ತಾರೆ.

## ಬುಡಕಟ್ಟು ನೆಲೆಗಳು

ಉದಯಪುರದ ಬುಡಕಟ್ಟು ಸಂಶೋಧನ ಸಂಸ್ಥೆ ನಡೆಸಿದ ಒಂದು ಮಾಹಿತಿಯುಕ್ತ ಅಧ್ಯಯನದ[1] ಪ್ರಕಾರ, ರಾಜಾಸ್ಥಾನದ ಬುಡಕಟ್ಟುಗಳ ಜನಸಂಖ್ಯೆಯನ್ನು

[1] ವ್ಯಾಸ್, ಎನ್.ಎನ್. ಮತ್ತು ಚೌಧುರಿ, ಎನ್.ಡಿ. *Tribal Past and Present*, Udaipur, 1968.

ಹೀಗೆ ವರ್ಗೀಕರಿಸಬಹುದು:

ಪರಿಶಿಷ್ಟ ಪ್ರದೇಶ: ಇದು ದುಂಗರ್‌ಪುರ್, ಬನ್‌ಸ್ವಾರ, ಮತ್ತು ಚಿತ್ತೂರ್‌ಗಡ್ ಜಿಲ್ಲೆಯ ಪ್ರತಾಪಗಡ್ ತಹಶೀಲನ್ನು ಒಳಗೊಂಡು, 3,666 ಚದರ ಕಿಲೋಮೀಟರುಗಳ ಪ್ರದೇಶವನ್ನು ವ್ಯಾಪಿಸುತ್ತದೆ; ಅದರ ಪರಿಶಿಷ್ಟ ಬುಡಕಟ್ಟು ಜನಸಂಖ್ಯೆ 5.75 ಲಕ್ಷ.

ಅತಿ ಸಾಂದ್ರೀಕೃತ ಬುಡಕಟ್ಟು ಪ್ರದೇಶ: ಇದು ಉದಯಪುರ ಜಿಲ್ಲೆಯ ಖೇರ್‌ವಾರ, ಕೋತ್ರ, ಗೋಗುಂದ ಮತ್ತು ಫಲಾಸಿಯ ತಹಶೀಲುಗಳನ್ನೂ (ಶೇ. 28.56ರಷ್ಟು ಬುಡಕಟ್ಟು ಜನಸಂಖ್ಯೆ) ಸಿರೋಹಿ ಜಿಲ್ಲೆಯ ಅಬುಮಾರ್ಗ ತಹಶೀಲನ್ನೂ (ಶೇ 21.02ರಷ್ಟು ಬುಡಕಟ್ಟು ಜನಸಂಖ್ಯೆ), ಚಿತ್ತೂರ್‌ಗಡ್ ಜಿಲ್ಲೆಯ ಅಚ್ನೆರ ಹಾಗೂ ಅರ್ನೋಡ್ ಪಂಚಾಯತ್ ಸಮಿತಿಗಳನ್ನೂ (ಶೇ. 21.9ರಷ್ಟು ಬುಡಕಟ್ಟು ಜನಸಂಖ್ಯೆ) ಒಳಗೊಳ್ಳುತ್ತದೆ.

ವಿರಳ ಜನಸಂಖ್ಯೆಯ ಬುಡಕಟ್ಟು ಪ್ರದೇಶ; ಈ ಪ್ರದೇಶದಲ್ಲಿ ಬುಡಕಟ್ಟಿಗೆ ಹೊರತಾದ ಜನಸಂಖ್ಯೆ ಪ್ರಧಾನ. ಅದು ಟೋಂಕ್, ಭಿಲ್ವಾರ ಮತ್ತು ಅಲ್ವರ್ ಜಿಲ್ಲೆಗಳನ್ನೊಳಗೊಳ್ಳುತ್ತದೆ. ಅಲ್ಲಿ ಬುಡಕಟ್ಟುಗಳು ಕ್ರಮವಾಗಿ ಒಟ್ಟು ಜನಸಂಖ್ಯೆಯ ಶೇ. 11.39, 9.38, ಮತ್ತು 8.11ರಷ್ಟಾಗುತ್ತವೆ.

ಹೀಗಾಗಿ, ರಾಜಾಸ್ಥಾನದ ಬುಡಕಟ್ಟು ಜನಸಂಖ್ಯೆ ಉದಯಪುರ, ದುಂಗರ್‌ಪುರ, ಚಿತ್ತೂರ್‌ಗಡ್ ಮತ್ತು ಬನ್‌ಸ್ವಾರ ಜಿಲ್ಲೆಗಳ ಮೂಲಕ ಸಿರೋಹಿಯಿಂದ ಬುಂಡಿ, ಕೋಟ, ಸವಾಯಿ ಮಧೋಪುರ್ ಮತ್ತು ಜಯಪುರ್ ಜಿಲ್ಲೆಗಳಿಗೆ ಹರಿಯುವ ಭೂಪಟ್ಟಿಗಳಲ್ಲಿ ಕೇಂದ್ರೀಕೃತವಾಗಿದೆ. ಬನ್‌ಸ್ವಾರ, ದುಂಗರ್‌ಪುರ್ ಮತ್ತು ಸಿರೋಹಿ ಗಡಿಗಳು ಗುಜರಾತ್ ರಾಜ್ಯದ ಸಬಯ್‌ಕಂಠ, ಬನಸ್‌ಕಂಠ ಮತ್ತು ಪಂಚಮಹಲ್ ಜಿಲ್ಲೆಗಳಲ್ಲಿ ಸಂಧಿಸುತ್ತವೆ; ಕೋಟ ಜಿಲ್ಲೆಯ ಷಹಬಾದ್ ಮತ್ತು ಕಿಪ್ಷನ್‌ಗಂಜ್ ತಹಶೀಲುಗಳು, ಮಧ್ಯಪ್ರದೇಶದೊಡನೆ ಸಮಾನ ಮೇರೆಯನ್ನು ರೂಪಿಸುತ್ತವೆ.

'ವನಪುತ್ರ'ರೆಂದು ಜೇಮ್ಸ್ ಟಾಡ್ ಕರೆಯುವ ಭಿಲ್ಲರು ಅಲೆಮಾರಿಗಳಲ್ಲ. ಅವರು ತಮ್ಮ ಜನ್ಮಸ್ಥಳಕ್ಕೆ ತಮ್ಮ ಪರ್ವತಾರಣ್ಯಗಳ ಮರ, ಬಂಡೆಗಳಷ್ಟೆ ಭದ್ರವಾಗಿ ಅಂಟಿಕೊಳ್ಳುತ್ತಾರೆ. ಇಡೀ ಭಿಲ್ ಪ್ರಾಂತ, ರಾಜಾಸ್ಥಾನದ ನೈರುತ್ಯ ಭಾಗ, ಅರಾವಳಿಗಳ ಅತ್ಯಂತ ಅರಣ್ಯಮಯ ಪ್ರದೇಶಕ್ಕೆ ತಾಗಿಕೊಂಡು, ಬೆಟ್ಟಗಳ ಬೀಡಾಗಿದೆ. ಚದುರಿದ ಕೊಪ್ಪಲುಗಳ ಬದುಕಿಗೆ ಒಗ್ಗಿಕೊಂಡಿರುವ ಭಿಲ್ಲರು ಬೆಟ್ಟಗಳಲ್ಲಿ 'ಪಲ್' ಅಥವಾ ಬಿಡಿ ಗುಡಿಸಲುಗಳ ಗುಂಪುಗಳಲ್ಲಿ ವಾಸಿಸುತ್ತಾರೆ; ಪ್ರತಿಯೊಂದು ಗುಡಿಸಲು ಕೃಷಿ ಭೂಮಿಯ ಮಡಿಯ ನಡುವಣ ಸಣ್ಣ ದಿಣ್ಣೆಯೊಂದರ ಮೇಲಿರುತ್ತದೆ. ನೆಲೆ ಅಥವಾ 'ಪಲ್' ಸಾಮಾನ್ಯವಾಗಿ ಹಲವಾರು 'ಪರ' ಅಥವಾ 'ಫಲ'ಗಳಾಗಿ ವಿಭಜಿತವಾಗಿರುತ್ತದೆ; ಅದರ ಸುತ್ತ ಬೆಟ್ಟಗಳ ಮೇಲೆ ಕಾಡಿದ್ದು, ಆಕ್ರಮಣದ ಸಂದರ್ಭದಲ್ಲಿ ಮುಸುಕು ಮತ್ತು ರಕ್ಷಣೆಯನ್ನೊದಗಿಸುತ್ತದೆ. ಏಕೈಕ ಆವರಣದೊಳಗಿರುವ ಗುಡಿಸಲುಗಳ ಗುಂಪೊಂದು ರಾಜಾಸ್ಥಾನದಲ್ಲಿ ಪ್ರಾತಿನಿಧಿಕ ಭಿಲ್ ವಾಸಸ್ಥಾನವಾಗುತ್ತದೆ; ಆ ಗುಡಿಸಲುಗಳಲ್ಲಿ ಕೆಲವು ವಾಸದ

ಮನೆಗಳಾಗಿದ್ದರೆ, ಉಳಿದವು ತುರುಹಟ್ಟಿಗಳೊ ದವಸದ ಉಗ್ರಾಣಗಳೊ ಆಗಿರುತ್ತವೆ.[1]

ಗರಾಸಿಯ ನೆಲೆ ಕೂಡ ಬೇರೆಡೆಯ ಪ್ರಾತಿನಿಧಿಕ ಭಾರತೀಯ ಹಳ್ಳಿಯಲ್ಲಿರುವಂತೆ ಮನೆಗಳ ಗುಂಪಲ್ಲ. ವಾಸಸ್ಥಾನಗಳು ಬೆಟ್ಟ ಗುಡ್ಡಗಳ ಇಳಿಜಾರುಗಳ ಮೇಲೆ ಚದುರಿಹೋಗಿದ್ದು, ಹೊಲಗಳು ಅವುಗಳ ಮುಂದೆ ವಿಸ್ತರಿಸುತ್ತವೆ. ಬಿದಿರು ಮತ್ತು ಎಲೆಗಳಿಂದ ನಿರ್ಮಿಸಿದ ಮತ್ತು ಸಗಣಿ ಗಿಲಾವು ಮಾಡಿದ ಈ ಒಂಟಿ ವಾಸಸ್ಥಾನಗಳು ಸಾಮಾನ್ಯವಾಗಿ ಬಹಳ ಅಂದವಾಗಿ ಚೊಕ್ಕಟವಾಗಿರುತ್ತವೆ.[2]

ರಾಜಾಸ್ಥಾನದ ಬುಡಕಟ್ಟು ಜನಸಂಖ್ಯೆಯಲ್ಲಿ ಹೆಚ್ಚು ಕಡಿಮೆ ಅರ್ಧದಷ್ಟಿರುವ ಮೀನರು ಬಂಡೆಯೆತ್ತರಗಳಲ್ಲಿ ಅಥವಾ ದಟ್ಟ ಕಾಡುಗಳಲ್ಲಿ ಬದುಕುತ್ತಿದ್ದರು; ಅವರ ನೆಲೆಗಳನ್ನು 'ಮೇವಸ' ಗಳೆಂದು ಕರೆಯಲಾಗುತ್ತಿತ್ತು.[3]

ಅವರ ಮನೆಗಳ ಗುಂಪನ್ನು 'ಪಲ್' ಎಂದೂ ಕರೆಯುತ್ತಿದ್ದರು; ಬಹುಪಾಲು ನಿವಾಸಿಗಳು ಸೇರಿದ ಗೋತ್ರವೊಂದರ ಹೆಸರನ್ನು ಅದಕ್ಕೆ ಕೊಡಲಾಗುತ್ತಿತ್ತು. ಆದರೂ ಜಯಪುರ್, ಸವಾಯಿ ಮಧೋಪುರ್ ಮತ್ತು ಟೊಂಕ್ ಜಿಲ್ಲೆಗಳ ಮೀನ ಹಳ್ಳಿಗಳ ನೆಲೆಗಳು, ಈಗ ಹಳ್ಳಿಯಲ್ಲಿನ ಇತರ ನೆಲೆಗಳಿಗಿಂತ ಬೇರೆಯಲ್ಲ. ಅವರ ಎರಡು ವರ್ಗಗಳಲ್ಲಿ, ಪುರಾನ ಬಸಿ ಮೀನರು ಬಹುತೇಕ ಕೃಷಿಕರಾಗಿದ್ದು, ಅವರಲ್ಲಿ ಕೆಲವರು ಅನುಕೂಲಸ್ಥರು; ಬಡವರೂ ತುಡುಗರೂ ಆದ ನಯಾ ಬಸಿಗಳು ಕೈಚಳಕದ ವೃತ್ತಿ ಬಾಂಧವ ವರ್ಗಕ್ಕೆ ಸೇರಿದವರಾಗಿದ್ದು, ಸ್ವಾತಂತ್ರ್ಯ ಪೂರ್ವದಲ್ಲಿ ಅವರನ್ನು ಅಪರಾಧಿ ಬುಡಕಟ್ಟು ಕಾಯಿದೆಯ ಪ್ರಕಾರ ಹತ್ತಿರದ ಪೊಲೀಸ್ ಠಾಣೆಯಲ್ಲಿ ನಿತ್ಯ ಹಾಜರಾತಿಗೆ ಗುರಿಪಡಿಸಲಾಗಿತ್ತು.

## ಸಾಂಸ್ಕೃತಿಕ ಸಂಕೀರ್ಣತೆ

ಶಿಲಾಯುಗದಷ್ಟು ಹಿಂದಕ್ಕೆ ಹೋಗುವ ಇತಿಹಾಸ, ಭಿಲ್ಲರು, ಮೀನರಂಥ ಅನೇಕ ಜನಾಂಗಗಳು, ಅಪಾರ ಸಂಖ್ಯೆಯ ಜಾತಿ, ಉಪಜಾತಿಗಳು, ಕುಶಲಕರ್ಮಿ ವರ್ಗಗಳು ಮತ್ತು ವರ್ತಕ ಶ್ರೇಣಿಗಳು–ಇವುಗಳಿಂದ ಕೂಡಿದ ರಾಜಾಸ್ಥಾನ ಅನೇಕ ರೀತಿಗಳಲ್ಲಿ ವಿಶಿಷ್ಟವಾದ ಸಾಂಸ್ಕೃತಿಕ ಸಂಕೀರ್ಣವೊಂದನ್ನು ಪ್ರಕಟಿಸುತ್ತದೆ. ಅನೇಕ ಸಂಸ್ಕೃತಿ ನಾಗರಿಕತೆಗಳ ಮಿಶ್ರಣವೂ ಮೂಲಭೂತವಾಗಿ ತನ್ನ ಸ್ಥಳೀಯ ಸಂಪ್ರದಾಯಗಳಲ್ಲಿ ಪ್ರಬಲವೂ ಆದ ಈ ಸಂಕೀರ್ಣದ ನಿರ್ಮಿತಿಯಲ್ಲಿ ಚರಿತ್ರೆ, ಭೂಗೋಳ ಎರಡೂ ಭಾಗವಹಿಸಿವೆ. ಆದಿಮ ರೂಢಿಗಳು ಊಳಿಗಮಾನ್ಯ ಪದ್ಧತಿಯ ನಾಗರಿಕತೆ ಮತ್ತು ಆಸ್ಥಾನಿಕ ರೀತಿನೀತಿಗಳೊಡನೆ ಬೆರೆಯುತ್ತವೆ. ಬುಡಕಟ್ಟು ಪ್ರಜಾಪ್ರಭುತ್ವ, ನಿರ್ದಯ

[1] *Scheduled Tribes of Rajasthan and their welfare,* Directorate of Social Welfare, Jaipur, 1961.
[2] ಅದೇ.
[3] ಸರಸ್ವತ್ ರೇವತ್ ಮತ್ತು ನಂದಾಲ, 'ಮೀನ ಇತಿಹಾಸ್', ಬಸ್ಸಿ, 1968.

ನಿರಂಕುಶ ಪ್ರಭುತ್ವ, ಉದಾರ ಸರ್ವಾಧಿಕಾರ, ಬಹುತಾಂತ್ರಿಕ ಕೌಶಲ, ವ್ಯವಹಾರ ಚಾತುರ್ಯ, ಮತ್ತು ಕೈಗಾರಿಕೋದ್ಯಮ ಎಲ್ಲವೂ ರಾಜಾಸ್ಥಾನದ ಇಂದಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ನೆಯ್ಗೆಗೆ ತಮ್ಮ ಕೊಡುಗೆಯನ್ನಿತ್ತಿವೆ.

ರಜಪೂತರು ತಮ್ಮ ಯುದ್ಧ ಹಾಗೂ ಸಾಹಸಗಳ ಪರಂಪರೆಯ ಜೊತೆಗೆ ಈಚಿನವರೆಗೂ ತಮ್ಮದಾಗಿದ್ದ ವಂಶ ಲಾಂಛನ ವಿದ್ಯೆಯ ಹಿರಿಮೆಯನ್ನೂ ತಮ್ಮ ಕುಲದ ಹೆಮ್ಮೆಯನ್ನೂ ಪ್ರಭುತ್ವ ವೈಭವವನ್ನೂ ಉಳಿಸಿಕೊಳ್ಳಬಯಸುತ್ತಾರೆ: ಸ್ವಾತಂತ್ರ್ಯಕ್ಕೆ ಮುನ್ನ, ಇಪ್ಪತ್ತು ರಾಜಪುಟಾಣ ರಾಜ್ಯಗಳಲ್ಲಿ ಹದಿನೇಳಕ್ಕೆ ರಜಪೂತ ಅರಸರಿದ್ದರು. ರಜಪೂತ ಪರಮಾಧಿಕಾರದ ದಿನಗಳಲ್ಲಿ ಬದುಕು ಹಿಂದಿನ ರಾಜ್ಯಗಳ ರಾಜಧಾನಿಗಳಲ್ಲಿನ ಆಸ್ಥಾನಗಳ ಮತ್ತು ಗ್ರಾಮೀಣ ಪ್ರದೇಶದ ಊಳಿಗಮಾನ್ಯ ಪದ್ಧತಿಯ ಕೋಟೆಗಳ ಸುತ್ತ ಕೇಂದ್ರೀಕೃತವಾಗಿತ್ತು. ಇದು, ರಾಜಾಸ್ಥಾನದ ರೀತಿನೀತಿಗಳ ಪರಿಚಯವಿಲ್ಲದವರಿಗೆ ವಿಚಿತ್ರವಾಗಿ ಕಾಣುವ ಕೆಲವು ಸಂಪ್ರದಾಯ ಗಳಿಗೆ ಮತ್ತು ವರ್ತನೆಯ ವಿನ್ಯಾಸಗಳಿಗೆ ವಿವರಣೆ ನೀಡುತ್ತದೆ. ಮಾತಿನಲ್ಲಿ ಮತ್ತು ಸಾಮಾಜಿಕ ಕೂಟಗಳಲ್ಲಿ ಆಸ್ಥಾನದ ರೀತಿ ರಜಪೂತರಿಗೆ ಸೀಮಿತವಾಗಿಲ್ಲ; ಉಚ್ಚತರ ಮತ್ತು ನಿಮ್ನತರ ಮಧ್ಯಮ ವರ್ಗಗಳಿಗೂ ಸಮಾನವಾಗಿದೆ; ರಜಪೂತ ಮುಖಂಡರೊಡನೆ ಮತ್ತು ಕುಲೀನರೊಡನೆ ಅವರ ದೀರ್ಘ ಮತ್ತು ಆನುವಂಶಿಕ ಸಾಹಚರ್ಯ ಅದಕ್ಕೆ ಕಾರಣ.

ರಜಪೂತ ದೊರೆಗಳ ಆತ್ಮಸಾಕ್ಷಿಯನ್ನು ಕಾಪಾಡುವ ಬ್ರಾಹ್ಮಣರು ಸಮುದಾಯದ ಒಂದು ಮುಖ್ಯ ಭಾಗವಾಗಿದ್ದಾರೆ. ಅವರು ಶೌರ್ಯಸಾಹಸಗಳ ಈ ನಾಡಿನಲ್ಲಿ ಧಾರ್ಮಿಕ ಉತ್ಸಾಹವನ್ನು ಉಚ್ಚಮಟ್ಟದಲ್ಲಿ ಉಳಿಸಿಕೊಂಡಿದ್ದಾರೆ. ಜೈನರದೂ ದೊಡ್ಡ ಪಂಗಡವೇ. ಅವರು ಈ ಪ್ರಾಂತದಲ್ಲಿ ಧಾರ್ಮಿಕ ಶಿಲ್ಪದ ಅತ್ಯುತ್ತಮ ಮಾದರಿಗಳಲ್ಲಿ ಕೆಲವನ್ನು ನಿರ್ಮಿಸಿದ್ದಾರೆ. ಅವರು, ಬ್ರಾಹ್ಮಣ ಮತ್ತು ವೈಶ್ಯರೊಡಗೂಡಿ, ಶುದ್ಧ ಸಸ್ಯಾಹಾರಿ ಜನಸಮುದಾಯದ ಏಕೈಕ ವರ್ಗದವರಾಗಿದ್ದಾರೆ; ರಾಜ್ಯದ ಉಳಿದ ಹಿಂದೂ ಜನಾಂಗಗಳೆಲ್ಲ–ರಜಪೂತರು, ಕಾಯಸ್ಥರು ಮತ್ತು ಗುಜರರು, ಅಸ್ಪೃಶ್ಯರು ಮತ್ತು ಬುಡಕಟ್ಟು ಜನ ಸೇರಿದಂತೆ–ಮಾಂಸಾಹಾರಿಗಳು.

ಭಾರತದಲ್ಲಿ ಕಂಡುಬರುವ ಪ್ರಮುಖ ಜಾತಿ,ಜನಾಂಗಗಳು ವಾಸಿಸುವ ರಾಜಾಸ್ಥಾನದಲ್ಲಿ ಈ ಪ್ರದೇಶಕ್ಕೆ ವಿಶಿಷ್ಟವಾದ ಕೆಲವು ಮತಗಳೂ ಜಾತಿ ಪಂಗಡಗಳೂ ಉಂಟು. ಇಂಥ ಒಂದು ಜಾತಿಯೆಂದರೆ, ದರೋಗ; ಅದು ಅರಸರಿಗೆ ಅಥವಾ ಅವರ ಜಹಗೀರುದಾರರಿಗೆ ಅವರು ಇಟ್ಟುಕೊಂಡ ಸ್ತ್ರೀಯರಲ್ಲಿ ಹುಟ್ಟಿದ ಸಂತಾನ. ಈ ಜಾತಿಯ ಹುಡುಗಿಯರು ರಜಪೂತರ ಹೆಣ್ಣುಮಕ್ಕಳ ವರದಕ್ಷಿಣೆಯ ಒಂದು ಭಾಗವಾಗಿದ್ದರು; ಇಡೀ ಜಾತಿ ಒಟ್ಟಿನ ಮೇಲೆ- ಅರೆ–ದಾಸ್ಯದಲ್ಲಿ ಬದುಕುತ್ತಿತ್ತು.

ಸಿಂಧಿ ಮತ್ತು ಕೈಮ್‌ಖಾನಿ ಮುಸ್ಲಿಮರನ್ನು ಆಗಲೆ ಉಲ್ಲೇಖಿಸಲಾಗಿದೆ. ನವ ಮುಸ್ಲಿಮರೆಂದು ಕೆಲವೊಮ್ಮೆ ಕರೆಯಲ್ಪಡುವ ಕೈಮ್‌ಖಾನಿಗಳು ಮತ್ತು ಮಿಯೋಗಳು ತಮ್ಮ ಮೂಲ ಹಿಂದೂ ಪದ್ಧತಿಗಳಲ್ಲಿ ಹಲವನ್ನು ಈಗಲೂ ಉಳಿಸಿಕೊಂಡಿದ್ದಾರೆ. ಮದುವೆ ಅಥವಾ 'ನಿಖಾ'ವನ್ನು ನೆರವೇರಿಸಲು ಮತ್ತು

ಹಿಂದೂ ಹಬ್ಬಗಳನ್ನಾಚರಿಸಲು ಅವರು ಕಾಜಿ, ಬ್ರಾಹ್ಮಣ ಪಂಡಿತ ಇಬ್ಬರನ್ನೂ ಆಮಂತ್ರಿಸುತ್ತಾರೆ.

ಕೃಷ್ಣನ ಹುಟ್ಟು ನಾಡಾದ ವ್ರಜದ ಮತ್ತು ಅವನ ರಾಜ್ಯವಾದ ದ್ವಾರಕದ ನಡುವೆ ಇರುವ ರಾಜಾಸ್ಥಾನದ ಮೇಲೆ ಕೃಷ್ಣಪಂಥದ ಗಾಢ ಪ್ರಭಾವವಿತ್ತು; ಆದರೆ ದಾದುಪಂಥಿಗಳು, ರಾವಮ್–ಸನೇಹಿ ಹಾಗೂ ಲಾಲ್ದಾಸಿ ಮತ್ತು ವಿಷ್ಣೋಯಿ ಪಂಥಗಳು ತಮ್ಮ ಸ್ವಂತ ಧಾರ್ಮಿಕ ಪ್ರಮಾಣ ಹಾಗೂ ಪೂಜಾವಿಧಾನಗಳನ್ನನು ಸರಿಸುತ್ತವೆ.

ರಾಜಾಸ್ಥಾನಿ ರುಮಾಲುಗಳು ಪ್ರಾಂತದಿಂದ ಪ್ರಾಂತಕ್ಕೆ, ಜಾತಿಯಿಂದ ಜಾತಿಗೆ ಶೈಲಿಯಲ್ಲಿ ವ್ಯತ್ಯಸ್ತವಾಗುತ್ತವೆ. ಹಿಂದಿನ ಅರಸು ಸಂಸ್ಥಾನಗಳ ರಜಪೂತರ ಶೈಲಿ ಸಮ್ಮಿಶ್ರ ರಜಪೂತ ವರ್ಗಗಳ–ದರೋಗರ–ಶೈಲಿಗಿಂತ ಭಿನ್ನವಾಗಿತ್ತು. ಒಟ್ಟಿನಲ್ಲಿ ಹೇಳುವುದಾದರೆ, 'ಸಫ್' ಶೈಲಿಯನ್ನು ರಜಪೂತರೂ, 'ಪಗ್ರಿ'ಯನ್ನು ವರ್ತಕರೂ ಇಷ್ಟಪಡುತ್ತಾರೆ. ಮಾರ್ವಾರದಲ್ಲಿ ಎತ್ತರದ ರುಮಾಲುಗಳು ಬಳಕೆಯಾಗುತ್ತವೆ; ಅದೇ ಶೈಲಿ ಸಿರೋಹಿ, ಜೈಸಲ್ಮೇರ್‌ಗಳಲ್ಲೂ ಕಂಡುಬರುತ್ತದೆ. ಬಿಕನೀರ್‌ನಲ್ಲಿ 'ಖಿರ್ಕಿಯ ಪಾಗ್' ಎಂದು ಹೆಸರಾದ ವಿಶಿಷ್ಟ ಬಗೆಯೊಂದಿದೆ. ಉದಯಪುರ ಪ್ರದೇಶದ ಶೈಲಿಯನ್ನು 'ಮೇವಾರಿ' ಎಂದು ಕರೆಯುತ್ತಾರೆ. ಈ ರುಮಾಲುಗಳೆಲ್ಲ ಉಜ್ವಲ ವರ್ಣಗಳಲ್ಲಿರುತ್ತವೆ. ರಾಜಾಡಳಿತದ ಅಂತ್ಯದೊಡನೆ ಈ ತಲೆಯುಡಿಗೆಯ ಮಾದರಿಗಳೂ ಜನಪ್ರಿಯತೆ ಕಳೆದುಕೊಳ್ಳುತ್ತಿವೆ. ರಾಜಾಸ್ಥಾನದ ಆಸ್ಥಾನಗಳಲ್ಲಿನ ಅಧಿಕೃತ ಉಡುಗೆಯಾದ ಗುಂಡಿಹಾಕಿದ ಗಿಡ್ಡಮೇಲಂಗಿ (ಜೋಧ್‌ಪುರಿ) ದೇಶಾದ್ಯಂತ ಜನಪ್ರಿಯವಾಗಿದೆ.

ರಾಜಾಸ್ಥಾನಿ ಹಳ್ಳಿ ದೇಶದ ಇತರ ಭಾಗಗಳ ಹಳ್ಳಿಗಳಿಗಿಂತ ಬಹಳ ಭಿನ್ನ. ಮುಳ್ಳುಗಳ ಮತ್ತು ಹುಲ್ಲುಮೆದೆಗಳ ಬೇಲಿಯಿಂದ ಸುತ್ತುವರಿಯಲ್ಪಟ್ಟ ಹಳ್ಳಿಯೊಂದು ಸಣ್ಣ ಕೋಟೆಯಂತಿರುತ್ತದೆ. ಆದರೆ ಗುಡಿಸಲುಗಳಿಗೆ ಏಕರೀತಿಯ ಆಕಾರವಿರುವುದಿಲ್ಲ. ದಕ್ಷಿಣದಲ್ಲಿ ಅವಕ್ಕೆ ರೇಖಾತ್ಮಕ ಆಕೃತಿಯಿದ್ದರೆ, ರಾಜ್ಯದ ಉಳಿದೆಡೆ ಅವು ಬಹುತೇಕ ವೃತ್ತಾಕಾರದಲ್ಲಿರುತ್ತವೆ. ಹಳ್ಳಿಯ ಚಾರಣನೊಬ್ಬ ಹಳ್ಳಿಯ ಗುಡಿಸಲನ್ನೂ ಅದರ ಜೀವನವಿಧಾನವನ್ನೂ ಹೀಗೆ ವಿಡಂಬಿಸುತ್ತಾನೆ:

ಅಕ್ ರ ಝೊಂಪ್ರ
ಫೊಕ್ ರ ಬಾರ್
ಬಜ್ರ ರ ರೋಟಿ
ಮೊತ್ ರ ದಾಲ್ ದೇಖೊ ಹೊ ರಾಜ ತೇ ಮಾರ್ವಾರ್

(ಆಕ್ ಗುಡಿಸಲುಗಳು, ಮುಳ್ಳಿನ ಬೇಲಿಗಳು, ಜೋಳದ ರೊಟ್ಟಿ, ಅವರೆಬೇಳೆ; ನೋಡು ಓ ದೊರೆ, ನಿನ್ನ ಮಾರ್ವಾರನ್ನು)

ಸ್ಥಳೀಯವಾಗಿ ಲಭ್ಯವಾದ ಸಾಮಗ್ರಿಯಿಂದ ಗುಡಿಸಲುಗಳ ನಿರ್ಮಾಣವಾಗುತ್ತದೆ. ಒಣಹುಲ್ಲು ಮಿಶ್ರ ಮಾಡಿದ ಮಣ್ಣನ್ನು ಸಾಮಾನ್ಯವಾಗಿ ಗೋಡೆಗಳಿಗೆ ಬಳಸಲಾಗುತ್ತದೆ; ಬಿದಿರು, ಹುಲ್ಲು ಮತ್ತು ರೆಂಬೆಗಳಿಂದ ಮಾಡಿದ ಚಾವಣಿ

ಯಿರುತ್ತದೆ. ಕೆಲವು ಮನೆಗಳಿಗೆ ಹೆಂಚಿನ ಅಥವಾ ಹಸಿ ಇಟ್ಟಿಗೆಗಳ ಚಾವಣಿ ಯಿರುತ್ತದೆ. ಮೇವಾರ್ ಮತ್ತು ಬುಂದಿಯಲ್ಲಿ ಬುಡಕಟ್ಟು ಜನ ಆಗಾಗ ತಮ್ಮ ಮನೆಗಳನ್ನು ಮರದಿಂದ ಕಟ್ಟುತ್ತಾರೆ. ಬಿದಿರು ಸಮೃದ್ಧವಾಗಿರುವ ಕಡೆ ಅದನ್ನು ಗೋಡೆಗಳಿಗೆ ಬಳಸಲಾಗುತ್ತದೆ. ಮಾರ್ವಾರದಲ್ಲಿ, ಗುಡಿಸಲು ವೃತ್ತಾಕಾರದಲ್ಲಿ, ಚಾವಣಿ ಶಂಕುವಿನಾಕಾರದಲ್ಲಿ ಇರುತ್ತವೆ; ಪರಸ್ಪರ ಆವರಿಸುವ ಹಲವಾರು ತುಣುಕು ಗಳ ಭಾವನೆ ಬರುವಂತೆ ಚಾವಣಿಯನ್ನು ಕೌಶಲಪೂರ್ಣವಾಗಿ ಹೊದಿಸಲಾಗುತ್ತದೆ. ಒಳಗಡೆಯ ಕಂಬವೊಂದು ಶೃಂಗಕ್ಕೆ ಆಧಾರವಾಗಿರುತ್ತದೆ. ಇದೇ ವಸ್ತುವಿನಿಂದಾದ 'ದೋಗ್ಲಾ' ಎಂಬ ಉಪಗೃಹವೊಂದನ್ನು ದನದ ಕೊಟ್ಟಿಗೆಯಾಗಿ, ಮೇವಿನ ಕೊಟ್ಟಿಗೆಯಾಗಿ ಮತ್ತು ಉಗ್ರಾಣವಾಗಿ ಬಳಸಲಾಗುತ್ತದೆ. ಸಿರಿವಂತ ಕೃಷಿಕರಿಗೆ ಈಗ ಇಟ್ಟಿಗೆ ಮನೆಗಳಿವೆ.

ಗುಡಿಸಲುಗಳು ಹುಲ್ಲಿನಿಂದಾಗಿರಬಹುದು. ಆದರೆ ಪ್ರವೇಶದ್ವಾರ ಸಾಮಾನ್ಯವಾಗಿ ಅಲಂಕೃತವಾಗಿರುತ್ತದೆ. ನೆಲಕ್ಕೆ ಕಡುಗೆಂಪು ಬಣ್ಣ ಹಾಕಲಾಗುತ್ತದೆ, ಕದಗಳಲ್ಲಿ ಜಾನಪದ ವಿನ್ಯಾಸಗಳೂ ಆಶಯಗಳೂ ಇರುತ್ತವೆ.

ತಮ್ಮ ಭೂದೃಶ್ಯಗಳ ವರ್ಣರಾಹಿತ್ಯವನ್ನು ರಾಜಾಸ್ಥಾನದ ಜನ ತಮ್ಮ ವಸ್ತ್ರಗಳ-ಗಂಡಸರ ಗಂಭೀರ ತಲೆಯುಡುಗೆಯ ಹಾಗೂ ಹೆಂಗಸರ ಸುಂದರ ಲಂಗಗಳ ಮತ್ತು 'ಒದನಿ'ಗಳ-ಆಕರ್ಷಕ ವರ್ಣಗಳಿಂದ ತುಂಬಿಕೊಂಡಿದ್ದಾರೆ; ಹಳ್ಳಿಗಳಲ್ಲಿ ಹಿಂದೂ-ಮುಸ್ಲಿಮರನ್ನು ವಸ್ತ್ರಗಳಿಂದ ಬೇರ್ಪಡಿಸಿ ಗುರುತಿಸುವುದು ಕಷ್ಟ.

'ಪರ್ದಾ' ಗ್ರಾಮೀಣ ರಾಜಾಸ್ಥಾನದಲ್ಲಿ ಬಹುಮಟ್ಟಿಗೆ ಅಪರಿಚಿತ; ಅಲ್ಲಿ ಹೆಂಗಸರು ಹೊಲಗಳಲ್ಲಿ ದುಡಿಯುತ್ತಾರೆ ಮತ್ತು ಸಂತೆ, ಜಾತ್ರೆಗಳಿಗೆ ಕೊಳ್ಳಲು ಹೋಗುತ್ತಾರೆ. ಆದರೂ ಸೊಸೆಯಂದಿರು ಹಿರಿಯರ ಮುಂದೆ ಮುಖಕ್ಕೆ ಮುಸು ಕೆಳೆದುಕೊಳ್ಳುತ್ತಾರೆ. ನಗರಗಳಲ್ಲಿ ಪರ್ದಾ ಪದ್ಧತಿ ಉಚ್ಚಜಾತಿಗಳಲ್ಲಿ ಸಾಮಾನ್ಯ ವಾಗಿದೆ; ರಜಪೂತರು ಮತ್ತು ಅಸ್ವಾಲ್ ಜೈನರು ಅದರ ಬಗ್ಗೆ ವಿಶೇಷ ಕಾಳಜಿ ವಹಿಸುತ್ತಾರೆ.

ರಾಜಾಸ್ಥಾನ ತನ್ನ ಜಾತ್ರೆ, ಉತ್ಸವಗಳಿಗೆ ಪ್ರಸಿದ್ಧವಾಗಿದೆ. ಗ್ರಾಮೀಣರು ಮತ್ತು ಬುಡಕಟ್ಟು ಜನ ಉಲ್ಲಾಸಪೂರ್ಣ ಸ್ವಚ್ಛಂದತೆಯಿಂದ ಜಾತ್ರೆಗಳಲ್ಲಿ ಕಿಕ್ಕಿರಿದು, ತಮ್ಮ ಹಾಡು, ಲಯ ಹಾಗೂ ಕುಣಿತಗಳ ಹರ್ಷಾತಿರೇಕದಿಂದ ಅವುಗಳಿಗೆ ಬಹಳಷ್ಟು ಮೋಹಕತೆಯನ್ನೀಯುತ್ತಾರೆ.

ರಾಜಾಸ್ಥಾನದ ಭಾಷೆ ರಾಜಾಸ್ಥಾನಿ; ಅದು ಐದು ಮುಖ್ಯ ಉಪಭಾಷೆಗಳನ್ನು-ಮಾರ್ವಾರಿ, ಧುಂಧರಿ, ಮೇವಾರಿ, ಮೇವತಿ ಮತ್ತು ಹದೌತಿ - ಒಳಗೊಳ್ಳುತ್ತದೆ. ಅದು ಅಪಭ್ರಂಶದಿಂದ, ಅದರ ಎಲ್ಲ ಭಾಷಿಕ ಮತ್ತು ಲಿಪಿ ಸಂಬಂಧಿ ವೈಶಿಷ್ಟ್ಯ ಗಳೊಡನೆ ನಿಷ್ಪನ್ನವಾಗಿದೆ.

ಐದು ಶತಮಾನಗಳ ಕಾಲ ಅದು ರಾಜಾಸ್ಥಾನದ ಕವಿಗಳ ಮತ್ತು ಲೇಖಕರ ಪಾಲಿಗೆ ಅಭಿವ್ಯಕ್ತಿಯ ಶಕ್ತಮಾಧ್ಯಮವಾಗಿತ್ತು. ಸಾಹಿತ್ಯದ ಭಾಷೆಯಾಗಿ ರಾಜಾಸ್ಥಾನಿ ಬ್ರಿಟಿಷ್ ಅವಧಿಯಲ್ಲಿ ಭಾರಿ ಹಿನ್ನೆಡೆಯನ್ನನುಭವಿಸಿದರೂ, ಸ್ವಾತಂತ್ರ್ಯೋತ್ತರ

ಯುಗದಲ್ಲಿ ಅದರ ಪುನರುಜ್ಜೀವನಕ್ಕಾಗಿ ಸತತ ಪ್ರಯತ್ನಗಳು ನಡೆದಿವೆ. ಇಂದು ನೂರಾರು ಮಂದಿ ಕವಿಗಳು ಮತ್ತು ಲೇಖಕರು ರಾಜಾಸ್ಥಾನಿಯಲ್ಲಿ ಬರೆಯುತ್ತಿದ್ದಾರೆ.

ರಾಜಾಸ್ಥಾನಿಯಲ್ಲಿ ಜನಪದ ಸಾಹಿತ್ಯ ವೈವಿಧ್ಯಪೂರ್ಣ ಮತ್ತು ಶ್ರೀಮಂತವಾಗಿದೆ. ಅದು ಹಾಡು, ಕತೆ, ಸೂಕ್ತಿ, ಒಗಟುಗಳನ್ನೂ, *ಖಯಾಲ್* ಎಂಬ ಜನಪ್ರಿಯ ಹೆಸರಿನ ಜನಪದ ನಾಟಕಗಳನ್ನೂ ಒಳಗೊಳ್ಳುತ್ತದೆ.

ರಾಜಾಸ್ಥಾನದ ಸಂಸ್ಕೃತಿ ಉಳಿದ ಭಾರತದ ಸಂಸ್ಕೃತಿಗಿಂತ ಭಿನ್ನವಾಗಿದ್ದು, ತನ್ನ ರಾಜಕೀಯ ಗಡಿಗಳಾಚೆಗೆ ದಕ್ಷಿಣದಲ್ಲಿ ಮಾಳವಕ್ಕೆ ವಿಸ್ತರಿಸುತ್ತದೆ.

## ಸಾಮಾಜಿಕ–ಆರ್ಥಿಕ ರಚನೆ

ಸಮಾಜದ ಊಳಿಗಮಾನ್ಯ ರಚನೆ ಮತ್ತು ಶ್ರೀಮಂತಶಾಹಿ ಪರಂಪರೆಯನ್ನು ರಾಜಾಸ್ಥಾನದಲ್ಲಿ ಇತರೆಡೆಗಳಿಗಿಂತ ಬಹು ದೀರ್ಘ ಕಾಲ ಉಳಿಸಿಕೊಂಡು ಬರಲಾಗಿದೆ ಎಂಬುದು ನಿಜ; ಇದಕ್ಕೆ ಕಾರಣಗಳನ್ನು ಚರಿತ್ರೆಯಷ್ಟೆ ವಿವರಿಸಬಲ್ಲುದು. ಅರಸರ ಕಾಲದಲ್ಲಿ, ಕಾಲಚಕ್ರ ಒಂದು ಶತಮಾನ ಅಥವಾ ಇನ್ನೂ ಹೆಚ್ಚು ಕಾಲ ಚಲನೆ ಕಳೆದುಕೊಂಡಿತು; ಪರಿಣಾಮವೇನೆಂದರೆ, ರಾಜಾಸ್ಥಾನ ಹಿಂದುಳಿದ ಮತ್ತು ಸೌಲಭ್ಯ ಸಾಲದ ಜನತೆಯ ಶೇಕಡಾ ಪ್ರಮಾಣದಲ್ಲಿ ಇತರೆಲ್ಲ ರಾಜ್ಯಗಳನ್ನು ಹಿಂದೆ ಹಾಕಿತು. ಮಹಿಳಾವರ್ಗ ಬಹುತೇಕ ನಿರಕ್ಷರಿಯಾಗಿ ಉಳಿಯಿತು; ಸಾಮಾಜಿಕ ಅನಿಷ್ಟಗಳು ಮತ್ತು ಬೇರೂರಿದ ಬಡತನ ಬುಡಕಟ್ಟು ಜನರ ಮತ್ತು ಪರಿಶಿಷ್ಟ ಜಾತಿಗಳ ನೆಲೆಗಳನ್ನು ಬೆನ್ನಟ್ಟಿದುವು.

ಊಳಿಗಮಾನ್ಯ ಪದ್ಧತಿಯು ಸಮಾಜ ಜನತೆಯ ವಿಶಾಲ ವರ್ಗಗಳನ್ನು ಕುಂಠಿತಗೊಳಿಸುವ ದೌರ್ಬಲ್ಯಗಳಿಗೆ ಗುರಿಮಾಡಿತು. ಅವು ತಮ್ಮ ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸಿಕೊಳ್ಳಲು ಅಸಮರ್ಥವಾಗಿದ್ದುವು. *ಸಗ್ರಿ* ಎಂಬ ಪದ್ಧತಿಯೊಂದಿದ್ದು, ಅದು ಸಾಲಿಗನ ಸಾಲವನ್ನು ಸಾಲಗಾರ ಮರಳಿಸದಿದ್ದಾಗ ಒಂದು ಬಗೆಯ ಗುಲಾಮಗಿರಿಗೆ ಅವಕಾಶ ಕಲ್ಪಿಸಿತು. ಕೋಟೆ ಜಿಲ್ಲೆಯ ಷಹಾಬಾದ್ ಮತ್ತು ಕಿಷ್ಣನ್‌ಗಂಜ್ ಕಾಡುಗಳಲ್ಲಿ ಸೆಹ್ರಿಯ ಜನರನ್ನು ಈ ಪದ್ಧತಿಯಡಿಯಲ್ಲಿ ಚರಾಸ್ತಿಗಳಂತೆ ಕೊಳ್ಳಲಾಗುತ್ತಿತ್ತು ಮತ್ತು ಮಾರಲಾಗುತ್ತಿತ್ತು; ಅದು ಅವರಿಗೆ *ಹಲಿ ಬಧೋಲಿ* ಅಥವಾ *ಹಲಿ ಬಂಟರ* ಅಂತಸ್ತನ್ನು ತಂದುಕೊಟ್ಟಿತ್ತು. ಈ ಎರಡೂ ಅವಸ್ಥೆಗಳಲ್ಲಿ, ಸೆಹ್ರಿಯನನ್ನು ವಾಸ್ತವವಾಗಿ ವರ್ಷಕ್ಕೆ 240 ರೂ.ಗಳ ಅಲ್ಪಧನಕ್ಕೆ ಕೊಳ್ಳಲಾಗುತ್ತಿತ್ತು. ಆಯಾ ವರ್ಷ ಅವನು ತನ್ನ ಯಜಮಾನನಿಂದ ಪಡೆದ ಆಹಾರ, ಬಟ್ಟೆ ಮತ್ತು ಇತರ ವಸ್ತುಗಳನ್ನು ಸಾಲವೆಂದು ಪರಿಗಣಿಸಲಾಗುತ್ತಿತ್ತು. ಒಟ್ಟು ಗೂಡಿಸಿದಾಗ ಅದು ಅವನು ಆರಂಭದಲ್ಲಿ ಪಡೆದ ಮುಂಗಡ ಹಣವನ್ನು ಅನಿವಾರ್ಯವಾಗಿ ಮೀರುತ್ತಿತ್ತು. ಸಾಲ ಯಾವಾಗಲೂ ತೀರದೆ ಉಳಿಯುತ್ತಿತ್ತು ಮತ್ತು ಸದಾ ಏರುತ್ತಿತ್ತು; ಋಣ ತೀರಿಸದೆ ಸೆಹ್ರಿಯ ಮಾತ್ರವಲ್ಲ, ಅವನ ಇಡೀ ಕುಟುಂಬ ಜೀವಮಾನ ಪರ್ಯಂತ ಒಬ್ಬ ಮಹಾಜನ ಅಥವಾ ಜಮೀನ್ದಾರನ ಸೇವೆಗೆ ಬದ್ಧವಾಗಿರಬೇಕಿತ್ತು. ಉದ್ಯೋಗದ ಈ ಹೇಯ ಷರತ್ತುಗಳನ್ನು ಹಿಂದಿನ

ಕೋಟ ಸಂಸ್ಥಾನದ ಕಾನೂನು ಸಮರ್ಥಿಸುತ್ತಿತ್ತು; ಅದು ಒಪ್ಪಂದವನ್ನು ಪಾಲಿಸದಿದ್ದುದಕ್ಕಾಗಿ ಸ್ತ್ರೀಯನ ಬಂಧನ, ಔಪಚಾರಿಕ ವಿಚಾರಣೆ ಮತ್ತು ದಂಡನೆಗೂ ಅನುಮತಿ ಕೊಟ್ಟಿತ್ತು.

ಒಂದು ಕಾಲದಲ್ಲಿ ಅರಸರಾಗಿದ್ದ ಭಿಲ್ಲರು ತಮ್ಮ ಭಯಂಕರ ಬಡತನದಿಂದ ಮತ್ತು ಹಿಂದಿನ ರಾಜರು ತಮ್ಮ ಬಗ್ಗೆ ತೋರಿದ ಪಾಶವೀ ವರ್ತನೆಯಿಂದ ಉಗ್ರ ಭಯೋತ್ಪಾದಕರಾಗಿ ಪರಿವರ್ತನೆಗೊಂಡರು. 1840ರಲ್ಲಿ ಖೇರ್‌ವಾರದಲ್ಲಿ 'ಮೇವಾರ್ ಭಿಲ್‌ಕೋರ್' ರೂಪಿತವಾದ ಮೇಲೆ, ಬ್ರಿಟಿಷರು ಅವರನ್ನು ಪಳಗಿಸಿದರು; ಆದರೆ ಅವರ ಸ್ಥಿತಿಯನ್ನು ಸುಧಾರಿಸಲು ಏನೂ ಮಾಡಲಿಲ್ಲ. ಸಾಮಾಜಿಕವಾಗಿ ಭಿಲ್ಲರು ಈಗಲೂ ತಮ್ಮ ಗುಂಪಿಗೆ ಮತ್ತು ಪಂಚಾಯತ್ ವ್ಯವಸ್ಥೆಗೆ ಗಾಢವಾಗಿ ಅಂಟಿಕೊಂಡಿದ್ದಾರೆ. ಅವರಲ್ಲಿ ಶೇ. ತೊಂಬತ್ತೊಂಬತ್ತರಷ್ಟು ಮಂದಿ ಕೃಷಿಕರಲ್ಲ; ಬಹುಮಂದಿಗೆ ಭೂಮಿಯಿಲ್ಲ; ಕೆಲವರಿಗೆ ಭೂಮಿಯಿದ್ದರೂ ಅವರ ಹಿಡುವಳಿಗಳು ಸಣ್ಣವಾಗಿದ್ದು, ಆರ್ಥಿಕವಾಗಿ ಲಾಭದಾಯಕವಾಗಿಲ್ಲ.

ಗರಾಸಿಯಗಳು ಅಷ್ಟೇ ಬಡವರು; ಆದರೆ ಬದುಕು ಅವರ ಪಾಲಿಗೆ ಮಂಕಲ್ಲ ಅಥವಾ ಕ್ರೂರವಲ್ಲ. ಸಾಮಾಜಿಕವಾಗಿ ಅವರು ಸಾಂಸ್ಥಿಕ ತಂಡವಾಗಿದ್ದು, ದುಡಿಮೆಯ ಬಗೆಗೆ ಮತ್ತು ಜೀವನೋಪಾಯದ ಬಗ್ಗೆ ವ್ಯಷ್ಟಿಧೋರಣೆಯುಳ್ಳವರಾಗಿದ್ದಾರೆ. ಆಗಾಗ ಅವರು ಹಾಡು, ಕುಣಿತಗಳ ಲಯ ಮತ್ತು ಹರ್ಷೋದ್ರೇಕದಲ್ಲಿ ಮಗ್ನರಾಗುತ್ತಾರೆ. 'ತಿನ್ನು, ಕುಡಿ, ಖುಷಿಯಾಗಿರು' ಎಂಬ ಸೂತ್ರದಲ್ಲಿ ಅವರಿಗೆ ನಂಬಿಕೆ. ಸರಳರೂ ವಿರಾಮಶೀಲರೂ ಆದ ಅವರು ಬಡವರಾಗಿ, ಹೊಟ್ಟೆ ತುಂಬದವರಾಗಿ ಮತ್ತು ಶೋಷಿತರಾಗಿ ಉಳಿದಿದ್ದಾರೆ. ಭಿಲ್ಲರಂತೆ ಅವರು ತಮ್ಮದೇ ಆದ ಪಂಚಾಯತ್ ವ್ಯವಸ್ಥೆಯ ಆಡಳಿತಕ್ಕೊಳಪಟ್ಟಿದ್ದಾರೆ.

ಖದೋಡಿಗಳು ಅಥವಾ ಕಥೋಡಿಯಗಳು ಮೂಲತಃ ಭಿಲ್ಲರಾಗಿದ್ದು, ಖಾನ್‌ದೇಶದಿಂದ ಉದಯಪುರ್ ಜಿಲ್ಲೆಯ ಫಲಾಸಿಯ, ಕೊತ್ರ ಮತ್ತು ಖೆರ್‌ವಾರ್ ತಹಶೀಲುಗಳಲ್ಲಿ 'ಖೇರ್' ಮರಗಳಿಂದ 'ಕಠ' ಅಥವಾ 'ಕಟೇಜು' ತಯಾರಿಸಲು ಬಂದರು. ಕಾಡುಗಳ ಭೋಪ್ರ ಗುತ್ತಿಗೆದಾರರಿಂದ ಶೋಷಿತರಾಗಿ, ಅರೆ ದಾಸ್ಯದಲ್ಲಿರಿಸಲ್ಪಟ್ಟ ಕತೋಡಿಗಳ ಬದುಕು ವ್ಯಥೆಯ ಕಥೆಯಾಗಿತ್ತು. ದಾರುಣ ಪರಿಸ್ಥಿತಿಯಲ್ಲಿ ದುಡಿಯುತ್ತ ಅರೆಹೊಟ್ಟೆ ಅರೆಬಟ್ಟೆಯಲ್ಲಿರುತ್ತಿದ್ದ ಅವರ ಅವಸ್ಥೆ ಏಳು ತಿಂಗಳ ಕೆಲಸವಿಲ್ಲದ ಅವಧಿಯಲ್ಲಿ ಮತ್ತಷ್ಟು ಕೆಡುತ್ತಿತ್ತು. ಆಗ ಅವರು, ಮುಟ್ಟಿದರೂ ತುರಿಕೆಯುಂಟು ಮಾಡುವ ಕಾಡು ಸೀರಾಳ್ಗಿಗಳನ್ನು ತಿಂದು ಬದುಕುತ್ತಿದ್ದರು. ಕಠಿಣ ದುಡಿಮೆಯ ಸಾಮರ್ಥ್ಯವಿದ್ದರೂ, ಅವರು ತಮ್ಮದ್ದಾದ ಏನೊಂದೂ ಇಲ್ಲದೆ ಕಡುಬಡವರಾಗಿಯೆ ಉಳಿದಿದ್ದರು.

ಜಯಪುರದ ಮೀನರು ಭಿಲ್ಲರಂತೆ ಸರಳರೂ ಶೋಷಿಸಲ್ಪಟ್ಟವರೂ ಆದ ಜನಾಂಗ; ಅವರನ್ನು ಎರಡು ಮುಖ್ಯ ಗುಂಪುಗಳಾಗಿ ವಿಂಗಡಿಸಲಾಗಿದೆ–ಬರದಾಸ್ ಮತ್ತು ಚೌಕಿದಾರ್. ಮೊದಲನೆಯ ಗುಂಪು ಕೃಷಿಕರದು; ಎರಡನೆಯದಕ್ಕೆ ದರೋಡೆಯ ಸ್ವಭಾವ ಇನ್ನೂ ಉಂಟು. ಕತೆ ತಿಳಿಸುವಂತೆ ಅವರ ರಾಜ್ಯವನ್ನು

ಅಂಬರ್–ಜಯಪುರದ ಕಛ್ವಾಹ ರಜಪೂತರು ಮೋಸದಿಂದ ವಶಪಡಿಸಿಕೊಂಡರು; ಅವರು ಸಣ್ಣ ವ್ಯವಸಾಯಗಾರರಾಗಿ, ಕ್ರಮೇಣ ಬಡತನಕ್ಕಿಳಿದರು. 'ಅಪರಾಧಿ ಬುಡ ಕಟ್ಟು ಕಾಯಿದೆ'ಯ ವಾಪಸಿಗಾಗಿ ಅವರು ಚಳವಳಿ ಹೂಡಿ ಹೋರಾಡಬೇಕಾಯಿತು. ಅವರು ಮೊಹೆಂಜೊದಾರೊ ಮತ್ತು ಮಹಾಭಾರತ ಕಾಲದ ಪ್ರಾಚೀನ ಮತ್ಸ್ಯರು.

## ಸ್ವಾತಂತ್ರ್ಯೋತ್ತರ ಪ್ರವೃತ್ತಿಗಳು

ಎಲ್ಲ ಪ್ರಜೆಗಳಿಗೂ ಸಮಾನತಾ ತತ್ತ್ವವನ್ನು ನಿರುಪಾಧಿಕವಾಗಿ ಪ್ರತಿಪಾದಿಸುವ ಭಾರತ ಸಂವಿಧಾನ ಹರಿಜನರ ಮತ್ತು ಇತರ ಹಿಂದುಳಿದ ವರ್ಗಗಳ ಪಾಲಿಗೊಂದು ಹೊಸ ಅಧ್ಯಾಯವನ್ನು ತೆರೆಯಿತು. ಯಾವುದೇ ಬಗೆಯ ಅಸ್ಪೃಶ್ಯತೆಯನ್ನು ಸಂವಿಧಾನದ 17ನೆಯ ವಿಧಿಯ ಪ್ರಕಾರ ತೊಡೆದು ಹಾಕಿ, ಅದರ ಆಚರಣೆಯನ್ನು ನಿಷೇಧಿಸಲಾಯಿತು. ರಾಜಾಸ್ಥಾನವೂ 1955ರಲ್ಲಿ ಅಸ್ಪೃಶ್ಯತಾ (ಅಪರಾಧ) ಕಾಯಿದೆಯನ್ನು ಸ್ವೀಕರಿಸಿತು; ಅದರ ಪ್ರಕಾರ, ಅಸ್ಪೃಶ್ಯತೆಯ ಆಚರಣೆ ಜುಲ್ಮಾನೆ ಅಥವಾ ಜೈಲುವಾಸದಿಂದ, ಅಥವಾ ಎರಡರಿಂದಲೂ ಶಿಕ್ಷಾರ್ಹವಾದ ಅಪರಾಧ. ರಾಜ್ಯದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳಿಗೆ ಸೇರಿದ ಜನ ಅನುಭವಿಸುತ್ತಿದ್ದ ಹಲವಾರು ಕಷ್ಟಕೋಟಲೆಗಳ ನಿವಾರಣೆಗಾಗಿ ಅನೇಕ ಕಾನೂನು ಮತ್ತು ಆಡಳಿತ ಕ್ರಮಗಳನ್ನು ತೆಗೆದುಕೊಳ್ಳಲಾಯಿತು; ಮತ್ತು ಅವರ ಕಲ್ಯಾಣಕ್ಕಾಗಿ ಹಾಗೂ ಸಾಮಾಜಿಕ–ಆರ್ಥಿಕ ಜೀವಣೆಗೆಗಾಗಿ ವ್ಯಾಪಕ ಕಾರ್ಯಕ್ರಮವೊಂದನ್ನು ಆರಂಭಿಸಲಾಯಿತು.

1961ರ ಸೆಪ್ಟೆಂಬರ್‌ನಲ್ಲಿ, ವಸ್ತುತಃ ಗುಲಾಮಗಿರಿ ಪದ್ಧತಿಯಾಗಿದ್ದ ಸಗ್ರಿಯನ್ನು ರಾಜ್ಯ ಶಾಸನಸಭೆ ರದ್ದುಗೊಳಿಸಿತು. ಅಸ್ಪೃಶ್ಯತೆಯ ಆಚರಣೆಯನ್ನು ನಿಷೇಧಿಸುವ ಕಾನೂನಿನಂತೆ ಈ ಕ್ರಮ ಹಿಂದುಳಿದ ಮತ್ತು ದಲಿತ ವರ್ಗಗಳಿಗೆ ಆಶಾದಾಯಕ ವಾಯಿತು. ಅದು ಅವರನ್ನು ಅನಿವಾರ್ಯ ಸಮಾಧಾನ ಭಾವನೆಯಿಂದ ಮತ್ತು ಅಲಕ್ಷ್ಯದಿಂದ ಹೊರಗೆಳೆದು, ಅವರ ಹಕ್ಕುಗಳ ಪ್ರಜ್ಞೆ ಮೂಡಿಸಿ, ಅವುಗಳನ್ನು ಸಾಧಿಸುವಂತೆ ಮಾಡಿತು.

1871ರ ಅಪರಾಧಿ ಬುಡಕಟ್ಟು ಕಾಯಿದೆಯ ಪ್ರಕಾರ ಅಪರಾಧಿ ಬುಡಕಟ್ಟುಗಳಲ್ಲಿ ಸೇರಿಸಲ್ಪಟ್ಟಿದ್ದ ಮೀನರು ಪೋಲೀಸ್ ಅತ್ಯಾಚಾರಗಳ ವಿರುದ್ಧ ಚಳವಳಿ ಮಾಡಿದರು. ಅವರ ಬಡತನ ಮತ್ತು ಹತ್ತಿರದ ಪೋಲೀಸ್ ಠಾಣೆಯಲ್ಲಿ ನಿತ್ಯ ಹಾಜರಿಯ ಅಗತ್ಯ ಅವರಿಗೆ ಒಂದೇ ಒಂದು ಆಯ್ಕೆಯನ್ನುಳಿಸಿದುವು: ಅನೀತಿಯುತ ಪೋಲೀಸರೊಡನೆ ಅಪವಿತ್ರ ಮೈತ್ರಿ ಮಾಡಿಕೊಳ್ಳುವುದು ಮತ್ತು ಕಳ್ಳತನ ಹಾಗೂ ಕನ್ನ ಹಾಕುವುದರಲ್ಲಿ ನೈಪುಣ್ಯ ಗಳಿಸುವುದು. 1936ರಲ್ಲಿ ಜವಾಹರಲಾಲ ನೆಹ್ರೂ ಅಪರಾಧಿ ಬುಡಕಟ್ಟು ಕಾಯಿದೆಯನ್ನು ಖಂಡಿಸಿ, ಅದನ್ನು ಕೂಡಲೆ ತಿದ್ದಗೆಸೆಯಬೇಕೆಂದು ಒತ್ತಾಯಿಸಿದರು. ಸಾಮಾಜಿಕ ಕಾರ್ಯಕರ್ತರೂ ಸುಧಾರಕರೂ ಆದ ಎ.ವಿ. ಥಕ್ಕರ್ ಕೂಡ ಆ ಕಾಯಿದೆಯನ್ನು ರದ್ದುಗೊಳಿಸಬೇಕೆಂದರು; ಆದರೆ ಈ ವಿಷಯವನ್ನು ಪರಿಶೀಲಿಸಲು 1949ರಲ್ಲಷ್ಟೇ ಒಂದು ಸಮಿತಿಯನ್ನು ನೇಮಿಸಲಾಯಿತು. ಸಂವಿಧಾನದತ್ತವಾದ

ಮೂಲಭೂತ ಹಕ್ಕುಗಳಿಗೆ ಕಾಯಿದೆ ವಿರುದ್ಧವಾಗಿರುವುದನ್ನು ಸಮಿತಿ ಮನಗಂಡು, ಅದು ರದ್ದಾಗಬೇಕೆಂದು ಸಲಹೆ ಮಾಡಿತು. 1952ರಲ್ಲಿ ಅದು ರದ್ದಾಯಿತು. ಮೀನರನ್ನು 1956ರಲ್ಲಿ ಪರಿಶಿಷ್ಟ ಬುಡಕಟ್ಟೆಂದು ಒಪ್ಪಲಾಯಿತು. ಅದರಿಂದ ಈ ಪ್ರಾಚೀನ ಬುಡಕಟ್ಟಿನ ಪಾಲಿಗೆ ಸಾಮಾಜಿಕ-ಆರ್ಥಿಕ ಚಟುವಟಿಕೆಯ ವಿವಿಧ ರಂಗಗಳಲ್ಲಿ ಹೊಸ ದಿಗಂತಗಳು ತೆರೆದುಕೊಂಡುವು.

ಸರ್ಕಾರ ಬುಡಕಟ್ಟು ಜನರಿಗಾಗಿ ಕೈಕೊಂಡ ಉತ್ತಮೀಕರಣದ ಮತ್ತು ಕಲ್ಯಾಣದ ಕ್ರಮಗಳು ಸ್ವಯಂಪ್ರೇರಿತ, ಸಾಮಾಜಿಕ ಮತ್ತು ಶೈಕ್ಷಣಿಕ ಸಂಸ್ಥೆಗಳ ಸಹಾಯಧನವನ್ನೂ ತಮ್ಮ ಮಕ್ಕಳಿಗೆ ವಿದ್ಯಾರ್ಥಿವೇತನ ಹಾಗೂ ವಿದ್ಯಾರ್ಥಿನಿಲಯ ಸೌಲಭ್ಯಗಳನ್ನೂ ಆಶ್ರಮಶಾಲೆಗಳಲ್ಲಿ ಕೈಕಸುಬು ತರಬೇತಿಯನ್ನೂ ಬಳಸಿಕೊಳ್ಳಲು ಮೀನರಿಗೆ ನೆರವಾದುವು. ಸಮಾಜಾಭಿವೃದ್ಧಿ ಕಾರ್ಯಕ್ರಮ ನೀರಾವರಿ ಸೌಲಭ್ಯಗಳನ್ನು ಹೆಚ್ಚಿಸಲು ಮತ್ತು ಅವರು ವಾಸಿಸುವ ಗ್ರಾಮಗಳಲ್ಲಿ ಕೃಷಿ ಉತ್ಪನ್ನವನ್ನು ಏರಿಸಲು ತುಂಬ ಸಹಾಯ ಮಾಡಿತು.

ಮೀನರನ್ನು ಒಂದು ಬುಡಕಟ್ಟನ್ನಾಗಿ ಗುರುತಿಸಿದ್ದರಿಂದ, ಮೀಸಲು ಸ್ಥಾನಗಳ ಮೂಲಕ ಲೋಕಸಭೆ, ವಿಧಾನಸಭೆ ಎರಡರಲ್ಲೂ ಅವರ ಪ್ರಾತಿನಿಧ್ಯ ಖಚಿತವಾಯಿತು. ಈಗ ನೂರಾರು ಮೀನರು ಪಂಚರು, ಸರಪಂಚರು ಮತ್ತು ಪ್ರಧಾನರಾಗಿದ್ದು, ತನ್ಮೂಲಕ ರಾಜ್ಯದ ಪ್ರಜಾಪ್ರಭುತ್ವ ವ್ಯವಸ್ಥೆಯ ತಳಹದಿಯಾಗಿದ್ದಾರೆ.

ಇಂಥವೇ ಪ್ರವೃತ್ತಿಗಳು ಸ್ವಾತಂತ್ರ್ಯ ಪ್ರಾಪ್ತಿಯಿಂದೀಚೆಗೆ ಇತರ ಬುಡಕಟ್ಟು ಮತ್ತು ಪರಿಶಿಷ್ಟ ಜಾತಿಗಳ ಸಾಮಾಜಿಕ ಮತ್ತು ಆರ್ಥಿಕ ಸ್ವಾತಂತ್ರ್ಯದ ಪ್ರಕ್ರಿಯೆಯಲ್ಲೂ ಕಂಡುಬರುತ್ತವೆ. ಬುಡಕಟ್ಟುಗಳ ಪೈಕಿ ಭಿಲ್ಲರು, ಗರಾಸಿಯರು, ಕಠೋಡಿಯರು ಮತ್ತು ಸಹ್ರಿಯರು, ಪರಿಶಿಷ್ಟ ಜಾತಿಗಳಲ್ಲಿ ಭಂಗಿಗಳು, ಚಮರರು ಮತ್ತು ಇತರ ಅಲಕ್ಷಿತ ಪಂಗಡಗಳು– ಇವರೆಲ್ಲ ತಮ್ಮ ಸ್ಥಿತಿಗತಿಗಳನ್ನು ಉತ್ತಮಪಡಿಸಿಕೊಳ್ಳಲು ಮತ್ತು ಸಮಾಜದ ಇತರ ವರ್ಗಗಳಿಗೆ ಸಮಾನರಾಗಲು ಸೌಲಭ್ಯಗಳನ್ನು ಕಲ್ಪಿಸಿಕೊಡಲಾಗಿದೆ. ಶತಶತಮಾನಗಳ ಹಿಂದುಳಿದಿರುವಿಕೆ, ದಾರಿದ್ರ್ಯ ಮತ್ತು ಅಜ್ಞಾನವನ್ನು ಕೆಲವೇ ವರ್ಷಗಳಲ್ಲಿ ತೊಡೆದುಹಾಕುವುದು ಅಸಾಧ್ಯವಾದರೂ, ಈ ಸೌಲಭ್ಯಗಳ ಲಾಭ ಪಡೆದು ತಮ್ಮ ಸ್ಥಿತಿಯನ್ನು ಉತ್ತಮಪಡಿಸಿಕೊಳ್ಳುವ ಅಗತ್ಯದ ಅರಿವು ಜನರಿಗೆ ಖಂಡಿತ ಉಂಟಾಗಿದೆ.

ಹಿಂದುಳಿದ ವರ್ಗಗಳು, ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಬುಡಕಟ್ಟುಗಳಲ್ಲಿನ ಸಾಕ್ಷರತೆಗೆ ಸಂಬಂಧಿಸಿದ ಖಚಿತ ಮಾಹಿತಿಗಳನ್ನು ಮೊದಲ ಬಾರಿಗೆ 1961ರ ಜನಗಣತಿಯಲ್ಲಿ, ಸ್ವಾತಂತ್ರ್ಯ ಬಂದ ಹದಿನಾಲ್ಕು ವರ್ಷಗಳ ನಂತರ ದಾಖಲಿಸಲಾಯಿತು. ಅದರ ಪ್ರಕಾರ, ಪರಿಶಿಷ್ಟ ಜಾತಿಗಳಲ್ಲಿ ಮತ್ತು ಬುಡಕಟ್ಟುಗಳಲ್ಲಿ ಸಾಕ್ಷರತೆಯ ಶೇಕಡಾವಾರು ಪ್ರಮಾಣ ಕ್ರಮವಾಗಿ 6.43 ಮತ್ತು 3.96; ಇತರ ವರ್ಗಗಳಲ್ಲಿ 19.03. ಸಾಮಾಜಿಕ ಮತ್ತು ಆರ್ಥಿಕ ಮಟ್ಟವನ್ನು ಮೇಲೆತ್ತುವುದರಲ್ಲಿ ಶಿಕ್ಷಣಕ್ಕೆ ಅಗ್ರಪ್ರಾಧಾನ್ಯವಾದ್ದರಿಂದ ಬೆಳವಣಿಗೆಯ ಈ ಮುಖಕ್ಕೆ ವಿಶೇಷ ಗಮನ ಹರಿಸಲಾಯಿತು; ಕೇಂದ್ರ ಮತ್ತು ರಾಜ್ಯ ಯೋಜನಾ ಮತ್ತು

ಯೋಜನೇತರ ಅವಕಾಶಗಳನ್ನಯ ರಾಜ್ಯವು ಪ್ರಥಮ ಯೋಜನೆಯ ಅವಧಿಯಲ್ಲಿ 57.87 ಲಕ್ಷ ರೂ.ಗಳನ್ನೂ ದ್ವಿತೀಯ ಯೋಜನೆಯ ಅವಧಿಯಲ್ಲಿ 212.83 ಲಕ್ಷ ರೂ.ಗಳನ್ನು, ಚತುರ್ಥ ಯೋಜನೆಯ ಅವಧಿಯಲ್ಲಿ 289.96 ಲಕ್ಷ ರೂ.ಗಳನ್ನೂ 1966–67 ರಿಂದ 1969–70ರವರೆಗಿನ ನಾಲ್ಕು ವರ್ಷಗಳಲ್ಲಿ ಹಿಂದುಳಿದ ವರ್ಗಗಳ ಶಿಕ್ಷಣಕ್ಕಾಗಿ ವ್ಯಯಿಸಿದೆ. ಮೊದಲನೆಯ ವರ್ಷದ ಖರ್ಚನ್ನು ಆಧಾರವಾಗಿಟ್ಟು ಕೊಂಡರೆ, ಎರಡನೆಯ ಯೋಜನೆಯ ಅವಧಿಯಲ್ಲಿ ಖರ್ಚಿನ ಏರಿಕೆ ಶೇ.110ರಷ್ಟು, ಮೂರನೆಯ ಯೋಜನೆಯ ಅವಧಿಯಲ್ಲಿ ಶೇ.268ರಷ್ಟು ಮತ್ತು 1970ರಲ್ಲಿ ಕೊನೆಗೊಳ್ಳುವ ನಾಲ್ಕನೆಯ ಯೋಜನೆಯ ಅವಧಿಯಲ್ಲಿ ಶೇ.401ರಷ್ಟು ಇದ್ದಿತು.

ಶಿಕ್ಷಣದ ಎಲ್ಲ ಹಂತಗಳಲ್ಲಿ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಬೋಧನಾ ಶುಲ್ಕದ ವಿನಾಯಿತಿ, ವೈದ್ಯಕೀಯ, ಎಂಜಿನಿಯರಿಂಗ್ ಮತ್ತು ಇತರ ತಾಂತ್ರಿಕ ಸಂಸ್ಥೆಗಳಲ್ಲಿ ಹಾಗೂ ಸರ್ಕಾರಿ ಸೇವೆಗಳಲ್ಲಿ ಸ್ಥಾನಗಳ ಮೀಸಲಾತಿ, ಪ್ರವೇಶ, ಸೇರ್ಪಡೆಗಳಲ್ಲಿ ಅರ್ಹತೆಯ ಬಗ್ಗೆ ರಿಯಾಯಿತಿ, ಮೆಟ್ರಿಕ್–ಪೂರ್ವ ಮತ್ತು ಮೆಟ್ರಿಕ್–ಅನಂತರ ವಿದ್ಯಾರ್ಥಿ ವೇತನಗಳು, ವಿಶೇಷ ವಿದ್ಯಾರ್ಥಿ ವೇತನಗಳು. ಅರ್ಹತೆ ಹಾಗೂ ಅವಶ್ಯಕತೆಗೆ ತಕ್ಕ ವಿದ್ಯಾರ್ಥಿವೇತನಗಳು, ಮತ್ತು ಕೈಗಾರಿಕೆ ತರಬೇತಿ ಕೇಂದ್ರಗಳ ಮತ್ತು ತರಬೇತಿ–ಉತ್ಪತ್ತಿ ಕೇಂದ್ರಗಳ ಅವಕಾಶಗಳು –ಇವುಗಳನ್ನು ಶೈಕ್ಷಣಿಕ ವಿಕಾಸದ ಈ ಕಾರ್ಯಕ್ರಮ ಒಳಗೊಳ್ಳುತ್ತದೆ.

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳ ಸದಸ್ಯರ ಸಂಖ್ಯೆ ಸರ್ಕಾರಿ ಸೇವೆಯ ವಿವಿಧ ಪ್ರಕಾರಗಳಲ್ಲಿ ಪ್ರಗತಿಪರವಾಗಿ ಏರುತ್ತಿರುವುದು ಇಂಥ ಉತ್ತೇಜನ ಕ್ರಮಗಳ ಫಲ. 1959–60ರಲ್ಲಿ ಪರಿಶಿಷ್ಟ ಜಾತಿ, ಬುಡಕಟ್ಟುಗಳಿಗೆ ಸೇರಿದ ಐವರು ಸದಸ್ಯರು ಮಾತ್ರ ಗೆಜೆಟೆಡ್ ಹುದ್ದೆಗಳಲ್ಲಿದ್ದರು; 476. 118 ಮತ್ತು 336 ಮಂದಿ ಕ್ರಮವಾಗಿ ಅಧೀನ, ಗುಮಾಸ್ತ ಹಾಗೂ ದ್ವಿತೀಯ ದರ್ಜೆ ಹುದ್ದೆಗಳಲ್ಲಿದ್ದರು. ಅವರು ಕ್ರಮವಾಗಿ ಈ ಸೇವೆಗಳ ಒಟ್ಟು ನೇಮಕದ ಶೇ. 2.5, 11.00, ಹಾಗೂ 23.00ರಷ್ಟಿದ್ದರು. 1968–69ರಲ್ಲಿ ಈ ನಾಲ್ಕು ವರ್ಗಗಳಲ್ಲಿ ಪರಿಶಿಷ್ಟ ಜಾತಿ ಹಾಗೂ ಬುಡಕಟ್ಟುಗಳ ಸಂಖ್ಯೆ 25,350, 171 ಮತ್ತು 425ಕ್ಕೇರಿತು; ಇದು ಕ್ರಮವಾಗಿ ಒಟ್ಟು ನೇಮಕಾತಿಯ ಶೇ. 7.88, 17.25, 16.51 ಮತ್ತು 32.56ರಷ್ಟು.

ಪ್ರಥಮ ಪಂಚವಾರ್ಷಿಕ ಯೋಜನೆಯ ಅನುಷ್ಠಾನದಿಂದೀಚೆಗೆ. ಪರಿಶಿಷ್ಟ ಜಾತಿ, ಬುಡಕಟ್ಟುಗಳಿಗೆ ಆದ್ಯತೆಯ ಪ್ರಕಾರ ಕೃಷಿಭೂಮಿಯ ವಿತರಣೆಗೆ ಒತ್ತು ಕೊಡ ಲಾಗಿದೆ. ಇದು ಅವರ ಆರ್ಥಿಕ ಬೆಳವಣಿಗೆಗೆ ಅತ್ಯವಶ್ಯ. ಏಕೆಂದರೆ, ಪರಿಶಿಷ್ಟ ಜಾತಿಗಳ ಶೇ.73ರಷ್ಟು ಕಾರ್ಯನಿರತ ಮಂದಿ ಮತ್ತು ಪರಿಶಿಷ್ಟ ಬುಡಕಟ್ಟುಗಳ ಶೇ.91ರಷ್ಟು ಮಂದಿ ಕೃಷಿಯಲ್ಲಿ ತೊಡಗಿದ್ದಾರೆ. ಎರಡು ವರ್ಗಗಳಿಗೂ ಇರುವ ಅಂತರವನ್ನು ಈ ಸಂಗತಿ ವಿವರಿಸುತ್ತದೆ: ಪರಿಶಿಷ್ಟ ಜಾತಿ ಜನಸಂಖ್ಯೆಯ ಶೇ.ಸು.29ರಷ್ಟು ಮಂದಿ ಗುಡಿಸುವುದು, ಭಂಗಿಕೆಲಸ, ಚರ್ಮ ಸುಲಿಯುವುದು, ಹದಮಾಡುವುದು ಮುಂತಾದ ಕಸುಬುಗಳಲ್ಲಿ ತೊಡಗಿದ್ದಾರೆ.

ಭೂಮಿ ಹಂಚಿಕೆಯ ಈ ಕಾರ್ಯಕ್ರಮ ಗಾಂಧಿ ಶತಮಾನೋತ್ಸವ ವರ್ಷದಲ್ಲಿ

ತ್ವರಿತವಾಯಿತು; ಆದರೆ ಹಂಚಿಕೆ ತನಗೆ ತಾನೆ ಒಂದು ಗುರಿಯೆಂದು ಪರಿಗಣಿತವಾಗಿಲ್ಲ. ಸಹಕಾರ ಸಂಘಗಳನ್ನು ರಚಿಸಲಾಗಿದೆ ಮತ್ತು ಜಮೀನು ಪಡೆದವರು ಕೃಷಿಗೆ ಬೇಕಾದ ಹತಾರ, ಉಪಕರಣಗಳನ್ನು ಕೊಳ್ಳಲು ಆಗತ್ಯ ಆರ್ಥಿಕ ನೆರವನ್ನೊದಗಿಸಲಾಗಿದೆ.

ಬುಡಕಟ್ಟು ಜನರ ಅರ್ಥವ್ಯವಸ್ಥೆ ಮುಖ್ಯವಾಗಿ ಕಾಡುಗಳ ಸುತ್ತ ಕಲ್ಪಿತವಾಗಿದೆ. ಒಂದು ಕಡೆ ಕಾಡುಗಳನ್ನು ರಕ್ಷಿಸಲು. ಇನ್ನೊಂದು ಕಡೆ ಬುಡಕಟ್ಟು ಜನತೆಗೆ ಕೆಲವು ರಿಯಾಯಿತಿಗಳನ್ನು ನೀಡಲು ಸ್ವಾತಂತ್ರ್ಯ ಬಂದಂದಿನಿಂದ ಪ್ರಯತ್ನಗಳನ್ನು ಕೈಕೊಳ್ಳಲಾಗಿದೆ. ಅರಣ್ಯ ಸಹಕಾರ ಸಂಘಗಳನ್ನು ಈಗ ಅರಣ್ಯ ಕಾರ್ಮಿಕ ಸಹಕಾರ ಸಂಘಗಳಿಗೆ ವಹಿಸಲಾಗಿದೆ; ಅವು ಮುಖ್ಯವಾಗಿ ಬುಡಕಟ್ಟು ಜನರಿಂದ ರಚಿತವಾಗಿವೆ. ಅದರ ಗುರಿಯೆಂದರೆ, ಈ ಅರಣ್ಯಪ್ರಜೆಗಳಿಗೆ ಅರಣ್ಯ ಅರ್ಥವ್ಯವಸ್ಥೆಯಲ್ಲಿ ಪುನರ್ವಸತಿ ಕಲ್ಪಿಸುವುದು.

ಸ್ವಾತಂತ್ರ್ಯ ಪ್ರಾಪ್ತಿಯಿಂದೀಚೆಗೆ ಕೈಕೊಳ್ಳಲಾಗಿರುವ ಉತ್ಕರ್ಷಕರ ಕ್ರಮಗಳು ಆರೋಗ್ಯ ಮತ್ತು ವಸತಿ ಕಾರ್ಯಕ್ರಮಗಳನ್ನೂ ಒಳಗೊಳ್ಳುತ್ತವೆ. ಆಯುರ್ವೇದೀಯ, ಅಂತೆಯೆ ಆಧುನಿಕ ಔಷಧಗಳನ್ನು ಉಚಿತವಾಗಿ ಹಂಚುವ ಸೌಕರ್ಯಗಳನ್ನುಳ್ಳ ಅನೇಕ ಆಸ್ಪತ್ರೆಗಳು ಈಗ ಬುಡಕಟ್ಟು ಪ್ರದೇಶಗಳಲ್ಲಿ ಕೆಲಸ ಮಾಡುತ್ತಿವೆ. ಈ ಆಸ್ಪತ್ರೆಗಳು ಮತ್ತು ಪ್ರಾಥಮಿಕ ಆರೋಗ್ಯಕೇಂದ್ರಗಳು ಬುಡಕಟ್ಟು ಜನರಲ್ಲಿ ಮತ್ತು ಪರಿಶಿಷ್ಟ ಜಾತಿಗಳಲ್ಲಿ ಸಾಮಾನ್ಯವಾಗಿರುವ ಕಜ್ಜಿ, ನಾರು ಹುಣ್ಣಿನ ಹುಳು, ಗಿನಿಹುಳು, ಭೇದಿ. ಆಮಶಂಕೆ, ಮಲೇರಿಯ ಮುಂತಾದ ರೋಗಗಳನ್ನು ತಡೆಗಟ್ಟಲು ಸಜ್ಜುಗೊಂಡಿವೆ. ಅವರಿಗೆ ಗ್ರಾಮೀಣ ಮತ್ತು ನಗರಪ್ರದೇಶ ಎರಡರಲ್ಲೂ ಮನೆ ನಿವೇಶನಗಳನ್ನೊದಗಿಸುವ ಮೂಲಕ ಸುರಕ್ಷಿತವಾದ ಕುಡಿಯುವ ನೀರು ಹಾಗೂ ಆರೋಗ್ಯಕರ ಜೀವನಸ್ಥಿತಿ ಖಚಿತವಾಗುವಂತೆಯೂ ಏರ್ಪಾಡುಗಳನ್ನು ಮಾಡಲಾಗಿದೆ.

ಈ ಕಾರ್ಯಕ್ರಮಗಳ ಜೊತೆಗೆ, ರಾಜ್ಯದ ಹೆಚ್ಚು ಹೆಚ್ಚು ಹರಿಜನ ಕೇರಿಗಳಿಗೆ ವಿದ್ಯುತ್ತನ್ನೂ, ಕೊಳಾಯಿ ನೀರನ್ನೂ ಒದಗಿಸಲಾಗುತ್ತಿದೆ. ಇಂಥ ಸೌಲಭ್ಯಗಳಿಗಾಗಿ ಹೆಚ್ಚುತ್ತಿರುವ ಬೇಡಿಕೆ, ಈ ಜನರಲ್ಲಿ ಉಂಟಾಗಿರುವ ಜಾಗ್ರತಿಯ ಸೂಚನೆಯಾಗಿದೆ. ಇತರ ಅನೇಕ ಬದಲಾವಣೆಗಳಿಂದ ಇದು ವ್ಯಕ್ತವಾಗುತ್ತದೆ. ಭಿಲ್ಲ ಸ್ತ್ರೀಯರು ತಮ್ಮ ತೋಳುಗಳನ್ನೂ ಕಾಲುಗಳನ್ನೂ ಕ್ರಮವಾಗಿ ಭುಜ ಮತ್ತು ಮಂಡಿಯವರೆಗೆ ಮುಚ್ಚಿರುತ್ತಿದ್ದ ತಮ್ಮ *ಪರಿಜ್ನಿ – ಓತ್ತಾಳೆ ಬಳೆಗಳನ್ನು –ತೊರೆದಿದ್ದಾರೆ; ಹದಿವಯಸ್ಸಿನ ತನಕ ಬಟ್ಟೆ ತೊಡದೆ ಅಲೆದಾಡುತ್ತಿದ್ದ ಅವರ ಮಕ್ಕಳು ಈಗ, ದಟ್ಟ ಕಾಡುಪ್ರದೇಶಗಳಲ್ಲಿ ಕೂಡ. ಚಡ್ಡಿ ಮತ್ತು ಲಂಗಗಳಲ್ಲಿರುವುದು ಕಂಡುಬರುತ್ತದೆ.*

ಭಿಲ್ಲರಲ್ಲಿ ಮತ್ತು ಮೀನರಲ್ಲಿ ಇಚ್ಛಾಪೂರ್ವಕ ಸಾಮಾಜಿಕ ಸುಧಾರಣೆಗಳ ಫಲವಾಗಿ, ಕುಡಿತ ಸಂಪೂರ್ಣವಾಗಿ ನಿಲ್ಲದಿದ್ದರೂ ಗಣನೀಯವಾಗಿ ನಿಯಂತ್ರಿತವಾಗಿದೆ. ದಕ್ಷಿಣ ರಾಜಾಸ್ಥಾನದ ಬುಡಕಟ್ಟು ಭೂಪಟ್ಟಿಯನ್ನು ಒಣಪ್ರದೇಶವೆಂದು ಘೋಷಿಸಿರುವುದರಿಂದ ಕೌಟುಂಬಿಕ ಅರ್ಥವ್ಯವಸ್ಥೆಯನ್ನು ಹಾಳುಮಾಡಿದ ಈ

ಸಾಮಾಜಿಕ ಅಸ್ತಿತ್ವವನ್ನು ನಿಗ್ರಹಿಸಲು ಅದು ಬಹಳಷ್ಟು ನೆರವಾಗಿದೆ. ಮೀನರು-ಗಂಡು, ಹೆಣ್ಣುಗಳಿಬ್ಬರೂ-ಜಾತ್ರೆಗಳಲ್ಲಿ ಮತ್ತು ಉತ್ಸವ ಸಂದರ್ಭಗಳಲ್ಲಿ ಪಾಲ್ಗೊಳ್ಳುತ್ತಿದ್ದ ಹಾಡು, ಕುಣಿತಗಳ ಬಗ್ಗೆ ಅವರ ಸ್ವಂತ ಸಮಾಜದ ಪ್ರಗತಿಪರ ಅಂಶಗಳು ಅಸಮಾಧಾನ ವ್ಯಕ್ತಪಡಿಸಿ, ನಿರುತ್ತೇಜನಗೊಳಿಸುತ್ತವೆ. ಶಿಕ್ಷಣ ಮತ್ತು ಆರ್ಥಿಕ ಪ್ರಗತಿಯೊಡನೆ, ಪರಿಶಿಷ್ಟ ಜಾತಿಗಳು, ಬುಡಕಟ್ಟುಗಳು, ಅನುಸೂಚಿತ ಮತ್ತು ಅಲೆಮಾರಿ ಬುಡಕಟ್ಟುಗಳು ಹಾಗೂ ಇತರ ಹಿಂದುಳಿದ ವರ್ಗಗಳು ತಮ್ಮನ್ನು ಬಂಧನ, ಬಡತನ ಮತ್ತು ಅಜ್ಞಾನದಲ್ಲಿರಿಸಿದ್ದ ನಿಷೇಧಗಳಿಂದ ಪಾರಾಗುತ್ತಿವೆ.

# ಪುರಾಣಕಥೆಗಳು

ಜಾನಪದ ಎನ್ನುವಂಥದು ದೂರತರವೂ ಗತಕಾಲೀನವೂ ಆದುದಲ್ಲ, ನಮ್ಮ ನಡುವೆ ವಾಸ್ತವಿಕವೂ ಜೀವಂತವೂ ಆಗಿರತಕ್ಕದ್ದು; ಏಕೆಂದರೆ, ಇಲ್ಲಿ ಭೂತಕಾಲ ವರ್ತಮಾನಕ್ಕೆ ಏನನ್ನೋ ಹೇಳಲಿದೆ ಮತ್ತು ಪುಸ್ತಕರಹಿತ ಜಗತ್ತು ತನ್ನನ್ನು. ತನ್ನ ಮೂಲಭೂತ, ವಾಚಿಕ ಮತ್ತು ಪ್ರಜಾಸತ್ತಾತ್ಮಕ ಸಂಸ್ಕೃತಿಯನ್ನು ಕುರಿತು ಓದ ಬಯಸುವ ಜಗತ್ತೊಂದಕ್ಕೆ ಏನನ್ನೋ ಹೇಳಲಿದೆ.[1] ಆದರೂ, ಯಾರ ಅತಿಮಾನುಷ ಶ್ರದ್ಧೆಯನ್ನು ಆಧುನಿಕ ಸಮಾಜದ ಪ್ರಚಲಿತ ಭೌತಿಕ ಭಾವನೆಗಳು ನಾಶಗೊಳಿಸಿ ವೆಯೊ ಅಂಥವರು ಮಾನವನ ಆಧ್ಯಾತ್ಮಿಕ ಪ್ರಜ್ಞೆಯಲ್ಲಿ ಹಿಂದೂ ವಿಲೀನವನ್ನು ಸಾಕಷ್ಟು ಅಂಗೀಕರಿಸಿರುವುದು ಅಥವಾ ಸಂಪೂರ್ಣವಾಗಿ ಗ್ರಹಿಸಿರುವುದು ವಿರಳ. ಪುರಾಣ ಕಥೆಗಳ ಮತ್ತು ಐತಿಹ್ಯಗಳ ಶಕ್ತಿಪೂರ್ಣತೆ ಮತ್ತು ಮಹತ್ವ ಮತ್ತೂ ಅರ್ಥವತ್ತಾಗುತ್ತದೆ; ಏಕೆಂದರೆ "ಈ ಶತಮಾನದ ಆರಂಭದಲ್ಲಿ ಬ್ರಿಟಿಷರ ಭಾರತವಿಜಯದ ತನಕ, ಈ ದೇಶದಲ್ಲಿ ಯಾವುದೊಂದರ ನಿಜವಾದ ಮತ್ತು ಅವಿಚ್ಛಿನ್ನವಾದ ಚಾರಿತ್ರಿಕ ದಾಖಲೆ ಅತ್ಯಲ್ಪ."[2]

ಎರಡು ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತಗಳು ಅಷ್ಟೊಂದು ಪ್ರಸ್ತುತವಾಗಿರುವುದು ಈ ಸಂದರ್ಭದಲ್ಲಿ. "ಮಹಾಭಾರತ ವಾಚನ ಎಲ್ಲ ಪಾಪವನ್ನೂ ಪರಿಹರಿಸುತ್ತದೆ; ಎಷ್ಟರ ಮಟ್ಟಿಗೆಂದರೆ, ಎಲ್ಲ ಅಪರಾಧವನ್ನು ತೊಳೆಯಲು ಏಕೈಕ ಶ್ಲೋಕ ಸಾಕು" ಎಂದು ಹಿಂದೂಗಳು ನಂಬುತ್ತಾರೆ. ರಾಮಾಯಣವನ್ನು ಓದುವವರು ಅಥವಾ ಕೇಳುವವರು ಎಲ್ಲ ಪಾಪಗಳಿಂದ ಮುಕ್ತರಾಗುತ್ತಾರೆ. ಮತ್ತೆ, "ಪುತ್ರಪ್ರಾಪ್ತಿಯ ಉದ್ದೇಶಕ್ಕಾಗಿ ಅದನ್ನು ಓದುವವರು ಮತ್ತು ಕೇಳುವವರು ಖಂಡಿತ ಪುತ್ರಸಂತಾನ ಪಡೆಯುತ್ತಾರೆ....." ಎಂದು ಭಾವಿಸಲಾಗಿದೆ.

ಪುರಾಣಗಳು ಈ ಕಾವ್ಯಗಳ ಕಾಲಕ್ರಮಾನುಗತ ಗಣನೆ ಹಾಗೂ ವಂಶಾವಳಿಗಳನ್ನು ವಿಸ್ತರಿಸಿ, ವ್ಯವಸ್ಥೆಗೊಳಿಸಿದುವು ಮತ್ತು ವೇದಗಳ ಅರೂಪ ನಶ್ವರ ಧಾರ್ಮಿಕ

---

[1] ಡಾರ್ಸನ್, ರಿಚರ್ಡ್, ಎಂ. *American Folklore*, Bombay, 1966, P.15

[2] Birdwood, George, C.M., *The Hindu Pantheon in The Industrial Arts of India*, London, 1880, P.35.

ಪರಿಕಲ್ಪನೆಗಳನ್ನು ನಿಶ್ಚಿತ ಪುರಾಣ ಸಮುದಾಯದ ರೂಪಕ್ಕಿಳಿಸಿದುವು. ಮನುಸ್ಮೃತಿ ಬ್ರಾಹ್ಮಣರ ಮೂಲ ದೇಶದ ನೆಲೆಯನ್ನು ಎರಡು ದಿವ್ಯನದಿಗಳ–ಸರಸ್ವತಿ ಮತ್ತು ದೃಷದ್ವತಿ–ನಡುವೆ ನಿರ್ದೇಶಿಸುತ್ತದೆ; ಒಂದು ಕಾಲಕ್ಕೆ ದೃಷದ್ವತಿ ರಾಜಾಸ್ಥಾನದ ಮರಳುಗೂಡಿದ ಉತ್ತರಭಾಗಗಳಿಗೆ ನೀರುಣಿಸುತ್ತಿತ್ತು. ರಾಜಾಸ್ಥಾನವಾದರೊ, 'ದೇವತೆಗಳು ಮೇಲಿಂದ ಮೇಲೆ ಬಂದು ಹೋಗುತ್ತಿದ್ದುದರಿಂದ, ಬ್ರಹ್ಮಾವರ್ತ ವೆಂದು ಋಷಿಗಳಿಂದ ನಾಮಕರಣಗೊಂಡಿತ್ತು'. 'ಬ್ರಹ್ಮರ್ಷಿಗಳ ಈ ನಾಡು ಪ್ರಾಚೀನ ರಾಜರ ಮತ್ತು ಹಿಂದೂ ಪುರಾಣಗಳ ಮುನಿಗಳ ನಾಡಾಗಿತ್ತು'. ಇಲ್ಲಿ ಭವ್ಯ ಸಂಸ್ಕೃತಭಾಷೆ ಮತ್ತು ದಶಮಾಂಶ ಅಂಕಪದ್ಧತಿ ಪರಿಪೂರ್ಣಗೊಂಡುವು.

ಧರ್ಮದ ವ್ಯವಸ್ಥಿತ ಬೆಳವಣಿಗೆಯಲ್ಲಿ ರಾಜಾಸ್ಥಾನ ಕ್ರಿಯಾತ್ಮಕವಾಗಿ ಭಾಗಿಯಾದುದಕ್ಕೆ ಈ ಪವಿತ್ರ ಸಾಹಿತ್ಯದ ಸಾಕ್ಷ್ಯವಿರುವಾಗ , ಈ ಪ್ರಾಂತದ ಜಾನಪದ ರಾಷ್ಟ್ರದ ಅತ್ಯಂತ ಸಮೃದ್ಧ ಜಾನಪದಗಳಲ್ಲಿ ಒಂದಾಗಿರುವುದು ಸಹಜವಷ್ಟೆ. ಪೌರಾಣಿಕ ನಂಬಿಕೆ, ಸಂಪ್ರದಾಯಗಳು ಪ್ರಾಚೀನತಮ ಕಾಲದಿಂದ ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ವಿನ್ಯಾಸಗಳ ಸಾಹಿತ್ಯವನ್ನುಳಿಸಿಕೊಂಡಿವೆ.

ಜಗತ್ತಿನ ವಿವಿಧ ಧರ್ಮಗಳು ಆದಿಮಾನವನ ಅಂಧಶ್ರದ್ಧೆ, ನಿಷ್ಠೆಗಳಲ್ಲಿ ಉಗಮಗೊಂಡವೆಂಬುದು ಅವಿವಾದಿತ ಸತ್ಯ. ತನ್ನೆಲ್ಲ ಜ್ಞಾನ, ತತ್ವದರ್ಶನಗಳ ಕಾಪಟ್ಯಸಹಿತ, ಧರ್ಮ ಈ ಕುರುಡು ನಂಬಿಕೆಗಳನ್ನು ದೂರೀಕರಿಸಲು ಸಮರ್ಥ ವಾಗಿಲ್ಲ. ನಾಗರಿಕ ಮತ್ತು ಅನಾಗರಿಕ ಸಮಾಜ ಹಾಗೂ ಗುಂಪುಗಳಲ್ಲಿ ಈ ನಂಬಿಕೆಗಳ ನಡುವೆ ಸ್ವಲ್ಪ ಅಂತರವಿರಬಹುದು; ಆದರೆ ಮೂಲ ತಳಹದಿ ಸಾರತ: ಒಂದೇ ಆಗಿ ಉಳಿಯುತ್ತದೆ.

ಭಾರತದಲ್ಲಿ, ದೇವ ದೇವಿಯರ ಪೂಜೆ ಮತ್ತು ಪ್ರಸನ್ನೀಕರಣ ಹಾಗೂ ಅವರಿಗೆ ಸಂಬಂಧಿಸಿದ ಮೂಢನಂಬಿಕೆಗಳು, ಆಚರಣೆಗಳು ಮತ್ತು ಚಿಹ್ನೆಗಳು ನಿತ್ಯಜೀವನ ದಲ್ಲಿ ಬೇರ್ಪಡಿಸಲಾಗದಂತೆ ಆಳವಾಗಿ ಬೇರೂರಿವೆ. ಕುಲದೇವತಾ ಚಿಹ್ನೆಗಳೆಂದು ಅಂಧಶ್ರದ್ಧೆಯಿಂದ ಪರಿಗಣಿತವಾಗುವ ಭೌತವಸ್ತುಗಳನ್ನು ಡಾ. ಫ್ರೇಜರ್ ವರ್ಣಿಸಿ ದ್ದಾರೆ. ಭಾರತದಲ್ಲಿಂತೂ ಅಂತೆ ರಾಜಾಸ್ಥಾನದಲ್ಲೂ ವಿವಿಧ ಸಮಾಜಗಳಲ್ಲಿ ಅವುಗಳ ಕುಲದೇವತಾ ಚಿಹ್ನೆಗಳ ಅಭಾವವಿಲ್ಲ. ಕುಲದೇವತಾ ಪದ್ಧತಿಯ ಬೇರುಗಳು ಆದಿಮ, ಅನಾಗರಿಕ ಬುಡಕಟ್ಟುಗಳೊಡನೆ ಸಂಬಂಧಗೊಂಡಿವೆ; ಆದರೆ ಭಾರತೀಯ ಜನಪದ ಜೀವನದಲ್ಲಿ ಸಾಂಸ್ಕೃತಿಕ ಮಹತ್ವವನ್ನು ಗಳಿಸಿಕೊಂಡಿಲ್ಲ. ಉದಾಹರಣೆಗೆ, ಅರಳಿ ಮತ್ತು ಆಲ ಹಿಂದೂಗಳ ಪಾಲಿಗೆ ಧಾರ್ಮಿಕ ಪಾವಿತ್ರ್ಯವುಳ್ಳವು; ಅರಳಿಮರ ಬೋಧಿವೃಕ್ಷವಾಗಿ ಬೌದ್ಧರಿಂದಲೂ ಪೂಜೆಗೊಳ್ಳುತ್ತದೆ. ವಿವಾಹಿತ ಹಿಂದೂ ಸ್ತ್ರೀಯರು ತಮ್ಮ ಗಂಡಂದಿರ ದೀರ್ಘಾಯುಷ್ಯಕ್ಕಾಗಿ ಮತ್ತು ಯಶಸ್ವೀ ದಾಂಪತ್ಯ ಜೀವನಕ್ಕಾಗಿ ಅರಳಿ, ಆಲಗಳನ್ನು ಪೂಜಿಸುತ್ತಾರೆ. ಕೆಲವು ಮರಗಳು ದೆವ್ವ ಮತ್ತಿತರ ದುಷ್ಟಶಕ್ತಿಗಳ, ಭೈರವ ಅಥವಾ ಭೈರೋನ್‌ನ ಹಾಗೂ ಮೃತ ಪೂರ್ವಿಕರ ಆವಾಸವೆಂದು ನಂಬುತ್ತಾರೆ. ಸಿಡುಬು, ದಡಾರ, ವಿಷಮಶೀತಜ್ವರ, ಉನ್ಮಾದಗಳಂತಹ ಕೆಲವು ರೋಗಗಳನ್ನು ನಿರ್ದಿಷ್ಟ ದೇವ, ದೇವಿಯರಿಗೆ ಅಥವಾ

ದುಷ್ಟ ಶಕ್ತಿಗಳಿಗೆ ಆರೋಪಿಸಲಾಗುತ್ತದೆ.

ರಾಜಾಸ್ಥಾನದ ಮೂಲನಿವಾಸಿ ಭಿಲ್ಲರು ಭೂತಪ್ರೇತ ಪಿಶಾಚಿಗಳನ್ನು ದೂರವಿಡುವುದಕ್ಕಾಗಿ ತಮ್ಮ ತೋಳುಗಳಲ್ಲಿ ಯಂತ್ರ, ತಾಯಿತಿಗಳನ್ನು ಧರಿಸುತ್ತಿದ್ದರು. ಪಾಟದಲ್ಲಿ ಅವರಿಗೆ ಬಹುತೇಕ ಧಾರ್ಮಿಕವಾದ ನಂಬಿಕೆಯಿತ್ತು. ಭಿಲ್ಲರು ಯಾವಾಗಲೂ ಕಾನೂನುರಹಿತರೆಂದು ನಂಬುವ ಬ್ರಿಟಿಷ್ ಅಧಿಕಾರಿಗಳು, ದರೋಡೆಯ ಆರೋಪ ಹೊತ್ತ ಭಿಲ್ಲನೊಬ್ಬ ಸಾಮಾನ್ಯವಾಗಿ ಹೀಗೆ ಹೇಳುವುದನ್ನು ದಾಖಲಿಸಿದ್ದಾರೆ: "ನನ್ನದು ತಪ್ಪಿಲ್ಲ, ನಾನು ಮಹಾದೇವನ ಕಳ್ಳ". ದರೋಡೆ ಪ್ರವೃತ್ತಿಯ ಭಿಲ್ಲರ ಹಿನ್ನೆಲೆ ಅಥವಾ ಮಂಜೂರಾತಿಯನ್ನು ಈ ಒಪ್ಪಿಗೆ ವಿವರಿಸುತ್ತದೆ.

ನಂಬಿಕೆಯ ಪ್ರಕಾರ, ಪ್ರಭು ಮಹಾದೇವ ಒಮ್ಮೆ ರೋಗಿಯೂ ಅಸುಖಿಯೂ ಆಗಿ ಕಾಡಿನ ನೆರಳಿನಲ್ಲಿ ಮಲಗಿದ್ದ. ಆಗ, ಕಡುಚೆಲುವೆಯೊಬ್ಬಳು ಅವನ ಮುಂದೆ ಕಾಣಿಸಿಕೊಂಡಳು. ಕೂಡಲೆ ಅವನ ವ್ಯಾಧಿಗಳೆಲ್ಲ ವಾಸಿಯಾದುವು. ಪ್ರಭು ಈ ವಿಚಿತ್ರ ಸುಂದರಿಗೆ ವಶನಾಗಿ ಅವಳಲ್ಲಿ ಹಲವು ಮಕ್ಕಳನ್ನು ಪಡೆದ. ಅವರಲ್ಲೊಬ್ಬ ಕುರೂಪಿಯೂ ದುಷ್ಟನೂ ಆಗಿದ್ದು, ತಂದೆಯ ಪ್ರೀತಿಯ ಗೂಳಿಯನ್ನು ಕೊಂದ. ಕೆರಳಿದ ಮಹಾದೇವ ಅವನನ್ನು ಮನುಷ್ಯ–ನಿವಾಸದಿಂದ ಹೊರದೂಡಿದ. ಹಾಗಾಗಿ, ಮಗ ದಟ್ಟಕಾಡನ್ನು ಆಶ್ರಯಿಸಿದ. ಭಿಲ್ಲರು ಅವನ ಸಂತಾನ–ಆದ್ದರಿಂದಲೆ "ನಾನು ಮಹಾದೇವನ ಕಳ್ಳ" ಎಂಬ ನಂಬಿಕೆ.

ರಾಜಾಸ್ಥಾನದ ಪ್ರಾಚೀನ ನಿವಾಸಿಗಳಲ್ಲಿ ಇನ್ನೊಂದು ಬುಡಕಟ್ಟಾದ ಮೀನರು ಕೂಡ ತಮ್ಮ ಪುರಾತನ ಕ್ಷತ್ರಿಯ ಮೂಲವನ್ನು ಸಾಬೀತುಪಡಿಸಲು ಪುರಾಣಕಥೆಯೊಂದನ್ನು ಉಲ್ಲೇಖಿಸುತ್ತಾರೆ. ಪರಶುರಾಮ ಕ್ಷತ್ರಿಯರನ್ನು ಭೂಮಿಯಿಂದ ತೊಲಗಿಸಲು ಸಂಕಲ್ಪಿಸಿದಾಗ, ಆ ದೃಢ ನಿಶ್ಚಯದ ಬ್ರಾಹ್ಮಣನಿಂದ ಪಾರಾಗುವುದಕ್ಕಾಗಿ ಕ್ಷತ್ರಿಯ ಸಮಾಜ ಕೃಷಿ, ವ್ಯಾಪಾರ ಮತ್ತಿತರ ಉದ್ಯಮಗಳಲ್ಲಿ ತೊಡಗಿತು. ಅವರು ಕ್ಷತ್ರಿಯರೇ ಎಂದು ಕೇಳಿದಾಗ, "ಮೈನ್ ನಾ" (ನಾನಲ್ಲ) ಎಂದು ಉತ್ತರಿಸುತ್ತಿದ್ದರು. "ಮೈನ್ ನಾ" ಎಂಬುದೇ ಕಡೆಗೆ ಮೆನಾ ಅಥವಾ ಮೀನಾ ಆಗಿ ಬದಲಾಯಿತು. ಮೀನರಲ್ಲಿ ಈಗಲೂ ಪ್ರಚಲಿತವಾಗಿರುವ ಪದ್ಧತಿಯೊಂದು ಈ ಪುರಾಣ ಕಥೆಯನ್ನು ದೃಢೀಕರಿಸುತ್ತದೆ. ದೀಪಾವಳಿಯ ಹಿಂದಿನ ದಿನ–ಕಾರ್ತಿಕಮಾಸದ ಕೃಷ್ಣಪಕ್ಷದ ಹದಿನಾಲ್ಕನೆಯ ದಿವಸ–ಪಿತೃಗಳಿಗೆ ತರ್ಪಣ ನೀಡುವುದಕ್ಕೆ ಸಂಬಂಧಿಸಿದೆ. ಈ ದಿನವೆ ಪರಶುರಾಮಪ್ರಭು ಪವಿತ್ರ ಬದರಿಕಾಶ್ರಮದಲ್ಲಿ ದೇಹತ್ಯಾಗ ಮಾಡಿದನೆಂದು ಅವರು ನಂಬುತ್ತಾರೆ.

ರಾಜಾಸ್ಥಾನದ ವಿವಿಧ ಜಾತಿ, ಉಪಜಾತಿ ಮತ್ತು ಬಣಗಳು ತಮ್ಮ ಪ್ರಾಚೀನ ಮೂಲವನ್ನು ಸ್ಥಾಪಿಸಲೋಸುಗ ತಮ್ಮವೇ ಆದ ಪುರಾಣಕಥೆ ಹಾಗೂ ಐತಿಹ್ಯಗಳನ್ನು ಪಡೆದಿವೆ. ರಜಪೂತರ ಪೈಕಿ, ರಾಮಾಯಣ, ಮಹಾಭಾರತಗಳ ವೀರರಿಂದ ಹುಟ್ಟಿಬಂದೆವೆಂದು ಹೇಳಿಕೊಳ್ಳುವವರು ಪ್ರಸಿದ್ಧರಾಗಿದ್ದಾರೆ. ಅಂತೆಯೆ, ರಜಪೂತರ ನಾಲ್ಕು ಅಗ್ನಿವಂಶಗಳ–ಚೌಹಾನರು, ಸೋಳಂಕಿಗಳು, ಪಾರಮಾರರು ಮತ್ತು ಪ್ರತೀಹಾರರು–ಉಗಮವಾದ ಅಬುಪರ್ವತದ ಯಜ್ಞಕುಂಡದ ಕತೆಯೂ

ಖ್ಯಾತವಾದುದು.

ನಾಗರಿಕತೆಯ ಅರುಣೋದಯ ಕಾಲದಿಂದ ಮನುಷ್ಯನನ್ನು ಬೆರಗುಗೊಳಿಸಿರುವ ಮತ್ತು ಅವನ ಅತ್ಯಂತ ಆಳವಾದ ಭಾವಗಳನ್ನು–ಆಸೆ, ನಿರಾಶೆ, ಪ್ರೀತಿ, ಆಶ್ಚರ್ಯ ಮತ್ತು ಭಯ–ಕೆರಳಿಸುವ ಕೆಲವು ನಿಸರ್ಗ ವಸ್ತುಗಳಿಗೆ ಮತ್ತು ನೈಸರ್ಗಿಕ ವ್ಯಾಪಾರಗಳಿಗೆ ಸಂಬಂಧಿಸಿದ ರಾಜಾಸ್ಥಾನದ ಜಾನಪದದ ಪೌರಾಣಿಕ ನಂಬಿಕೆಗಳನ್ನು ಈಗ ಚರ್ಚಿಸೋಣ.

## ನಿಸರ್ಗ ವ್ಯಾಪಾರಗಳು

### ವಿಶ್ವ

ಮನುಷ್ಯ ಅಸ್ತಿತ್ವಕ್ಕೆ ಬಂದಂದಿನಿಂದಲೂ ಪರಿಶೀಲನ, ಗ್ರಹಿಕೆ ಮತ್ತು ವ್ಯಾಖ್ಯಾನಗಳ ಅನಂತ ವಸ್ತುವಾಗಿದೆ, ವಿಶ್ವ. ಮನುಷ್ಯಜೀವಿಯ ಪಾಲಿಗೆ ವಿಶಾಲತಮ ವಿಶ್ವವಿದ್ಯಾನಿಲಯವಾಗಿರುವ ವಿಶ್ವ ಅಪರಿಮಿತ ಜ್ಞಾನದ ಆಕರ. ಸೂರ್ಯ, ಚಂದ್ರ ಮತ್ತು ನಕ್ಷತ್ರಗಳು, ಗಾಳಿ ಮತ್ತು ಮಳೆ, ಪರ್ವತಗಳು, ನದಿಗಳು ಮತ್ತು ಪ್ರವಾಹಗಳು, ಹೂವುಗಳು, ಮರಗಳು ಮತ್ತು ಪೊದೆಗಳು, ಪ್ರಾಣಿಗಳು ಮತ್ತು ಪಕ್ಷಿಗಳು, ವಿವಿಧ ಋತುಗಳು ಮತ್ತು ಇತರ ಪ್ರಕೃತಿ ವ್ಯಾಪಾರಗಳು ಮನುಷ್ಯನನ್ನು ದಿಗ್ಭ್ರಮೆಗೊಳಿಸಿವೆ; ಅವನು ದೃಶ್ಯ ಮತ್ತು ಪರಿಗ್ರಾಹ್ಯ ಜಗತ್ತಿನ ಎಲ್ಲ ವಸ್ತುಗಳನ್ನೂ ತನ್ನ ಆಶೋತ್ತರ, ಅಭೀಪ್ಸೆಗಳಿಗೆ ತಕ್ಕಂತೆ ಸಹಜಪ್ರವೃತ್ತಿ ಪೂರ್ವಕವಾಗಿ ವ್ಯಾಖ್ಯಾನಿಸಿದ್ದಾನೆ. ಮನುಷ್ಯನ ಪಾಲಿನ ಎಲ್ಲ ನಿಸರ್ಗ ವಸ್ತುಗಳೂ ಕ್ರಿಯಾಶೀಲ ಮತ್ತು ಚೈತನ್ಯಾತ್ಮಕ – ಅವನ ಸ್ವಂತ ಚಟುವಟಿಕೆಯ ಮತ್ತು ಚೈತನ್ಯದ ಒಂದು ಭಾಗ. ಆದ್ದರಿಂದ ಅವನು ತನ್ನ ಸ್ವಂತ ಅಸ್ತಿತ್ವದ ಪ್ರತಿಫಲವನ್ನು ಪ್ರಕೃತಿಯಲ್ಲಿ ಕಾಣಲು ಯತ್ನಿಸುತ್ತಾನೆ. ಅವನ ಪಾಲಿಗೆ ಭೂಮಿ ಕೇವಲ ಬಂಡೆ, ಮಣ್ಣುಗಳ ಒಂದು ಕಠಿಣವಸ್ತುವಲ್ಲ; ತನ್ನಂತೆ ಹುಟ್ಟಿ ಜೀವಿಸುವ ಎಲ್ಲವನ್ನೂ ಪೋಷಿಸುವ ಭೂಮಿ ತಾಯಿ.

ಆದಿಮ ಮನುಷ್ಯ ಪ್ರಕೃತಿ ವ್ಯಾಪಾರಗಳಿಗೆ ಕ್ರಿಯೆ ಪ್ರತಿಕ್ರಿಯೆಗಳನ್ನು ಪ್ರವೃತ್ತಿ ಪೂರ್ವಕ ರೀತಿಯಲ್ಲಿ ತೋರುತ್ತಾನೆ ಮತ್ತು ಪ್ರಕೃತಿ ತನ್ನನ್ನು ಅರ್ಥಮಾಡಿಕೊಂಡು ತಾನು ಬಯಸಿದ್ದನ್ನು ಮಾಡುತ್ತದೆಯೆಂದು ನಂಬುತ್ತಾನೆ. ಆದ್ದರಿಂದ ಅವನು ಪ್ರಕೃತಿಗೆ ಪ್ರಾರ್ಥನೆ ಸಲ್ಲಿಸಿ, ಇಷ್ಟಾರ್ಥಗಳನ್ನು ಕೋರುತ್ತಾನೆ. ವೇದಗಳು ನೈಸರ್ಗಿಕ ವ್ಯಾಪಾರಗಳನ್ನು ದೇವತೆಗಳೆಂದು ಗುರುತಿಸಿ, ಅವರ ಗೌರವಾರ್ಥ ಮಂತ್ರಗಳನ್ನು ಸೇರಿಸಿದ್ದು ಅಚ್ಚರಿಯಲ್ಲ. ವೇದಗಳಲ್ಲಿ ವಿಶ್ವ, ಸೂರ್ಯ, ಚಂದ್ರ, ಬೆಳಗು ಬೈಗುಗಳೆಲ್ಲ ವಿಶ್ವವಿಭುವೂ ಲೋಕಪಾಲಕನೂ ಆದ ಇಂದ್ರನ ಮುಖಂಡತ್ವದ ದೇವತೆಗಳೆಂದು ಮೂರ್ತರೂಪ ತಳೆದುವು. ರಾಜಾಸ್ಥಾನಿ ಜಾನಪದದಲ್ಲಿ ಮಳೆಗೆ ಅಥವಾ ಮಳೆ ಗಾಲಕ್ಕೆ ಸಂಬಂಧಿಸಿದ ಎಲ್ಲಕ್ಕೂ ನಿಯಾಮಕನಾದವನು ಈ ಇಂದ್ರನೇ.

ಆದರೂ, ಪ್ರಕೃತಿ ವ್ಯಷ್ಟಿಗೆ ಸಂಬಂಧಿಸಿದ್ದಲ್ಲ, ಸಮಗ್ರ ಸಮಾಜಕ್ಕೆ ಅಥವಾ ಜಗತ್ತಿಗೆ

ಸಂಬಂಧಿಸಿದ್ದು ಎಂಬುದನ್ನು ರಾಜಾಸ್ಥಾನಿ ಜಾನಪದ ಒಪ್ಪುತ್ತದೆಂಬುದು ಗಮನಾರ್ಹ. ರಾಜಾಸ್ಥಾನದ ಜನಪದಗೀತೆಗಳು ಮತ್ತು ಜನಪದಕಥೆಗಳು ಪ್ರಕೃತಿಯ ಬಗೆಗೆ ತಕರಾರುಗಳನ್ನು ಎಂದೂ ಪ್ರಕಟಿಸುವುದಿಲ್ಲ, ನಿಯತವಾಗಿ ಒಂದು ಸಮಾಜದ, ಗ್ರಾಮದ ಅಥವಾ ಪ್ರಾಂತದ ಭಾವಗಳನ್ನು ಅಭಿವ್ಯಕ್ತಿಸುತ್ತವೆ. ಮಳೆ ಅನಿಯತ ಅಥವಾ ವಿರಳವಾಗಿರುವ ಪ್ರದೇಶದಲ್ಲಿ ಮೇಘಾಚ್ಛಾದಿತ ಆಕಾಶ ತಮ್ಮ ತಪ್ತಭೂಮಿಗಳನ್ನು ಉಳುವಂತೆ ಇಡೀ ಪ್ರದೇಶವನ್ನು ಎಚ್ಚರಿಸುತ್ತದೆ; ಮಳೆಯ ದೇವತೆಯಾದ ಇಂದ್ರ ಉದಾರನೂ ಸುಂದರನೂ ಆಗುವನೆಂಬುದು ಅವರ ಆಸೆ.

ತನ್ನ ಹಾಡು, ಕತೆ, ಕುಣಿತ, ನಾಟಕ ಮತ್ತು ಲಾವಣಿಗಳ ಮಾಧ್ಯಮದ ಮೂಲಕ ರಾಜಾಸ್ಥಾನದ ಜಾನಪದ ವಿಶ್ವಕ್ಕೆ ಸಂಬಂಧಿಸಿದಂತೆ ಸಮಾಜದ ಅಭೀಪ್ಸೆಗಳಿಗೆ ವರ್ಷದ ಹನ್ನೆರಡು ತಿಂಗಳುಗಳ ಅಥವಾ ಬಾರಾಮಾಸಗಳ ಉದ್ದಕ್ಕೂ ಅಭಿವ್ಯಕ್ತಿ ನೀಡುತ್ತದೆ.

## ಸೂರ್ಯ ಮತ್ತು ಚಂದ್ರ

ಸೂರ್ಯ ವೈದಿಕ ದೇವತೆ. ಬೆಳಕು ಕೊಡುವವನು, ಕತ್ತಲು ಹರಿಸುವವನು ಎಂದು ಋಗ್ವೇದ ಅವನನ್ನು ಬಣ್ಣಿಸುತ್ತದೆ. ರಾಜಾಸ್ಥಾನಿ ಜಾನಪದ, ಅದರಲ್ಲೂ ಜನಪದ ಗೀತೆಗಳು ಮಾನುಷ ಜೀವನಕ್ಕೆ ಸೂರ್ಯ ಅಷ್ಟೇ ಮುಖ್ಯನೆಂದು ಒಪ್ಪುತ್ತವೆ. ಅನೇಕ ಜನಪದ ಗೀತೆಗಳ ವಸ್ತು ಹೀಗಿದೆ: ಸೂರ್ಯ ನಿತ್ಯವೂ ನಿರ್ದಿಷ್ಟ ವೇಳೆಯಲ್ಲಿ ಹುಟ್ಟುವುದೊಂದು ಪವಾಡ; ಸೂರ್ಯ ಹುಟ್ಟಿದಂತೆ, ಮಾಯೆ ಯಿಂದೆಂಬಂತೆ ಕತ್ತಲು ತೊಲಗುತ್ತದೆ, ಮತ್ತು ಅದ್ಭುತವಾದ ಆಕಾಶವನ್ನು ತುಂಬಿದ್ದ ಅಸಂಖ್ಯ ನಕ್ಷತ್ರಗಳು ಕೂಡಲೆ ಅದೃಶ್ಯವಾಗುತ್ತವೆ; ಸೂರ್ಯನೊಡನೆ ಜಗತ್ತು ಏಳುತ್ತದೆ; ಮಾನುಷಜೀವನ ಮತ್ತು ಪಶು, ಪಕ್ಷಿ ಜೀವನ ನವಶಕ್ತಿಯೊಡನೆ ಎಚ್ಚರ ವಾಗುತ್ತದೆ; ಮನುಷ್ಯನೂ ತನ್ನ ಕಾರ್ಯದಲ್ಲಿ ಮರಳಿತೊಡಗುತ್ತಾನೆ; ಮಾನವ ಉದ್ಯಮ, ಶ್ರಮ ಮತ್ತು ಕಠಿಣ ಕಾರ್ಯ ಸೂರ್ಯಕಿರಣಗಳಷ್ಟೆ ವೈಭವೋಪೇತ ಮತ್ತು ಉಜ್ವಲವಾಗಿರುತ್ತವೆ.

ರಾಜಾಸ್ಥಾನದ ರೈತನ ಪಾಲಿಗೆ ಸೂರ್ಯ ಒಂದು ನೈಸರ್ಗಿಕ ವಿದ್ಯಮಾನಕ್ಕಿಂತ ಮಿಗಿಲು. ಅವನ ಚಟುವಟಿಕೆಗಳು ಮತ್ತು ಬದುಕು ಸೂರ್ಯನೊಡನೆ ನಿಕಟವಾಗಿ ಸಂಬಂಧಗೊಂಡಿವೆ. ಸೂರ್ಯೋದಯವಾದಾಗ ಅವನು ಹೊಲಗಳಿಗೆ ಹೋಗು ತ್ತಾನೆ; ಹೊತ್ತು ಮುಳುಗಿದಾಗ ಹಿಂದಿರುಗುತ್ತಾನೆ. ಅವನ ಹೊಲಗಳು ಅವನ ಮನೆಯ ಪಶ್ಚಿಮಕ್ಕಿದ್ದರೆ, ಅದು ದೈವೀಕೃಪೆಯೆಂದು ಅವನು ಬಗೆಯುತ್ತಾನೆ; ಏಕೆಂದರೆ, ಅವನು ಕೆಲಸಕ್ಕೆ ಹೋಗುವಾಗ, ಅಂತೆಯೆ ಸಂಜೆ ಮನೆಗೆ ಮರಳುವಾಗ ಅವನು ಸೂರ್ಯನಿಗೆ ಬೆನ್ನು ಮಾಡಿರುತ್ತಾನೆ. ಅವನ ಬೆಳೆಗಳನ್ನು ಮಾಗಿಸುವುದು, ಅವನ ದನಗಳಿಗೆ ಹುಲ್ಲು ಬೆಳೆಸಲು ನೆರವಾಗುವುದು, ಅವನಿಗೆ ಮಳೆಯ ಭರವಸೆ ಕೊಡುವುದು ಸೂರ್ಯನ ಶಾಖ. ಮೋಡ ರೂಪುಗೊಳ್ಳಲು ಮತ್ತು ಅಂತಿಮವಾಗಿ ಕೃಷಿಗೆ ಜೀವಪ್ರಾಯವಾದ ಮಳೆ ಸುರಿಯಲು ಶಾಖ ಕಾರಣವೆಂಬುದನ್ನು ಸರಳ

ರಾಜಾಸ್ಥಾನಿ ಕೃಷಿಕ ಬಲ್ಲ.

ಸೂರ್ಯವಾಹನವಾಗಿ ಏಳು ಕುದುರೆಗಳಿಂದ ಎಳೆಯಲ್ಪಡುವ ರಥವೊಂದರ ಚಿತ್ರ ಋಗ್ವೇದದಲ್ಲಿದೆ. ಈ ಕುದುರೆಗಳು ವಿವಿಧ ಬಣ್ಣದವಾಗಿದ್ದು, ಸೂರ್ಯ ಕಿರಣಗಳಲ್ಲಿ ಆ ಬಣ್ಣಗಳು ಪ್ರತಿಫಲಿತವಾಗುತ್ತವೆ. ಈ ಬಣ್ಣಗಳ ಸಂಖ್ಯೆ ಏಳೆಂದು ನಿಗದಿಯಾಗಿರುವುದು ಅರ್ಥಪೂರ್ಣ; ಅವು ಮೂಲ ವರ್ಣಗಳಾಗಿದ್ದು, ಅವುಗಳ ಸಂಯೋಗಗಳಿಂದ ಇತರೆಲ್ಲ ವರ್ಣಗಳು ರೂಪುಗೊಳ್ಳುತ್ತವೆ. ಎಲ್ಲ ಜೀವಪ್ರಕಾರಗಳೂ ಈ ಸಪ್ತ ವರ್ಣಗಳಲ್ಲಿ ಸಾರತ: ಪ್ರಾತಿನಿಧ್ಯಗೊಂಡಿವೆ.

ಭೂಮಿಯ ಮೇಲೆ ವರ್ಣರಂಜಿತವಾದುದಕ್ಕೆಲ್ಲ ಸೂರ್ಯನೆ ಮೂಲ ಮತ್ತು ಆಕರ ಎಂದು ರಾಜಾಸ್ಥಾನಿ ಒಪ್ಪುತ್ತಾನೆ, ಋಗ್ವೇದ ಒಪ್ಪುವಂತೆ. ದೀರ್ಘ ಜನಪದ ಗೀತೆಯೊಂದು ಸೂರ್ಯನನ್ನೂ ಅವನ ಪತ್ನಿ ರೈನದೆಯನ್ನೂ ಸೂರ್ಯೋದಯದ ಸಮಸ್ತ ವೈಭವದಲ್ಲಿ ಚಿತ್ರಿಸುತ್ತದೆ. ಸೂರ್ಯ ಫಲಕಾರಕ ಶಕ್ತಿ; ಅವನ ಸ್ತುತಿ ಪ್ರಸಿದ್ಧವಾದ 'ಸೂರ್ಯಗೀತ'ದಲ್ಲಿ ಹೀಗಿದೆ:

ಬಿಳಿಯು, ಬಿಳಿಯು ಏನು ಹೇಳುತ್ತಿರುವೆ ?
ಕಾಡಿನಲ್ಲಿ ಹತ್ತಿ ಬಿಳಿದು, ಸೂರ್ಯನ ಕುದುರೆ ಬಿಳಿದು,
ಅವನ ಹೆಂಡತಿ ರೈನದೆಯ ಹಲ್ಲುಗಳು ಬಿಳಿಯವು.
ಉದಯಸೂರ್ಯನಲ್ಲಿ ಬೆಳಕು ತುಂಬಿದೆ, ಮುಳುಗುವಾಗ ಅದು ಕುಂಕುಮ.
ಹಸುಗಳು ಮೇಯಹೋಗುತ್ತಿವೆ, ಹಕ್ಕಿಗಳು ಹಾರುತ್ತಿವೆ.

ನಮ್ಮ ದೇವತೆಗಳು, ನಮ್ಮ ಧರ್ಮ ನಮ್ಮೊಡನಿವೆ.
ಓ ಸಂಗಾತಿಗಳೆ, ನನ್ನ ಮನೆಯಲ್ಲಿ ಹರೆಹೊಯ್ಯುತ್ತಿದ್ದಾರೆ.
ಓ ಸಂಗಾತಿಗಳೆ, ನನ್ನ ಮನೆಯಲ್ಲಿ ಉತ್ಸವಗಳಾಗುತ್ತಿವೆ.
ಕೆಂಪ, ಕೆಂಪ ಏನು ಹೇಳುತ್ತಿರುವೆ ? ಮದುವೆ ಕಂಕಣದ ಬಣ್ಣ ಕೆಂಪು.
ಸೂರ್ಯನ ಕುದುರೆ ಕೆಂಪು, ಸೊಸೆ ರೈನದೆಯ
ಕಣ್ಣು ಕೆಂಪು.[1]
ಹಸುಗಳು ಮೇಯಹೋಗುತ್ತಿವೆ.
ಕರಿಯು, ಕರಿಯು, ಏನು ಹೇಳುತ್ತಿರುವೆ ? ಕಾಡಿನ ಕಾಗೆ ಕಪ್ಪು
ಸೂರ್ಯನ ಕುದುರೆ ಕಪ್ಪು, ಸೊಸೆ ರೈನದೆಯ ಕೂದಲು ಕಪ್ಪು
ಹಸುಗಳು ಮೇಯಹೋಗುತ್ತಿವೆ.
ಹಳದಿ, ಹಳದಿ, ಏನು ಹೇಳುತ್ತಿರುವೆ ? ಬಟಾಣಿಬೇಳೆ ಹಳದಿ.
ಸೂರ್ಯನ ಕುದುರೆ ಹಳದಿ, ಸೊಸೆ ರೈನದೆಯ ಉಡುಪು ಹಳದಿ.
ಹಸುಗಳು ಮೇಯಹೋಗುತ್ತಿವೆ,
ಹಸುರು, ಹಸುರು ಏನು ಹೇಳುತ್ತಿರುವೆ ? ಕಾಡಿನ ಹುಲ್ಲು ಹಸುರು.

[1] Bryce, W., *Women's Folk-Songs of Rajputana*, Delhi, 1960, Pp. 135–37.

ಸೂರ್ಯನ ಕುದುರೆ ಹಸುರು, ಸೊಸೆ ರೈನದೆಯ ಹೊಟ್ಟೆ ಹಸುರು.
ಹಸುಗಳು ಮೇಯಹೋಗುತ್ತಿವೆ, ಹಕ್ಕಿಗಳು ಹಾರುತ್ತಿವೆ.
ನಮ್ಮ ದೇವತೆಗಳು, ನಮ್ಮ ಧರ್ಮ ನಮ್ಮೊಡನಿವೆ
ಓ ಸಂಗಾತಿಗಳೆ, ನನ್ನ ತಂದೆಯ ಮನೆಯಲ್ಲಿ ಹರೆ ಹೊಯ್ಯಲಾಗುತ್ತಿದೆ.
ಓ ಸಂಗಾತಿಗಳೆ, ನನ್ನ ಮಾವನ ಮನೆಯಲ್ಲಿ ಉತ್ಸವಗಳಾಗುತ್ತಿವೆ.

*ಚಂದ್ರ*

ಸೂರ್ಯ ಹೇಗೆ ತನ್ನದೇ ಆದ ಕಾಂತಿ, ಕೀರ್ತಿಗಳನ್ನುಳ್ಳವನಾಗಿದ್ದು, 'ಆನೆಗೊಂದು ಮಣ, ಇರುವೆಗೊಂದು ಕಣ' ಕೊಡುತ್ತಾನೊ ಹಾಗೆಯೆ ಚಂದ್ರನೂ ತನ್ನದೇ ಆದ ಸೌಂದರ್ಯ, ಲಾಲಿತ್ಯ, ಲೋಹಕತೆಗಳನ್ನುಳ್ಳವನಾಗಿದ್ದಾನೆ, ರಾಜಾಸ್ಥಾನಿ ಜಾನಪದ ದಲ್ಲಿ. ಸೂರ್ಯನಂತೆ ಚಂದ್ರನೂ ಬ್ರಹ್ಮಚಾರಿಯೇನಲ್ಲ. ರೋಹಿಣಿ ಅವನ ಪತ್ನಿ. ಆದರೆ ಈ ಆಕಾಶ ವಿದ್ಯಮಾನಗಳಿಗೆ ಸಂಬಂಧಿಸಿದಂತೆ ಜಾನಪದ ಅವರನ್ನು ದಂಪತಿಗಳೆಂದು ಕಲ್ಪಿಸಿಕೊಳ್ಳುವಷ್ಟರಲ್ಲೆ ಕೊನೆಗೊಳ್ಳುವುದಿಲ್ಲ. ಮಾನವ ಜೀವಿಗಳಿಗೆ ಸೂರ್ಯ, ಚಂದ್ರರಿಬ್ಬರೂ ಸದೃಶರೆಂದು ಅದು ಒಪ್ಪುತ್ತದೆ. ಅವರ ದಿನಚರಿ, ಅವರ ಸುಖ ದುಃಖಗಳು ಮಾನವರವಕ್ಕಿಂತ ಭಿನ್ನವಲ್ಲ.

ಸುಂದರವಾದ ಅರಣ್ಯವೊಂದರಲ್ಲಿ ಒಂದು ಉಯ್ಯಾಲೆಯನ್ನು ಹಾಕಲಾಗಿದೆ ಎನ್ನುತ್ತದೆ, ಒಂದು ಜನಪದ ಗೀತೆ. ಬಲವಾದ ರೇಷ್ಮೆಹುರಿಗಳು ಅದನ್ನು ಹಿಡಿದಿವೆ. ಸೂರ್ಯಪತ್ನಿ ರಾಣಿ ರೈನದೆ ಉಯ್ಯಾಲೆಯ ಮೇಲೆ ಕುಳಿತುಕೊಳ್ಳುತ್ತಾಳೆ, ಆದರೆ ಭೂಮಿ ಭಾರವನ್ನು ತಡೆಯಲಾರದು, ಆದ್ದರಿಂದ ಸೂರ್ಯ ಅದನ್ನು ತೂಗಾಡಿಸು ತ್ತಾನೆ; ಉಯ್ಯಾಲೆ ಆಕಾಶದಲ್ಲಿ ಮೇಲುಮೇಲಕ್ಕೇರುತ್ತದೆ. ಅಂಥದೇ ಉಯ್ಯಾಲೆ ಯನ್ನು ಚಂದ್ರಪತ್ನಿಯಾದ ರೋಹಿಣಿಗಾಗಿ ತಯಾರಿಸಲಾಗುತ್ತದೆ. ಅವಳು ಗಟ್ಟಿ ದನಿಯೊಡನೆ ಅದನ್ನು ತಳ್ಳಿ, ತೂಗಾಡಿಸುತ್ತಾಳೆ: ಓ! ಉಯ್ಯಾಲೆ ಆಗಸದಲ್ಲಿ ಮೇಲಕ್ಕೇರುತ್ತದೆ.[1]

ಸೂರ್ಯನಾಗಲಿ ಚಂದ್ರನಾಗಲಿ ಜನರ ಎಟುಕಿನಾಚೆಗಿಲ್ಲ. ಅವರು ಮಕ್ಕಳೊಡನೆ ಆಟವಾಡುತ್ತಾರೆ, ಜೋಕಾಲಿಯಾಡುತ್ತಾರೆ, ಕುಣಿಯುತ್ತಾರೆ ಮತ್ತು ಜನ ಅವರಿಂದ ನಿರೀಕ್ಷಿಸುವುದನ್ನೆಲ್ಲ ಮಾಡಲೊಪ್ಪುತ್ತಾನೆ. ಆದ್ದರಿಂದಲೆ, ಒಂದು ಜನಪದ ಗೀತೆ ಯಲ್ಲಿ ತುಸು ತಡವಾಗಿ ಏಳುವಂತೆ ತಾಯೊಬ್ಬಳು ಸೂರ್ಯನನ್ನು ಬೇಡುವುದು; ಏಕೆಂದರೆ ಅವಳ ಮಗಳು ಗಂಡನ ಮನೆಗೆ ಹೋಗುತ್ತಿರುವುದರಿಂದ, ಶಾಖ ಅವಳ ಮೃದುಚರ್ಮಕ್ಕೆ ಅಸಹನೀಯವಾಗುತ್ತದೆ. ಮತ್ತೊಂದು ಹಾಡಿನಲ್ಲಿ, ಅವಳು ತನ್ನ ಸಂತಾನಹೀನ ಮಗಳಿಗೆ ಭರವಸೆ ಕೊಡುತ್ತಾಳೆ, ಫಲವತ್ತತೆಯ ದೇವತೆಯಾದ ಸೂರ್ಯ ನಿಶ್ಚಿತವಾಗಿಯೂ ದಯೆ ತೋರುತ್ತಾನೆ ಮತ್ತು ಅವಳಿಗೆ ಮಗನನ್ನು ಅನುಗ್ರಹಿಸುತ್ತಾನೆ ಎಂದು.

[1] Detha, Vijaidan *Parampara*, Jodhpur, pp.84-85.

ಚಂದ್ರ ಚೆಲುವಿನ ಮತ್ತು ಲಾಲಿತ್ಯದ ಸಂಕೇತವಾದ್ದರಿಂದ, ರಾಜಾಸ್ಥಾನದಲ್ಲಿ ವಧುವನ್ನು ಆಗಾಗ 'ಚಂದ್ರಶರೀರೆ' ಎಂದು ವರ್ಣಿಸಲಾಗುತ್ತದೆ; ಪೌರುಷವಂತ ತರುಣನನ್ನು ಸುರಜ್ಮಲ್ ಎನ್ನಲಾಗುತ್ತದೆ.[1] ಎಲ್ಲ ತಾಯ್ತಂದೆಗಳೂ ತಮ್ಮ ಗಂಡುಮಕ್ಕಳಿಗೆ 'ಶರತ್‌ಪೂರ್ಣಿಮೆಯಂತೆ' ಸುಂದರಿಯಾದ ಸಂಗಾತಿಯನ್ನು ಮತ್ತು ಮದುವೆಗೆ ಬಂದ ಹೆಣ್ಣುಮಕ್ಕಳಿಗೆ 'ಉದಯಸೂರ್ಯನಂತೆ' ಪ್ರಕಾಶಮಾನನಾದ ವರನನ್ನು ಕಂಡುಕೊಳ್ಳಲು ಉತ್ಸುಕರಾಗಿರುತ್ತಾರೆ. ಗಂಡನನ್ನಗಲಿದ ರೂಪಸಿಯ ದುಃಖವನ್ನು ಚಂದ್ರ ಹೆಚ್ಚಿಸುತ್ತಾನೆ; ಅವನ 'ಬೆಂಕಿ' ಅವಳಿಗೆ ಅಸಹನೀಯವಾದುದ ರಿಂದ, ಅವನು 'ಮೋಡದ ಮುಸುಕಿನ ಮರೆಗೆ' ಹೋಗಲೆಂದು ಅವಳು ಬಯಸು ತ್ತಾಳೆ.

ಚಂದ್ರನ ವೃದ್ಧಿ, ಕ್ಷಯಗಳು ಕೂಡ ಜನಪದ ಗೀತೆಗಳಲ್ಲಿ ಅತ್ಯಂತ ಆಸಕ್ತಿಯ ವಿಷಯ. ವಿಧವೆಯೊಬ್ಬಳು ತನ್ನ ದುರದೃಷ್ಟವನ್ನು ಅರ್ಧಚಂದ್ರನಿಗೆ ಹೋಲಿಸು ತ್ತಾಳೆ; ಆದರೆ ಅರ್ಧಚಂದ್ರ ಪೂರ್ಣಿಮೆಯಂದು ಪೂರ್ಣಚಂದ್ರನಾಗಿ ಬೆಳೆಯುತ್ತಾನೆ, ತನ್ನ ಸ್ವಂತ ದುರವಸ್ಥೆಯಾದರೊ ಎಂದಿಗೂ ಉತ್ತಮಗೊಳ್ಳುವುದಿಲ್ಲವೆಂದು ಅವಳು ಕೂಡಲೆ ಅರಿತುಕೊಳ್ಳುತ್ತಾಳೆ; ಅದು ಸುಧಾರಣೆಗೆ ಮೀರಿದ್ದು.

## ಜಲಪ್ರಳಯ ಮತ್ತು ಮಳೆ

ರಾಜಾಸ್ಥಾನದ ಬಹುಭಾಗ ಮಳೆ–ನೆರಳಿನ ಪಟ್ಟಿಯಲ್ಲಿದೆ. ಆದ್ದರಿಂದ, ವಿಶಾಲ ಭೂಭಾಗಗಳನ್ನು ನೆರೆಯಿಂದ ನಾಶಗೊಳಿಸುವ ಪ್ರಕೃತಿ ಪ್ರಕೋಪದ ಅರ್ಥಪೂರ್ಣ ಉಲ್ಲೇಖ ಈ ಪ್ರದೇಶದ ಜಾನಪದಲ್ಲಿಲ್ಲದಿರುವುದನ್ನು ಅರ್ಥಮಾಡಿಕೊಳ್ಳಬಹುದು. ಈ ಪ್ರಾಂತದ ಕೆಲವು ಭಾಗಗಳು ಈಚಿನ ವರ್ಷಗಳಲ್ಲಿ ಕಂಡಿರುವ ಪ್ರಳಯ, ನಿಸರ್ಗಕ್ಕಿಂತ ಮಿಗಿಲಾಗಿ ಮಾನವನಿಂದಾದ ಪ್ರಕ್ರಿಯೆ; ನೆಲದ ವಿವೇಚನರಹಿತ ಬಳಕೆ ಮತ್ತು ನೀರ್ಗಾಲುವೆ ವ್ಯವಸ್ಥೆಯ ಒಡಕು ಅದಕ್ಕೆ ಕಾರಣ. ರಾಜಾಸ್ಥಾನದ ಗ್ರಾಮೀಣ ಜನತೆಗೆ ಗಾಳಿಯಷ್ಟೆ ಮುಖ್ಯವಾದದ್ದು ಮಳೆ. ಅವರ ಆಹಾರ, ಅಭ್ಯುದಯಗಳು ಸಂಪೂರ್ಣವಾಗಿ ಮಳೆಯನ್ನವಲಂಬಿಸಿವೆ. ಸೆಕೆ, ನಿರ್ಜಲತೆಗಳ ದೀರ್ಘಾವಧಿಯ ಬಳಿಕ ಈ ಜನ ಅನುಭವಿಸುವ ಸಮಾಧಾನ, ಸಂತೋಷಗಳನ್ನು ವರ್ಣಿಸುವುದಕ್ಕಿಂತ ಊಹಿಸಿಕೊಳ್ಳುವುದು ಸುಲಭ. ಬೆಂದ ನಸುಗಪ್ಪು ಭೂಮಿ ಹಸಿರುಗಂಬಳಿ ಹೊದೆ ಯುವ ತ್ವರಿತತೆ ಜನರನ್ನು ಆಶ್ಚರ್ಯಗೊಳಿಸುತ್ತದೆ.

ಮಳೆಯ ಮಾಸವಾದ ಶ್ರಾವಣಮಾಸದಲ್ಲಿ (ಜುಲೈ–ಆಗಸ್ಟ್) ರಾಜಾಸ್ಥಾನದ ಮಹಿಳೆಯರು ತಮ್ಮ ಅತ್ಯಂತ ಜನಪ್ರಿಯವಾದ *ತೀಜ್* ಹಬ್ಬವನ್ನು ತಮಗೆ ವಿಶಿಷ್ಟವಾದ ವರ್ಣಮಯತೆ ಮತ್ತು ಉಲ್ಲಾಸದಿಂದ ಆಚರಿಸುತ್ತಾರೆ. ಅದು ಇತರ ಅನೇಕ ಮುಖ್ಯ ಹಬ್ಬ, ಜಾತ್ರೆ ಮತ್ತು ಧಾರ್ಮಿಕ ಉತ್ಸವಗಳ ಖುತು.

ಈ ಉತ್ಸವ ಸ್ತ್ರೀಯರಿಗಷ್ಟೆ ಸೀಮಿತವಲ್ಲ; ಅದು ಸಾರ್ವತ್ರಿಕ. ಮೊದಲ ಹನಿ

[1] ಹಿಂದಿನ ಪುಟದಲ್ಲಿನದೇ.

ಬಿದ್ದಾಗ ಹಳ್ಳಿಗಳ ಪುಟ್ಟ ಮಕ್ಕಳು ಹಾರುತ್ತ, ಕುಣಿಯುತ್ತ, ಮೇಳಗೀತ ಹಾಡುತ್ತ ಮನೆಯಿಂದ ಹೊರಬರುತ್ತವೆ:

ಬಾರೋ ಬಾಗೋ ಮಳೆರಾಯ;
ಬಾರೋ, ತುಪ್ಪದಿ ತೊಯ್ದಿರುವ
ರೊಟ್ಟಿಯ ತಿನ್ನೋ ಮಳೆರಾಯ

ರಾಜಾಸ್ಥಾನದ ಮರುಭೂಮಿ ಪ್ರದೇಶಗಳ ಜನಪದಗೀತವೊಂದು ದಂಪತಿಯ ನಡುವಣ ಪ್ರಶ್ನೋತ್ತರ ರೂಪದಲ್ಲಿದೆ. ಹೆಂಡತಿ ಒಡವೆಗಳಿಗಾಗಿ ಗಂಡನನ್ನು ಒತ್ತಾಯಿಸುತ್ತಾಳೆ; ಒಮ್ಮೆ ಮಳೆಬಿದ್ದು, ಗದ್ದೆಗೆ ನೀರಿಳಿಯಲಿ, ಆಮೇಲೆ ನಿನ್ನ ಚೆಲುವ್ಮೆಗೆ ಎಲ್ಲ ಬಗೆಯ ಒಡವೆಗಳನ್ನೂ ತಂದುಕೊಡುತ್ತೇನೆ ಎಂದು ಗಂಡ ಅವಳಿಗೆ ಭರವಸೆ ಕೊಡುತ್ತಾನೆ.

ಈ ಕ್ಷುಲ್ಲಕ ಸಂಗತಿಗಳ ಬಗೆಗೆ ಅವಳಿಗೇಕೆ ಅಷ್ಟೊಂದು ಅಸಹನೆ ?

ಈ ಹಾಡು ಮತ್ತು ಇತರ ಹಾಡುಗಳ ಸಮುದಾಯ, ರಾಜಾಸ್ಥಾನದ ತೃಷಿತ ಭೂಮಿಗೂ ಮಳೆಗೂ ಇರುವ ಗಾಢ ಮತ್ತು ಅಭೇದ್ಯ ಸಂಬಂಧವನ್ನು ಒತ್ತಿ ಹೇಳುತ್ತವೆ. ಮಳೆಯಾದರೆ, ಜನತೆಯ ಮುಖ್ಯ ಆಹಾರವಾದ ಸಜ್ಜೆ (ಬಾಜ್ರ), ಜೋಳ, ಸಾವೆಗಳ ಬೆಳೆ ಸಮೃದ್ಧವಾಗುತ್ತದೆ; ಜನರಿಗೆ ಬಾವಿಯಲ್ಲಿ ಮತ್ತು ದನಕರುಗಳಿಗೆ ಹಳ್ಳಿಯ ಕೊಳಗಳಲ್ಲಿ ನೀರಿರುತ್ತದೆ. ಚಿನ್ನ ಬೆಳ್ಳಿಯ ಆಭರಣಗಳು, ದಂತದ ಬಳೆಗಳು, ಬಹುವರ್ಣರಂಜಿತ *ಲಹ್ರಿಯ* ಹಾಗೂ *ಚುಂದ್ರಿ*ಗಳು, ಮಕಮಲ್ಲಿನ ಪಾದರಕ್ಷೆ — ಇವು, ಮತ್ತೆಲ್ಲವೂ ಮಳೆಯನ್ನವಲಂಬಿಸಿವೆ. ಮಳೆ ಬರದಿದ್ದರೆ, ಎಲ್ಲ ವಿಫಲ: ಆಹಾರವಿಲ್ಲ, ಬಟ್ಟೆಯಿಲ್ಲ, ನೀರಿಲ್ಲ, ಒಡವೆಗಳಿಲ್ಲ, ಆಸೆಗಳ ಪೂರೈಕೆಯಿಲ್ಲ.

ಕಾಳಿದಾಸ ಮಾನವ ಭಾವಗಳಿಗೆ ಸಂಬಂಧಿಸಿದಂತೆ ನಿಸರ್ಗ ಸೌಂದರ್ಯವನ್ನು ಬದಲಾಗುವ ಋತುಚಕ್ರದ ಮೂಲಕ ವರ್ಣಿಸುವುದಕ್ಕಾಗಿ ತನ್ನ 'ಋತುಸಂಹಾರ''ವನ್ನು ರಚಿಸಿದ. ವರ್ಷದ ಹನ್ನೆರಡು ತಿಂಗಳುಗಳ ಮೂಲಕ ನಿಸರ್ಗವನ್ನು ಸಮೀಕ್ಷಿಸಲು ರಾಜಾಸ್ಥಾನಿ ಜನಪದ ಗೀತೆಗಳ ಪಾಲಿಗೂ ಒಂದು **ಬಾರಾಮಾಸ**ವುಂಟು. ಈ ಹಾಡು ಮುಂಗಾರಿನ ಮೊದಲ ಮಾಸವಾದ ಆಷಾಢದಿಂದ ವರ್ಷಾರಂಭವನ್ನು ಗುರುತಿಸು ವುದು ಅರ್ಥಪೂರ್ಣವಾಗಿದೆ:

ಕಡೆಗೂ ಬಂದಿದೆ ಬಹುಕಾಲದಿಂದ ಕಾದ ಈ ಮಾಸ
ಆಗಸವನ್ನು ಮೋಡ ಮುಸುಕಿದೆ
ಸಾವೆಯನ್ನು ಬಿತ್ತಲು ಇದು ಸಕಾಲ
ತಾಯಿ ಹೊಲಕ್ಕೆ ಉಣಿಸನ್ನೊಯ್ಯುತ್ತಿದ್ದಾಳೆ.

ಓ ಕರುಣಾಳು ದೇವ, ಎಂಥ ಸೊಗಸಾದ ಹವೆ !
ಇದು 'ಸವನ್' ಮಾಸ

ಸಾವೆಯ ಬೀಜಗಳು ಪೊಳೆತಿವೆ; ಹೊಲಗಳು
ಕಳೆಯಿಂದ ಮುಕ್ತವಾಗಿವೆ.
ಕಲ್ಲಂಗಡಿ ಮತ್ತು *ಕಚರ* ಬಳ್ಳಿಗಳನ್ನು
ಎಚ್ಚರದಿಂದ ಪೋಷಿಸಲಾಗುತ್ತದೆ.

ಓ ಕರುಣಾಳು ದೇವ, *ಭದೊನ್* ಮಾಸ ಬಂದಿದೆ:
ಕಲ್ಲಂಗಡಿಗಳು ಮಾಗಿ, ಸಿಹಿಯಾಗಿವೆ.
ಹಾಗೆಯೆ ಕುಂಬಳ ಮತ್ತು ಸಜ್ಜೆಯ (ಬಾಜ್ರ) *ಸೊಗರ*ಗಳು.

ಓ ಕರುಣಾಳು ದೇವ, 'ಅಶ್ವಿನ್' ಮಾಸ ಬಂದಿದೆ
ಸಾವೆ ಮಾಗುತ್ತಿವೆ; ಹಾಗೆಯೆ ನಮ್ಮ ಆಸೆ ಆಕಾಂಕ್ಷೆಗಳು.
ಕಾವಲುಗಾರರ ಕೂಗುಗಳು, *ಹಕ್ಕಲ್*ಗಳು ಕೇಳಿಬರುತ್ತವೆ
ಅವರು ಇರುಳಿನಲ್ಲೂ ಹೊಲಗಳನ್ನು ಕಾಯುತ್ತಿರಬೇಕು.

ಓ ಕರುಣಾಳು ದೇವ, 'ಕಾರ್ತಿಕ್' ಮಾಸ, ಇದೋ, ಬಂದಿದೆ.
ಸಜ್ಜೆ (ಬಾಜ್ರ) ಮತ್ತು ಜೋಳದ *ಸಿತ್ತ*ಗಳು ಸಮೃದ್ಧವಾಗಿ ಬಿದ್ದಿವೆ.
ಸಾಧ್ಯವಾದಷ್ಟು ಮೇಲ್ಲೋಣ.
ಮಾಗಿದ ಧಾನ್ಯ ಮುತ್ತಿನ ಹಾರವಂತಿದೆ.

ಓ ಕರುಣಾಳು ದೇವ, 'ಮಾಂಗ್‌ಸಿರ್' ಮಾಸ
ಚೇತರಿಸಿಕೊಳ್ಳುವ ಮಾಸ.
ಮಹಾಜನ್ ಬರುತ್ತಾನೆ ತನ್ನ ಲೆಕ್ಕದ ಪುಸ್ತಕಗಳ ಸಹಿತ,
ಫೈಸಲ್ ಮಾಡಿ ನಮ್ಮನ್ನು ಸಾಲದಿಂದ ಬಿಡುಗಡೆಗೊಳಿಸಲು.

ಓ ಕರುಣಾಳು ದೇವ, 'ಪೌಸ್' ಮಾಸ ಚಳಿ ತಂದಿದೆ;
'ಮಾಘಮಾಸ ನೀರನ್ನು ಕಲ್ಲು ಮಾಡಿದೆ.

ಓ ಕರುಣಾಳು ದೇವ, ಇದೋ 'ಫಾಗುನ್' ಮಾಸ;
ಭಗವಾನ್ ಕೃಷ್ಣ ಗೋಪಿಯರೊಡನೆ 'ಫಾಗ್' ಆಡುತ್ತಿದ್ದಾನೆ.
ಅದು ತನ್ನೊಡನೆ ಎಂಥ ಜೀವಂತ ಹರ್ಷೋನ್ಮಾದ ತಂದಿದೆ!

ಓ ಕರುಣಾಳು ದೇವ, ಚೈತ್ರಮಾಸ ತೊಡಗಿದೆ
ಚಂಪಕ ಅರಳಿದೆ; ನವಿಲು ಚಡಪಡಿಸುತ್ತಿದೆ.

ಮಳೆಯಿಲ್ಲದಿದ್ದರೂ ಮರಗಳು ಹೊಸ ಎಲೆಗಳನ್ನು
ತೊಟ್ಟಿವೆ.

ಓ ಕರುಣಾಳು ದೇವ, 'ಬೈಸಾಖ್' ಮಾಸ ಸುಡುವ
ಸೂರ್ಯನನ್ನು,
ಉಬ್ಬಸಪಡಿಸುವ ಧಗೆಯನ್ನು ತಂದಿದೆ;
ಇದು ನೆರಳಲ್ಲಿ ವಿರಮಿಸುವ ಹೊತ್ತು.

ಓ ಕರುಣಾಳು ದೇವ, 'ಜೇಠ್' ಮಾಸ ಸೂರ್ಯನನ್ನು
ಮತ್ತಷ್ಟು ಅಸಹನೀಯನನ್ನಾಗಿಸುತ್ತದೆ; ಆದರೆ ಇದು
*ಖೇಜ್ರಿ* ಮರವನ್ನು ಹತ್ತಿ ಸವಿಯಾದ *ಖೋಖಾ*
ಹಣ್ಣುಗಳನ್ನು ಮೆಲ್ಲುವ ಕಾಲ.[1]

ಇದು ರಾಜಾಸ್ಥಾನದ ಕೃಷಿಕನ ವಾರ್ಷಿಕ ಪಂಚಾಂಗ, ಋತುಚಕ್ರ; ಮೊದಲನೆಯ, ಮುಖ್ಯ ಋತುವಾದ ಮಳೆಗಾಲದ ಸುತ್ತ ತಿರುಗತಕ್ಕದ್ದು.

ರಾಜಾಸ್ಥಾನದ ಗ್ರಾಮೀಣ ಜನ ಆಗಾಗ ವಂಚಕ ಮೋಡಗಳಿಂದ ಮೋಸ ಹೋಗುತ್ತಾರೆ; ಅವು ಬಹು ನಿರೀಕ್ಷಿತ ಮಳೆಯ ಬದಲು ನಿರ್ಜಲ ಕ್ಷಾಮವನ್ನುಂಟು ಮಾಡುತ್ತವೆ. ಆಗ ಮಣ್ಣಿನ ಮಕ್ಕಳು ಮಳೆಮೋಡಗಳ ಅನ್ವೇಷಣೆಯಲ್ಲಿ ಮತ್ತೆ ಮತ್ತೆ ಆಗಸದತ್ತ ಕಣ್ಣು ಹಾಯಿಸುತ್ತಾರೆ; ಏಕೆಂದರೆ, ಮೋಡಗಳು ಮಳೆಯನ್ನು ಮಾತ್ರ ಕೊಡುವುದಿಲ್ಲ, ಅವರ ಜೀವರಸವನ್ನೇ ಕೊಡುತ್ತವೆ. ಮುಂಗಾರುಗಾಳಿ ಬರಲಿರುವ ಮಳೆಯ ಸುದ್ದಿಯನ್ನು ಅವರಿಗೆ ಕೊಡುತ್ತದೆ; ಅವರು ಸೂರ್ಯ ಅಥವಾ ಈಶಾನ್ಯದ ಗಾಳಿಯನ್ನು ಸೋದರನನ್ನಾಗಿ, ಪೂರ್ವದ ಗಾಳಿಯನ್ನು ಸೋದರಿಯನ್ನಾಗಿ ಪರಿಗಣಿಸುತ್ತಾರೆ. ಇದು ನಿಸರ್ಗ ಮತ್ತು ನೈಸರ್ಗಿಕ ಶಕ್ತಿಗಳನ್ನು ಕುರಿತ ಆದಿಮಾನವನ ಧೋರಣೆಗೆ–ಅವುಗಳಿಗೆ ಮಾನುಷ ರೂಪವನ್ನಿತ್ತು, ಅವುಗಳನ್ನು ತನ್ನ ಸ್ವಂತ ಕುಟುಂಬದ ಸದಸ್ಯರನ್ನಾಗಿ ಪರಿಗಣಿಸುವುದು–ಅನುಗುಣವಾಗಿದೆ. ಭೂಮಿ ಅವನಿಗೆ ತಾಯಿ, ಆಕಾಶ ತಂದೆ. ಆದ್ದರಿಂದ ಈ ಮಳೆ ಮಾರುತಗಳ ಸೋದರ, ಸೋದರಿಯರು; ಅವರು ಬಂದು ಹೊಲಗದ್ದೆಗಳಿಗೆ ನೀರುಣಿಸಿ, ಬಾವಿ, ಕೊಳ, ಕೆರೆಗಳನ್ನು ತುಂಬಬೇಕೆಂದು ಮಣ್ಣಿನ ಮಕ್ಕಳು ತಮ್ಮ ಜನಪದ ಗೀತೆಗಳಲ್ಲಿ ಬೇಡುತ್ತಾರೆ.

ರಾಜಾಸ್ಥಾನದ ಜಾನಪದ ಹೀಗೆ ಮಳೆಯನ್ನು ದೇವತೆಯನ್ನಾಗಿ ಮಾತ್ರವಲ್ಲ, ದೊರೆಯನ್ನಾಗಿ, ಮಾನವನನ್ನಾಗಿ ವ್ಯಕ್ತೀಕರಿಸುತ್ತದೆ; ಅವನು ಬಂದಾಗ, ರಾಜಾಸ್ಥಾನಿಯೊಬ್ಬ ನೀಡುವ ವಿಶೇಷ ಸ್ವಾಗತ, ಸನ್ಮಾನ, ಸೌಜನ್ಯ, ಶಿಷ್ಟಾಚಾರ,

[1] Bryce, W., *Women's Folk-Songs of Rajputana*, Delhi, 1910

ಆತಿಥ್ಯಗಳೆಲ್ಲ ಅವನಿಗೆ ಸಲ್ಲುತ್ತವೆ. 'ಇಂದ್ರರಾಜ' ನನ್ನು ಉದ್ದೇಶಿಸಿದ ರಾಜಾಸ್ಥಾನದ ಜನಪದ ಗೀತೆಗಳು, ಆದಿಮಾನವ ಪ್ರಕೃತಿಯಲ್ಲಿ ಇರಿಸಿರುವ ಶ್ರದ್ಧೆಗೆ ಪ್ರಬಲ ಪ್ರಮಾಣವಾಗಿವೆ; ನಿಸರ್ಗವನ್ನು ಅವನು ತನ್ನ ಬಯಕೆಗೆ ತಕ್ಕಂತೆ ವರ್ತಿಸುವ ತನ್ನ ಸ್ವಂತ ಪ್ರಜ್ಞೆಯ ಒಂದು ಭಾಗವಾಗಿ ಭಾವಿಸುತ್ತಾನೆ.

## ನದಿಗಳು

ನಿಸರ್ಗ ಶಕ್ತಿಗಳನ್ನು ಗೌರವದಿಂದ, ಇತರ ಬಂಧುಬಾಂಧವರಂತೆ ಕಾಣುವ ಹಾಗೆಯೇ ನದಿಗಳನ್ನೂ ಪವಿತ್ರ ಮತ್ತು ಗೌರವಾಸ್ಪದವೆಂದು ಭಾವಿಸಲಾಗುತ್ತದೆ; ಒಮ್ಮೊಮ್ಮೆ 'ತಾಯಿ' ಎಂಬ ವಿಶೇಷಣವನ್ನು ನದಿಯ ಹೆಸರಿಗೆ ಹಚ್ಚುವುದುಂಟು. ರಾಜಾಸ್ಥಾನ ಮರಳುಗಾಡು, ಮರುಭೂಮಿ, ನದೀತೀರದ ಭೂಪ್ರದೇಶವಲ್ಲ, ನಿಜ; ಆದರೆ ಭೂದೃಶ್ಯದ ಏಕತಾನವನ್ನು ಬೆಟ್ಟವೊಂದು ಭಗ್ನಗೊಳಿಸುವಲ್ಲೆಲ್ಲ ಅಲ್ಪಾವಧಿಯ ಮಳೆ ಕೂಡ ಬತ್ತಿದ ತೊರೆ ಅಥವಾ ನುಲ್ಲಾವನ್ನು ಹರಿಯುವಂತೆ ಮಾಡುತ್ತದೆ, ಅದರ ದಂಡೆಗಳಲ್ಲಿ ವಾಸಿಸುವ ಗ್ರಾಮೀಣರಿಗೆ ಇದರಿಂದ ಉಲ್ಲಾಸ. ಈ ನೀರು ಕೂಡ ಆ ಪ್ರದೇಶಕ್ಕೆ ಅಪಾರ ಲಾಭ ತರುತ್ತದೆ; ಅದಕ್ಕಾಗಿ ಮುಗ್ಧ ಗ್ರಾಮೀಣರು ಕೃತಜ್ಞರು. ಈ ನೀರು ಹತ್ತಿರದ ಬಾವಿಗಳಲ್ಲಿ ನೀರಿನ ಮಟ್ಟವನ್ನು ಏರಿಸುತ್ತದೆ; ನದೀ ಪಾತ್ರದಲ್ಲಿನ ಹಳ್ಳಗಳು ಪ್ರವಾಹ ನಿಂತ ಮೇಲೆ ಮತ್ತು ಮಳೆಗಾಲ ಮುಗಿದ ಮೇಲೆ ಬಹುಕಾಲ ದನಕರುಗಳಿಗಾಗಿ ನೀರನ್ನುಳಿಸಿಕೊಂಡಿರುತ್ತವೆ.

ನೀರು ರಾಜಾಸ್ಥಾನದ ಪಾಲಿಗೆ ಪರಮಪ್ರಧಾನವಾದುದು; ಬೆಳೆಗಳಿಗಾಗಿ ಅದನ್ನೊದಗಿಸುವ ನದಿಗಳು ಮಹೋಪಕಾರಿಗಳು (ಅದರಲ್ಲೂ ರಾಜ್ಯದ ಪೂರ್ವ ಭಾಗಗಳಲ್ಲಿ ಜಮೀನಿನ ಮೇಲೆ ನೆರೆಹರಿಯುವ ನದಿಗಳು; ಎಲ್ಲಕ್ಕಿಂತ ದೊಡ್ಡದು ರೂಪಾರೆಲ್: ಹಣ ಕೊಡುವ ಅಥವಾ ಬೆಳ್ಳಿ ತುಂತುರೆರಚುವ ಪ್ರವಾಹ ಎಂಬುದು ಅದರ ಅಕ್ಷರಾರ್ಥ). ಹಾಗೆಯೇ, ಪೂರ್ವ ಪ್ರದೇಶಗಳ ನಿವಾಸಿಗಳು ಲೂನಿ ನದಿಯನ್ನು ಕೂಡ (ಉಪ್ಪು ನೀರಿನ ಒಂದು ತೊರೆ) ತಮ್ಮ ಮಹಾಜಲಮೂಲ ಮತ್ತು ಉಪಕಾರಿ ಎಂದು ಭಾವಿಸುವುದಕ್ಕೆ ಎಲ್ಲ ಕಾರಣಗಳೂ ಉಂಟು. ಈ ಒರತೆ ಬೇಸಗೆಯಲ್ಲಿ ವಿರಳವಾಗುತ್ತದೆ; ಆದರೆ ವಿಶಾಲ, ಶುಷ್ಕ ನದೀಪಾತ್ರವನ್ನು ಸ್ವಲ್ಪ ಅಗೆದರೂ ಸಾಕು, ನೀರು ಜಿನುಗುತ್ತದೆ; ಅದನ್ನು ಹೆಂಗಸರು ಕೊಡಗಳಲ್ಲಿ ಸಂಗ್ರಹಿಸುತ್ತಾರೆ.

ಗ್ರಾಮೀಣರು ಭಾರತದ ಉದ್ದಗಲಕ್ಕೂ ನದಿಗಳಿಗೆ ಧಾರ್ಮಿಕ ಪಾವಿತ್ರ್ಯವಿಸ್ಸುತ್ತಿರುವುದಕ್ಕೆ ಈ ಸುಖಾವಹ ಮುಖವೇ ಕಾರಣ. ಗಂಗೆ ಸುರನದಿ; ಸ್ವರ್ಗದಿಂದಿಳಿದ ಬಳಿಕ ಅದು ಶಿವನ ಜಟ–ಮುಕತ್ ನಿಂದ ಹೊರ ಹರಿಯುತ್ತದೆ. ರಾಜಾಸ್ಥಾನದಲ್ಲಿ, ಅದರ ದೊರೆತ ಮರುಭೂಮಿ ಪ್ರದೇಶಗಳಲ್ಲಿ ಸಹ, ಸರಳರೂ ಅತ್ಯಂತ ಮುಗ್ಧರೂ ಆದವರಿಗೆ 'ಗಂಗಾಮಾಯಿ'ಯ ಪಾವಿತ್ರ್ಯ ಗೊತ್ತು. ಆದ್ದರಿಂದ, ಸೊರೊನ್ ಅಥವಾ ಹರಿದ್ವಾರಕ್ಕೆ ಯಾತ್ರೆ ಮಾಡಿ ಗಂಗೆಯ ಪಾವನ ತೀರ್ಥದಲ್ಲಿ ಮುಳುಗು ಹಾಕುವುದೊಂದು ಸಾಧುಕ್ರಿಯೆ; ಅದು ಮಿಂದವನಿಗೆ ಮಾತ್ರವಲ್ಲ, ಅವನ ಪೂರ್ವಜರಿಗೂ

ಮುಕ್ತಿ ದೊರಕಿಸುತ್ತದೆ; ಅವರನ್ನು ಅವನು ಸ್ಮರಿಸಿ, ಅವರಿಗೆ ತರ್ಪಣ ಕೊಡಬೇಕು. ಈ ಯಾತ್ರೆಯನ್ನು ಕೈಕೊಂಡು, ಪವಿತ್ರ ಗಂಗೋದಕದ ಒಂದು ಸೀಸೆಯೊಡನೆ ಹಿಂದಿರುಗುವಾತ ಕುಟುಂಬದ ಮತ್ತು ಇಡೀ ಸಮಾಜದ ಭಗೀರಥನೆಂದು ಪ್ರಶಂಸೆಗೊಳ್ಳುತ್ತಾನೆ. ಅವನ ಮತ್ತು 'ಗಂಗಾಮಾಯಿ'ಯ ಸ್ತುತಿರೂಪದಲ್ಲಿ ಜನಪದ ಗೀತೆಗಳನ್ನು ಹಾಡಿ ಅವನನ್ನು ಉತ್ಸವಪೂರ್ವಕವಾಗಿ ಬರಮಾಡಿಕೊಳ್ಳಲಾಗುತ್ತದೆ. ಗಂಗಾಜಲದ ಸೀಸೆಯನ್ನು ನೆಲದ ಮೇಲಿರಿಸದೆ, ತಲೆಯಮೇಲೆ ಅಥವಾ ಒಂದು ವರ್ಣಾಲಂಕೃತ ಬುಟ್ಟಿಯಲ್ಲಿ ಗೌರವದಿಂದೊಯ್ದು ಗೃಹಲಕ್ಷ್ಮಿಗೀಯಲಾಗುತ್ತದೆ; ಅವಳು ಅದನ್ನು ಅತ್ಯಂತ ಗೌರವದಿಂದ ಒಂದು ಎತ್ತರವಾದ ಜಾಗದಲ್ಲಿರಿಸುತ್ತಾಳೆ. ಈ ಸೀಸೆಯು ಸಾಂಪ್ರದಾಯಿಕ ತೆರೆಯುವಿಕೆ ಧಾರ್ಮಿಕ ವಿಧಿಗಳನ್ನು – ಪೂಜೆ ಮತ್ತು ಹವನ – ಅಗತ್ಯಗೊಳಿಸುತ್ತದೆ; ಅನಂತರ ಆಯಾ ವ್ಯಕ್ತಿಯ ಆರ್ಥಿಕ ಸ್ಥಿತಿ ಮತ್ತು ಆಕಾಂಕ್ಷೆಗೆ ಸಾಮೂಹಿಕ ಭೋಜನ.

ಸತ್ತವರ ಚಿತಾಭಸ್ಮವನ್ನು ಅಥವಾ ಅದರ ಒಂದು ಭಾಗವನ್ನು, ಸಾಗರಕ್ಕೆ ಮತ್ತು ಅಂತಿಮವಾಗಿ ಸ್ವರ್ಗಕ್ಕೆ ಒಯ್ಯಲೆಂದು, ವಿಸರ್ಜಿಸುವ ನದಿಯೂ ಹೌದು, ಗಂಗೆ. ಭಸ್ಮವನ್ನು ಕೂಡಲೆ ಗಂಗೆಗೊಯ್ಯುವುದು ಸಾಧ್ಯವಾಗದಿದ್ದರೆ, ಅದನ್ನೊಂದು ವಸ್ತ್ರದಲ್ಲಿ ಅಥವಾ ರೇಷ್ಮೆ ತುಣುಕಿನಲ್ಲಿ ಕಟ್ಟಿಟ್ಟು, ಮುಂದೇ ಅದೇ ಉದ್ದೇಶಕ್ಕಾಗಿ ಹೋಗುವ ಯಾರಾದರೊಬ್ಬರೊಡನೆ ಕಳುಹಿಸಲಾಗುತ್ತದೆ. ರಾಜಾಸ್ಥಾನದಲ್ಲಿ, ತಮ್ಮ ಜೀವನಯಾತ್ರೆಯ ಕಡೆ ಹಂತದಲ್ಲಿರುವವರ ಬಾಯಿಗೆ, ಅವರ ಪ್ರಾಣ ಹೋಗುವ ಮುನ್ನ ಒಂದು ಚಮಚ ಗಂಗಾಜಲವನ್ನು ಹಾಕುವುದು ಪದ್ಧತಿ.

ಗಂಗೆಯಂತೆ ಯಮುನೆಯೂ ಪವಿತ್ರವೆಂದು ಪರಿಗಣಿತವಾಗಿದೆ. ಮಥುರಾ, ಬೃಂದಾವನಗಳಲ್ಲಿ ಆ ನದಿಗೆ ಪ್ರಭು ಕೃಷ್ಣನ ಬಾಲ್ಯದ ಮತ್ತು ಗೋಕುಲದ ಗೋಪಗೋಪಿಯರೊಡನೆ ಅವನ ಲೀಲೆಯ ಸಾಹಚರ್ಯವಿದೆ. ಈ ನದಿ ಸಾವಿನ ದೇವತೆಯಾದ ಯಮನ ತಂಗಿ; **ಭಾಯಿ ದೂಜ್** ನಂದು ಅದರ ದಂಡೆಗಳಿಗೆ ಭೇಟಿ ಕೊಡುವುದೊಂದು ಪುಣ್ಯಕಾರ್ಯ–ಸೋದರಿಯರು ಸೋದರರೊಡನೆ ತೆರಳಿ, ಅವರಿಗೆ ಉಣಿಸಿದ ಪಕ್ಷದಲ್ಲಿ, ಸೋದರರು ಪ್ರತಿಯಾಗಿ ತಮ್ಮ ಸೋದರಿಯರಿಗೆ ಹಣ ಹಾಗೂ ವಸ್ತ್ರಗಳ ರೂಪದಲ್ಲಿ ಕಾಣಿಕೆಯಿತ್ತು ಮನ್ನಣೆ ಮಾಡುತ್ತಾರೆ.

ಗಂಗೆ, ಯಮುನೆ ಎರಡೂ ರಾಜಾಸ್ಥಾನದ ಸಾಮಾನ್ಯ ಜನರ ಹೃದಯಕ್ಕೆ ಹತ್ತಿರವಾಗಿದೆ. ಆದರೆ ರಾಜಾಸ್ಥಾನಕ್ಕೂ ಅವುಗಳಿಗೂ ಇರುವ ದೂರ ಎಷ್ಟೆಂದರೆ, ಅದು ಹಿಂದೆ ಬಹುತೇಕ ನಿಷೇಧಕವಾಗಿತ್ತು. ಆದರೂ ರಾಜಾಸ್ಥಾನದ ಗ್ರಾಮೀಣ ಜನ ತಮ್ಮ ಹತ್ತಿರ ಇರುವ ನದಿಗಳಿಗೇ ದೈವಿಕತೆ, ಪವಿತ್ರತೆಗಳನ್ನು ಆರೋಪಿಸುವುದರ ಮೂಲಕ ಈ ದೂರವನ್ನು ತಗ್ಗಿಸಿದ್ದಾರೆ. ಹೀಗಾಗಿ, ಚಂಬಲ್, ಬನಸ್, ಮಹಿ, ಸೋಮ್, ಪರ್ಬತಿ, ಬನಗಂಗಾ ಮತ್ತಿತರ ಸಣ್ಣ ನದಿಗಳು–ಜೈಪುರದ ಬಳಿಯ ಬಂದಿ ಕೂಡ ಸೇರಿದಂತೆ–ಬಹಳ ಗೌರವಾಸ್ಪದವಾಗಿದ್ದು, ಮಾತೆಯರೆಂದು ಹೆಸರಾಗಿವೆ. ಚಂಬಲ್ ದಂಡೆಗಳುದ್ದಕ್ಕೂ ಅನೇಕ ಸ್ಥಳಗಳು ಪವಿತ್ರವೆಂದು ಪರಿಣಿತವಾಗಿವೆ; ಸೂರ್ಯಗ್ರಹಣ ಅಥವಾ ಚಂದ್ರಗ್ರಹಣದಂದು ಮತ್ತು ಮಕರ ಸಂಕ್ರಾಂತಿ

ಯಂತಹ ಪವಿತ್ರ ದಿನಗಳಂದು ಇವುಗಳಲ್ಲಿ ಮುಳುಗುಹಾಕುವುದು ಪುಣ್ಯಕಾರ್ಯ ವೆಂದು ಭಾವಿಸಲಾಗಿದೆ.

ಎರಡು ನದಿಗಳು ಕೂಡುವಲ್ಲಿ ಗ್ರಾಮೀಣ ಮಂದಿ ಮೂರನೆಯ ನದಿಯೊಂದನ್ನು ಪ್ರಯಾಗದಲ್ಲಿ ಸರಸ್ವತಿಯಂಥ ಗುಪ್ತನದಿಯನ್ನು-ಕಲ್ಪಿಸಿಕೊಳ್ಳುತ್ತಾರೆ; ಸಂಗಮ ಪವಿತ್ರವೆಂದು ಪರಿಗಣಿತವಾಗಿದೆ. ಸವಾಯಿ ಮಧೋಪುರ್ ಜಿಲ್ಲೆಯಲ್ಲಿ, ಚಂಬಲ್, ಬನಸ್ ಮತ್ತು ಸರಸ್ವತಿಯೆನಿಸಿದ ಇನ್ನೊಂದು ನದಿಯ ಸಂಗಮವನ್ನು ಮೀನರು, ಗುಜರರು ಮತ್ತು ಇತರ ಜಾತಿಗಳವರು ಕೂಡ ಬಹು ಪವಿತ್ರವೆಂದು ಭಾವಿಸುತ್ತಾರೆ. ಈ ಸ್ಥಳ-ರಾಮೇಶ್ವರ-ಬಹು ಪ್ರಾಚೀನ ನಿವೇಶನವೆಂದು ನಂಬಲಾಗಿದೆ; ರಾಮ, ಸೀತೆ, ಲಕ್ಷ್ಮಣರು ಅಯೋಧ್ಯೆಯನ್ನು ಬಿಟ್ಟಬಳಿಕ ಅಲ್ಲಿಗೆ ಹೋಗಿದ್ದರಂತೆ. ಹಾಗೆಯೆ, ಭಿಲ್‌ಪ್ರಧಾನವಾದ ದುಂಗರ್‌ಪುರ್ ಜಿಲ್ಲೆಯಲ್ಲಿ, ಬೆನೇಶ್ವರ್ ಹತ್ತಿರ ಮಹಿ, ಸೋಮ್ ಮತ್ತು ಜಖಂ ನದಿಗಳ ಸಂಗಮ ಕಡಿಮೆ ಪವಿತ್ರವೇನಲ್ಲ. ರಾಜಾಸ್ಥಾನದ ಆದಿವಾಸಿ ಭಿಲ್ಲರ ಪಾಲಿಗೆ ಇದು ದಿಟವಾಗಿಯೂ ಪ್ರಯಾಗವೇ.

## ದೇವ, ದೇವಿಯರು

ರಾಜಾಸ್ಥಾನದ ಜನ ವೈದಿಕ ಮತ್ತು ಪೌರಾಣಿಕ-ಎರಡೂ ಬಗೆಯ ದೇವತೆಗಳನ್ನೊಪ್ಪಿಕೊಂಡಿದ್ದಾರೆ; ಆದರೆ ಈ ಒಪ್ಪಿಗೆ, ದೇವದೇವಿಯರಿಗೆ ಕೊಟ್ಟಿರುವ ರೂಪ, ಗುಣಗಳಲ್ಲಿ ದೇಶದ ಇತರ ಭಾಗಗಳಿಂದ ಭಿನ್ನವಾಗಬಹುದು. ವೈದಿಕ ದೇವತೆ ಗಳ ಪೈಕಿ, ಅಸೀಮ ನೀಲಾಕಾಶದ ದೇವತೆ ಇಂದ್ರ ಮಳೆಯ ದೇವತೆ. ಹಿಂದೆಯೇ ಹೇಳಿದಂತೆ, ಸೂರ್ಯ ಆಕಾಶದೇವತೆ. ಈ ಇಬ್ಬರು ದೇವತೆಗಳೂ ಮನುಕುಲಕ್ಕೆ ಕರುಣಿಸುವ ಲಾಭಗಳಿಂದಾಗಿ ಜನಸಾಮಾನ್ಯರ ಪಾಲಿಗೆ ಪರಮರಾಗಿದ್ದಾರೆ.

ಅಮಲುಬರಿಸುವ ಸೋಮ ಸಸ್ಯರಸದ ವೈದಿಕ ವ್ಯಕ್ತೀಕರಣವೆ ಸೋಮ; ರಸವನ್ನು ಬೆಳ್ದಿಂಗಳಿನಲ್ಲಿ ಸಂಗ್ರಹಿಸುತ್ತಿದ್ದುದರಿಂದ, ಮುಂದೆ ಆ ಹೆಸರನ್ನು ಚಂದ್ರನೊಡನೆ ಸಮೀಕರಿಸಲಾಯಿತು. ರಾಜಾಸ್ಥಾನಿಗಳು 'ಚಂದ್' ಎಂಬುದನ್ನು ಸೋಮನ ಜನ ಪ್ರಿಯ ವಿಶೇಷಣವಾಗಿ ಸ್ವೀಕರಿಸಿದ್ದಾರೆ; ಅವನು ತನ್ನ ಹಾಲುಬೆಳಕಿನ ಸಾಂತ್ವನಕರ ಕಿರಣಗಳಿಂದ ಭೂಮಿಯ ಮೇಲೆ ಅಮೃತವನ್ನು ಸಿಂಪಡಿಸುತ್ತಾನೆ. ರಾಜಾಸ್ಥಾನದ ವಿವಾಹಿತ ಸ್ತ್ರೀಯರು ವರ್ಷದ ನಾಲ್ಕು **ಚೌತ್** (ಹಿಂದೂ ಮಾಸದ ನಾಲ್ಕನೆಯ ದಿವಸ) ಗಳನ್ನು ಉಪವಾಸ ದಿನಗಳಾಗಿ ಆಚರಿಸುತ್ತಾರೆ ಮತ್ತು ಚಂದ್ರನಿಗೆ ಅರ್ಘ್ಯವಿತ್ತ ಬಳಿಕವೆ ಆಹಾರ ತೆಗೆದುಕೊಳ್ಳುತ್ತಾರೆ.

ವೇದಗಳಲ್ಲಿ ಗಾಳಿಯ ದೇವತೆಯಾದ ವಾಯು ರಾಜಾಸ್ಥಾನಿಗೆ ಆ ರೀತಿ ಪರಿಚಿತನಲ್ಲ. ಆದರೆ ಅವನ ಮಗ ಹನುಮಂತ ರಾಜಾಸ್ಥಾನದಲ್ಲೆಲ್ಲ ಅತ್ಯಂತ ಜನಪ್ರಿಯ ದೇವತೆಗಳಲ್ಲೊಬ್ಬ. ವರುಣ ಜಲದೇವತೆ; ಆದರೆ ಅವನ ಪರಿಚಯ ರಾಜ್ಯದಲ್ಲಿ ಅತ್ಯಲ್ಪ. ಯಮನಾದರೊ ಸಾವಿನ ಮತ್ತು ತೀರ್ಪಿನ ಭಯಂಕರ ದೇವತೆ. ಕುಬೇರ ಸಂಪತ್ತಿನ ದೇವತೆ.

ಕ್ರಮವಾಗಿ ಸೃಷ್ಟಿಕರ್ತ, ಸಂರಕ್ಷಕ; ಹಾಗೂ ವಿನಾಶಕರಾದ ಬ್ರಹ್ಮ ವಿಷ್ಣು ಮಹೇಶ

– ಈ ಪೌರಾಣಿಕ ತ್ರಿಮೂರ್ತಿಗಳು ರಾಜಾಸ್ಥಾನದಲ್ಲಿ ಅನೇಕ ರೂಪಗಳಲ್ಲಿ ಪೂಜೆಗೊಳ್ಳುತ್ತಾರೆ. ಇಡೀ ದೇಶದಲ್ಲಿ ಬ್ರಹ್ಮನಿಗೆ ಮೀಸಲಾದ ಎರಡು ದೇವಾಲಯಗಳಲ್ಲಿ ಒಂದು ರಾಜಾಸ್ಥಾನದಲ್ಲಿದೆ – ಅಜ್ಮೀರದ ಬಳಿ ಪುಷ್ಕರದಲ್ಲಿ. ಆದರೆ ಅವನ ವಿಗ್ರಹ ಶಿವನ ಎಲ್ಲ ದೇವಾಲಯಗಳಲ್ಲುಂಟು.

ರಾಜಾಸ್ಥಾನದಲ್ಲಿ ವಿಷ್ಣು ಅನೇಕ ರೂಪಗಳಲ್ಲಿ ವ್ಯಕ್ತವಾಗುತ್ತಾನೆ – ಚತುರ್ಭುಜ, ಚಾರ್ಭುಜ, ಕಲ್ಯಾಣ್ಜಿ, ನಾರಾಯಣ್ – ಇತ್ಯಾದಿ; ಅವನ ಎರಡು ಪ್ರಮುಖ ಅವತಾರಗಳು ರಾಮ ಮತ್ತು ಕೃಷ್ಣ. ವಿಷ್ಣುವಿನ ಪತ್ನಿ ಲಕ್ಷ್ಮಿ ಸಂಪತ್ತು, ಸಮೃದ್ಧಿಗಳ ದೇವಿ; ಅವಳನ್ನು ದೀಪಾವಳಿಯ ರಾತ್ರಿ ಅರ್ಚಿಸಲಾಗುತ್ತದೆ.

ಮಹೇಶ ಅಥವಾ ಮಹೇಶ್ವರ ಎಂದರೆ ಶಿವ, ಹಿಂದೂ ತ್ರಿಮೂರ್ತಿಗಳಲ್ಲಿ ಮೂರನೆಯವನು. ಪ್ರಕೃತಿಯ ವಿನಾಶಶಕ್ತಿಗಳ ಅಥವಾ ಅದರ ಪರಿವರ್ತಕ ಹಾಗೂ ಸಂತಾನೋತ್ಪಾದಕ ಶಕ್ತಿಯ ವ್ಯಕ್ತೀಕರಣ. ತನ್ನ 'ಶಕ್ತಿ' – ಪಾರ್ವತಿ ಅಥವಾ ಗೌರಿ–ಯೊಡನೆ ಅವನು ಮಂಗಳಕರ ಹಾಗೂ ಭಯಂಕರ ಮುಖಗಳೆರಡರಲ್ಲೂ ಕಾಣಿಸಿಕೊಳ್ಳುತ್ತಾನೆ. ಶಿವದೇವಾಲಯಗಳು ರಾಜಾಸ್ಥಾನದಲ್ಲಿ ಪ್ರಾಯಶಃ ಪ್ರಾಚೀನತಮವಾದುವು. ಅವನ ಪತ್ನಿ ಪಾರ್ವತಿ ಕೂಡ ಅನೇಕ ರೂಪಗಳಲ್ಲಿ ಅಭಿವ್ಯಕ್ತಿಗೊಂಡಿದ್ದಾಳೆ; ಆದರೆ ದುರ್ಗ, ಭವಾನಿ ಅಥವಾ ದೇವಿಯಾಗಿ ಅವಳು ಈ ನಾಡಿನ ಕೆಲವು ಪ್ರಾಚೀನತಮ ಆದಿವಾಸಿ ಮತ್ತು ಕ್ಷತ್ರಿಯ ವರ್ಗಗಳ ಪಾಲಿಗೆ ಅತ್ಯಂತ ಗೌರವಾಸ್ಪದಳೂ ಪೂಜ್ಯಳೂ ಆಗಿದ್ದಾಳೆ. ರಾಜಾಸ್ಥಾನದಲ್ಲಿ ಗೌರ್ ಅಥವಾ ಗೌರಿಯೆಂದು ಅವಳು ಕನ್ಯೆಯರು ಹಾಗೂ ವಿವಾಹಿತ ಮಹಿಳೆಯರು ಇಬ್ಬರಿಂದಲೂ ಬಹುಮಟ್ಟಿಗೆ ಸಾರ್ವತ್ರಿಕವಾಗಿ ಪೂಜೆಗೊಳ್ಳುತ್ತಾಳೆ.

ಶಿವ, ಪಾರ್ವತಿಯರ ಮಗನಾದ ಗಣೇಶ ಜ್ಞಾನದೇವತೆ. ಎಲ್ಲ ಮಂಗಳ ಕಾರ್ಯಗಳ ಆರಂಭದಲ್ಲಿ ಅವನನ್ನೂ ಅವನ ಇಬ್ಬರು ಪತ್ನಿಯರನ್ನೂ – ಋದ್ಧಿ ಮತ್ತು ಸಿದ್ಧಿ – ಪ್ರಾರ್ಥಿಸಲಾಗುತ್ತದೆ. ಅವನ ಅತ್ಯಂತ ಪ್ರಸಿದ್ಧವಾದ ದೇವಾಲಯ ಸವಾಯಿ ಮಧೋಪುರದ ಹತ್ತಿರ ಚರಿತ್ರಾರ್ಹ ರಣಥಂಭೋರ್ ಕೋಟೆಯಲ್ಲಿದೆ. ಅವನ ವಾರ್ಷಿಕ ಜನ್ಮದಿನವಾದ ಭದ್ರಮಾಸದ ನಾಲ್ಕನೆಯ ದಿನದಂದು, ಸಾವಿರಾರು ಜನ ಇಲ್ಲಿ ಕಿಕ್ಕಿರಿಯುತ್ತಾರೆ.

ರಾಜಾಸ್ಥಾನ ಇಪ್ಪತ್ತನಾಲ್ಕು ತೀರ್ಥಂಕರರನ್ನು ಪೂಜಿಸುವ ದಿಗಂಬರ, ಶ್ವೇತಾಂಬರ ಎರಡೂ ಜೈನಪಂಥಗಳ ಭದ್ರನೆಲೆ. ತೀರ್ಥಂಕರ ಅಥವಾ ಜಿನರಲ್ಲಿ ಋಷಭದೇವ, ಪಾರ್ಶ್ವನಾಥ ಮತ್ತು ಮಹಾವೀರರಿಗೆ ರಾಜ್ಯದ ಬಹುಪಾಲು ಜೈನ ಬಸದಿಗಳು ಮೀಸಲಾಗಿವೆ. ಉದಯಪುರದಲ್ಲಿರುವ ಋಷಭದೇವನ ಪ್ರಸಿದ್ಧ ಬಸದಿ ಮತ್ತು ಸವಾಯಿ ಮಧೋಪುರ್ ಜಿಲ್ಲೆಯಲ್ಲಿರುವ ಮಹಾವೀರನ ಬಸದಿ ಅಪಾರಸಂಖ್ಯೆಯಲ್ಲಿ ಯಾತ್ರಿಕರನ್ನು – ಜೈನರು ಮಾತ್ರವಲ್ಲ, ಭಿಲ್ಲರು, ಮೀನರು ಮತ್ತು ಗುಜರರು –ಆಕರ್ಷಿಸುತ್ತವೆ.

ವಿಷ್ಣುವಿನ ಎರಡು ಅತ್ಯಂತ ಜನಪ್ರಿಯ ಅವತಾರಗಳಾದ ರಾಮ, ಕೃಷ್ಣರಲ್ಲದೆ, ನರಸಿಂಹಾವತಾರವೂ ಪೂಜೆಗೊಳ್ಳುತ್ತದೆ. ನೃಸಿಂಹ ಚತುರ್ದಶಿ ದಿನ ಈ ದೇವತೆಗೆ

ಮೀಸಲು; ಅವನು ತನ್ನ ಭಕ್ತನಾದ ಬಾಲಕ ಪ್ರಹ್ಲಾದನ ಭಕ್ತಿಗೆ ಪ್ರತಿಫಲ ಸಲ್ಲಿಸುವುದಕ್ಕಾಗಿ ಹೇಗೆ ಅರ್ಧ–ಮಾನುಷ ಮತ್ತು ಅರ್ಧ–ಸಿಂಹರೂಪದಲ್ಲಿ ಕಾಣಿಸಿಕೊಂಡನೆಂಬುದನ್ನು ಕುರಿತ ಜನಪದ ಕಥೆಯನ್ನು ಉಪವಾಸನಿರತ ಸ್ತ್ರೀಯರು ಪುನರುಚ್ಚರಿಸುತ್ತಾರೆ.

ಸರ್ಪಾರಾಧನೆಯೂ ಎಲ್ಲ ಜಾತಿಗಳಿಗೆ ಸಮಾನ; ಸರ್ಪದೇವತೆಗಳನ್ನು ಒಲಿಸಿ ಕೊಳ್ಳುವ ದಿವಸ, ನಾಗಪಂಚಮಿ. ಗರಸಿಯರಂಥ ಪರಿಶಿಷ್ಟ ವರ್ಗಗಳೂ ತನ್ನ ಹೆಡೆಯ ಮೇಲೆ ಭೂಮಿಯನ್ನು ಹೊತ್ತಿರುವ ಶೇಷನಾಗನನ್ನು ನಂಬುತ್ತಾರೆ. ಮಾತಾ ಅಥವಾ ಕಾಳಿಯೊಡನೆ ಬುಡಕಟ್ಟು ಜನರಿಂದ ಪೂಜಿತವಾಗುವ ಇನ್ನೊಂದು ದೇವತೆಯೆಂದರೆ ಭೈರೋನ್.

## ಮಾದಕದ್ರವ್ಯಗಳು

ಪ್ರಾಚೀನ ಕಾಲದಲ್ಲಿ ರಾಜಾಸ್ಥಾನ ವೈದಿಕ ಧರ್ಮದ ಪ್ರಬಲ ನೆಲೆಯಾಗಿತ್ತು. ಅದನ್ನು ವಾಮಮಾರ್ಗ ತಳ್ಳಿಹಾಕಿತು.[1] ಕೆಲವರು ಲೇಖಕರ ಪ್ರಕಾರ, ಬ್ರಾಹ್ಮಣರು ಆದಿವಾಸಿ ಜನಾಂಗವನ್ನು ತಮ್ಮ ಅಧಿಕಾರಕ್ಕೆ ಅಧೀನಗೊಳಿಸುವ ಪ್ರಯತ್ನದಲ್ಲಿ ಮುಟ್ಟಿದ ಅತ್ಯಂತ ಕೀಳುಮಟ್ಟವನ್ನು ಪ್ರತಿನಿಧಿಸುತ್ತದೆ, ವಾಮಮಾರ್ಗ. ಈ ಜೀವನ ವಿಧಾನದ ಹೋರಾಳುಗಳು – ಚಾರ್ವಾಕ ಮತ್ತು ಕ್ಷಪಣಕ ಪಂಥಗಳೂ ಸೇರಿದಂತೆ – 'ತಿನ್ನು, ಕುಡಿ, ಮಜಾಮಾಡು'[2] ಎಂಬ ಸಿದ್ಧಾಂತವನ್ನು ಪ್ರತಿಪಾದಿಸಿದರು. ದೇವ ದೇವಿಯರಿಗೆ ಮಾಂಸ, ಮದ್ಯಗಳ ನೈವೇದ್ಯ ಸಲ್ಲಿಸುವುದರಲ್ಲಿ ಇದು ಪರಾಕಾಷ್ಠೆ ಮುಟ್ಟಿತು.

ನಿಯಮ ಅಥವಾ ಆಚರಣೆಯನ್ನು ಸೂಚಿಸುವ ತಂತ್ರಗಳು ಶಕ್ತಿಪೂಜೆಗೆ ಮೀಸಲಾದ ವಿವಿಧ ಕೃತಿವರ್ಗ. ವಿಷ್ಣು ಮತ್ತು ಶಿವನ ಪತ್ನಿಯರು ಶಕ್ತಿಯನ್ನು ಪ್ರತಿನಿಧಿಸುತ್ತಾರೆ.[3] ಆದರೂ, ವಿಷ್ಣುವಿನ ಶಕ್ತಿಯಾಗಿ ಪೂಜೆಗೊಳ್ಳುವವಳು ಲಕ್ಷ್ಮಿಯಲ್ಲ, ಶೃಂಗಾರಪ್ರಿಯ ಕೃಷ್ಣನ ಪ್ರೇಯಸಿ ರಾಧೆ. ತಾಂತ್ರಿಕ ಅಥವಾ ವಾಮ ಮಾರ್ಗಪೂಜೆಯ ಅತ್ಯಂತ ಜನಪ್ರಿಯ ವಸ್ತುವೆಂದರೆ, ದೇವಿ – ಅವಳ ನಾನಾ ರೂಪಗಳಲ್ಲಿ ಯುವ್ರಾವಾದರೊಂದರಲ್ಲಿ. ಈ ಪಂಥ ಪ್ರತಿಪಾದಿಸಿದ ಐದು ಸಾರಭೂತ ಪೂಜಾಂಶಗಳೆಂದರೆ: ಮದ್ಯ, ಮಾಂಸ, ಮತ್ಸ್ಯ, ಮತ್ತು ಮೈಥುನ.[4]

ವಾಮಾಚಾರಿಗಳ ಈ ವಿಧಿಗಳು ಅತ್ಯಂತ ಸ್ವಚ್ಛಂದ ರೂಪಗಳನ್ನು ತಳೆದು, ರಾಜಾಸ್ಥಾನದಲ್ಲಿ ಮಾತ್ರವಲ್ಲ, ದೇಶದ ಇತರ ಭಾಗಗಳಲ್ಲೂ ಬಹುಪಾಲು

---

[1] Geholt, Jagdish Singh, *Rajputana Ka Itihas*, Jodhpur, P.91
[2] ಅದೇ, ಪು 91
[3] Birdwood, George C.M., *The Hindu Pantheon in the Industrial Arts of India*, London, 1880, P.45
[4]. ಅದೇ

ಕೆಳವರ್ಗದಲ್ಲಿ ಪ್ರಚಲಿತವಾಗಿದ್ದುವು. ಮಾದಕದ್ರವ್ಯಗಳ ಬಳಕೆಯ ಉಗಮವನ್ನು ಈ ವಾಮಮಾರ್ಗದಲ್ಲಿ ಗುರುತಿಸಬೇಕು. ಧಾರ್ಮಿಕ ಉತ್ಸಾಹ ಮತ್ತು ಅನುಮತಿಯಲ್ಲಿ ಆರಂಭಗೊಂಡು, ಮಾದಕದ್ರವ್ಯಗಳ ಬಳಕೆ ಊಳಿಗಮಾನ್ಯ ಶ್ರೀಮಂತ ವರ್ಗದ, ಅಂತೆಯೆ ಸಮಾಜದ ನಿಮ್ನಸ್ತರದ ಜೀವನದ ಅವಿಭಾಜ್ಯ ಅಂಗವಾಗಿ ಪರಿಣಮಿಸಿದುವು.

ಮದ್ಯ, ಅಫೀಮು, ತಂಬಾಕುಗಳ ಬಳಕೆ ರಜಪೂತರಲ್ಲಿ ಸಾಮಾನ್ಯ.[1] ಅಖ-ತೀಜ್, ಹೋಳಿ ಮತ್ತು ದಿವಾಳಿಯಂಥ ಹಬ್ಬಗಳು ಹಾಗೂ ಮದುವೆ, ನಿಶ್ಚಿತಾರ್ಥಗಳಂಥ ಮಂಗಳ ಸಂದರ್ಭಗಳನ್ನು *ರಿಯನ್* ಅಥವಾ *ಕಸುಂಬ*ದೊಡನೆ ಆಚರಿಸಲಾಗುತ್ತದೆ. ಅದು ನೀರಿನಲ್ಲಿ ತಯಾರಿಸಿದ ಅಫೀಮಿನ ದ್ರಾವಣವಾಗಿದ್ದು, ಅತಿಥಿಗಳಿಗೆ ಅದನ್ನು ಅರ್ಪಿಸಲಾಗುತ್ತದೆ. ಅಫೀಮು, ಮದ್ಯಗಳನ್ನು ಪ್ರಶಂಸಿಸುವ ಅನೇಕ ಹಾಡು ಮತ್ತು ಕಥನಗೀತೆಗಳಿವೆ; ಅವುಗಳನ್ನು ಧೋಲಿ, ಧಂಧಿ, ಚಕರ್ ಮತ್ತು ಭದುವಗಳಂಥ ಗುಂಪುಗಳು ಶ್ರೀಮಂತರ ಮುಂದೆ ಹಾಡಿ, ಅವರಿಗೆ ಈ ದುರ್ವ್ಯಸನಗಳ ದೀಕ್ಷೆ ಕೊಡುತ್ತಿದ್ದುವು ಮತ್ತು ತನ್ಮೂಲಕ, ತಮ್ಮ ಆಶ್ರಯದಾತರು ಮತ್ತರಾಗಿದ್ದಾಗ ಸ್ವಹಿತಗಳನ್ನು ಸಾಧಿಸಿಕೊಳ್ಳುತ್ತಿದ್ದುವು. ಈ ಮಾದಕದ್ರವ್ಯಗಳನ್ನು ಬಳಸುವವರ 'ದೈಹಿಕ ಚುರುಕು' ಹಾಗೂ 'ಕೆಂಗಣ್ಣು'ಗಳ ಬಗೆಗೆ ಹೇಳುವ ಇಂಥ ಹಾಡು ಮತ್ತು ಕಥನಗೀತಗಳ ಒಂದು ಸಂಪುಟವನ್ನೆ ಯಾರಾದರೂ ಸಂಕಲಿಸಬಹುದು.

ರಾಜಾಸ್ಥಾನದ ಬುಡಕಟ್ಟು ಜನರ ಮದ್ಯಪಾನದ ಚಟ ತೀವ್ರವಾದುದು. ಬಹುತೇಕ ಸಸ್ಯಾಹಾರಿಗಳಾದ ಭಿಲ್ಲರು ಹಬ್ಬದ ಸಂದರ್ಭಗಳಲ್ಲಿ ಎಮ್ಮೆಯ ಅಥವಾ ಆಡಿನ ಮಾಂಸವನ್ನು ನಿರಾಕರಿಸುವುದಿಲ್ಲ. ಅವರಿಗೆ ತಂಬಾಕು ಇಷ್ಟ. ಅವರು **ಮಹುಲಿ** ಹೂವಿನಿಂದ ಮತ್ತು **ಬಾಬುಲ್** ಮರದ ತೊಗಟೆಯಿಂದ ತೆಗೆದ ಮದ್ಯದ ಚಟವುಳ್ಳವರು. ಅವರ ಎಲ್ಲ ಸಾಮಾಜಿಕ ಮತ್ತು ಸಮುದಾಯ ಕೂಟಗಳ ವೈಶಿಷ್ಟ್ಯವೆಂದರೆ ಮದ್ಯಪಾನ; ಅವರ ಜಗಳಗಳು ಕುಡಿತದ ಆವೇಶದಲ್ಲಿ ಮೊದಲಾಗುತ್ತವೆ ಮತ್ತು ಕೊನೆಗೊಳ್ಳುತ್ತವೆ ಎಂದು ಹೇಳಲಾಗಿದೆ.

ಗರಸಿಯುಗಳಲ್ಲಿ 'ತಿಂದು, ಕುಡಿದು, ಮಜಾ ಮಾಡುವ' ಬಯಕೆ ಅಷ್ಟೇ ಪ್ರಬಲವಾಗಿದೆ. ಅವರಿಗೂ ಅಫೀಮು, ಮದ್ಯಗಳ ಚಟ; ಅದು ತೀವ್ರ ದ್ವೇಷಗಳನ್ನು ಕೂಡ ಮೈತ್ರಿ, ಸೌಹಾರ್ದಗಳಿಗೆ ತಿರುಗಿಸುತ್ತದೆ. ವಾರಕ್ಕೊಮ್ಮೆ ಅರ್ಧ ಸೀಸೆ ಮದ್ಯ ಉದಯಪುರದ ಕಾಡುಗಳಲ್ಲಿ ಕಾಚು ತಯಾರಿಸುವ ಕಥ್‌ದಿಯರ ಪಾಲಿಗೆ ಕೇವಲ ಚಟಕ್ಕಿಂತ ಮಿಗಿಲು: ತಮ್ಮ ದಣಿಗಳಾದ ಅರಣ್ಯ ಕಂಟ್ರಾಕ್ಟರುಗಳು ತಮ್ಮ ಘನತೆಗೆ ಸಗುವ ನೋವು, ಅವಮಾನಗಳನ್ನು ಅವರು ಮದ್ಯದ ಅಮಲಿನಲ್ಲಿ ಮರೆಯುತ್ತಾರೆ.

ಗ್ರಾಮೀಣ ಮತ್ತು ಗುಡ್ಡಗಾಡು ಸಮಾಜಗಳಲ್ಲೆಲ್ಲ ಅಗ್ರಮಾನ್ಯರಾದ ಮೀನರ ಮದ್ಯವ್ಯಾಮೋಹ ಇತರ ಬುಡಕಟ್ಟುಗಳದಕ್ಕಿಂತ ಕಡಿಮೆಯೇನಿಲ್ಲ. ವಮತೆ ಅಥವಾ

[1] Gehlot, Jagdish Singh, *Rajputana Ka Itihasa*, Jodhpur.

ದೇವಿಗೆ ಮೀಸಲಾದ ನವರಾತ್ರಿಯ ಕಾಲದಲ್ಲಿ ಅವರು ಮದ್ಯ, ಕೋಣ ಹಾಗೂ ಮೇಕೆಗಳನ್ನು ಸಮರ್ಪಿಸುತ್ತಾರೆ. ಹಾಡು, ಕುಣಿತಗಳಿಂದ ವಿಶಿಷ್ಟವಾದ ಅವರ ಸಾಮಾಜಿಕ ಮನೋರಂಜನೆಗಳು – ಕೆಲವೊಮ್ಮೆ ಅಸಭ್ಯ ಚಲನೆ ಹಾಗೂ ಅಶ್ಲೀಲ ಭಂಗಿಗಳಿಂದ ಕೂಡಿದವು – ಕುಡಿತದ ಆವೇಶದ ಪರಾಕಾಷ್ಠೆಗಳು.

ಸ್ವಾತಂತ್ರ್ಯಪ್ರಾಪ್ತಿಯ ಈಚಿನ ಸಾಮಾಜಿಕ ಮತ್ತು ಆರ್ಥಿಕ ಪ್ರಗತಿ ಎಷ್ಟೋ ಅನುಚಿತ ಆಚರಣೆಗಳನ್ನು ತಗ್ಗಿಸಲು ನೆರವಾಗಿದೆ; ಆದರೆ ಅಫೀಮು, ಮದ್ಯಗಳ ಬಳಕೆ ರಾಜಾಸ್ಥಾನದ ಅನಕ್ಷರಸ್ಥ ವರ್ಗಗಳಲ್ಲಿ ಈಗಲೂ ಬಹಳ ವ್ಯಾಪಕವಾಗಿದೆ. ಈ ದೌರ್ಬಲ್ಯ, ಹಾಗೂ ವ್ಯಾಮೋಹವನ್ನು ನಿಯಂತ್ರಿಸಲು ಮತ್ತು ಹತ್ತಿಕ್ಕಲು ಸಾಕಷ್ಟು ಸಾಮಾಜಿಕ ಸುಧಾರಣೆ ಅವಶ್ಯಕ.

# ಧರ್ಮ ಮತ್ತು ಮಾಟ-ಮಂತ್ರ

ರಾಜಾಸ್ಥಾನದಲ್ಲಿ ವಾಸಿಸುವವರು ಮುಖ್ಯವಾಗಿ ಹಿಂದೂಗಳು. ಆದರೆ ಮುಸ್ಲಿಮರು ಮತ್ತು ಜೈನರು ಬಹುಸಂಖ್ಯೆಯಲ್ಲಿದ್ದಾರೆ. ಸಿಕ್ಖರು ಮತ್ತು ಕ್ರಿಶ್ಚಿಯನ್ನರು ಕೂಡ ಜನ ಸಂಖ್ಯೆಯ ಗಣ್ಯಭಾಗವಾಗಿದ್ದಾರೆ. ಹಿಂದೂಗಳು ಹಲವಾರು ಜಾತಿ, ಉಪಜಾತಿಗಳಾಗಿ ವಿಭಜನೆಗೊಂಡಿದ್ದಾರೆ. ಹಾಗೆಯೆ ಮುಸ್ಲಿಮರು: ಅವರಲ್ಲಿ ಹಿಂದೂ ಮತ್ತು ಮುಸ್ಲಿಂ ಪದ್ಧತಿಗಳೆರಡನ್ನೂ ಆಚರಿಸುವ ನವ-ಮುಸ್ಲಿಮರು ಮತ್ತು ಅರೆ-ಹಿಂದೂಗಳು ಸೇರುತ್ತಾರೆ. ಜೈನಪಂಥಗಳಲ್ಲಿ, ದಿಗಂಬರರಲ್ಲಿ ಒಳಪಂಗಡಗಳಿಲ್ಲ, ಆದರೆ ಶ್ವೇತಾಂಬರರಲ್ಲಿ ಎರಡು ಪಂಗಡ – ವಿಗ್ರಹಾರಾಧಕರು ಮತ್ತು ಸಂದ್ರುಮಾರ್ಗಿಗಳು (ತೇರಾಪಂಥಿಗಳೂ ಸ್ಥಾನಕವಾಸಿಗಳೂ ಸೇರಿದಂತೆ). ಈ ಪ್ರಾಂತ್ಯದಲ್ಲಿ ದೇಶವಿಭಜನೆ ಯಿಂದೀಚೆಗೆ ಸಿಕ್ಖರ ಸಂಖ್ಯೆ ಏರಿದೆ. ರಾಜಾಸ್ಥಾನದ ಕ್ರೈಸ್ತರು ದೊಡ್ಡ ನಗರಗಳಲ್ಲಿ ಕೇಂದ್ರೀಕೃತರಾಗಿದ್ದಾರೆ; ಅವರಲ್ಲಿ ರೋಮನ್ ಕ್ಯಾಥೊಲಿಕರು, ಮೆಥಾಡಿಸ್ಟರು, ಆಂಗ್ಲಿಕನರು ಮತ್ತಿತರ ಪ್ರಾಟೆಸ್ಟೆಂಟ್ ಪಂಗಡಗಳವರು ಸೇರುತ್ತಾರೆ.

ಹಿಂದೂಧರ್ಮ ನೂರಾರು ಧಾರ್ಮಿಕ ನಂಬಿಕೆಗಳ ಮತ್ತು ಪಂಗಡಗಳ ಸಂಯೋಗ. ಅವುಗಳಲ್ಲಿ ಕೆಲವು ಅಖಿಲಭಾರತ ದೃಷ್ಟಿಯಿಂದ ಮುಖ್ಯವಾದರೆ, ಕೆಲವು ಸ್ಥಳೀಯವಾಗಿ ಮಾತ್ರ ಕಂಡುಬರುತ್ತಿದ್ದು, ರಾಜಾಸ್ಥಾನದ ಹೊರಗೆ ಸಿಗುವುದಿಲ್ಲ. ಅದ್ವೈತ, ದೇವದೇವಿಯರ ಬಹುರೂಪತೆ, ಭಕ್ತಿವಾದ, ಸರ್ವಚೈತನ್ಯ ವಾದ – ಇವುಗಳ ಆಚರಣೆಯನ್ನುಳ್ಳ, ಸರ್ವಗ್ರಾಹಿಯಾದ ಈ ಸನಾತನ ಧರ್ಮಕ್ಕೆ ಸೇರುವುದನ್ನು ಒಬ್ಬ ವ್ಯಕ್ತಿಗೆ ಯಾರೂ ನಿಷೇಧಿಸಲಾರರು. ಎಂದರೆ, ಹಿಂದೂಧರ್ಮ ಏಕಕಾಲಕ್ಕೆ ಅತ್ಯಂತ ಸಾಂಪ್ರದಾಯಿಕ ಜನರು ಮತ್ತು ಅತ್ಯಂತ ಹೈತುಕ ಹಾಗೂ ಆಧುನಿಕ ಜನರ ಪಂಥವಾಗಿದೆ. ಮತ್ತೊಂದು ಮತಕ್ಕೆ ಪರಿವರ್ತನೆಗೊಳ್ಳುವುದರ ಮೂಲಕ ಮಾತ್ರ ಒಬ್ಬ ತನ್ನ ಹಿಂದೂತ್ವವನ್ನು ಕಳೆದುಕೊಳ್ಳುವುದಿಲ್ಲ. ಹೀಗಾಗಿ, ಹಿಂದೂಧರ್ಮ ಒಂದು ಪಂಥವಾಗಿರುವುದಕ್ಕಿಂತ ಮಿಗಿಲಾಗಿ ಒಂದು ಸಾಮಾಜಿಕ ಸಂಪ್ರದಾಯಗಳನ್ನು ಅನುಸರಿಸುವವರನ್ನೆಲ್ಲ ತನ್ನ ತೆಕ್ಕೆಯಲ್ಲಿ ಒಳಗೊಳ್ಳುತ್ತದೆ.

## ಆಚರಣೆಗಳು

ಇತಿಹಾಸಕಾರರ ಪ್ರಕಾರ, ಹಿಂದೂಗಳ ಮೂಲಭೂತ ಆಚರಣೆಗಳು ವೈದಿಕ

ಸಮಾಜದಲ್ಲಿ ಉಗಮಗೊಂಡುವು. ಈ ಆಚರಣೆಗಳನ್ನು ಸಂಸ್ಕಾರಗಳೆಂದು ಕರೆಯಲಾಗುತ್ತದೆ. ಐದನೆಯ ಅಧ್ಯಾಯದಲ್ಲಿ ಸಂಸ್ಕಾರಗಳನ್ನು ಇನ್ನಷ್ಟು ವಿವರವಾಗಿ ನಿರೂಪಿಸಲಾಗಿದೆ; ಆದರೆ ಆಚರಣೆಯ ಪಾತ್ರವನ್ನು ಚರ್ಚಿಸುವಲ್ಲಿ ಅವುಗಳ ಸಂಕ್ಷಿಪ್ತ ಸಮೀಕ್ಷೆಯೊಂದು ಉಪಯುಕ್ತ. ಒಟ್ಟು ಹದಿನಾರು ಸಂಸ್ಕಾರಗಳಿದ್ದು, ಇಡೀ ಮಾನವ ಜೀವನದ ಹರಹನ್ನು ಒಳಗೊಳ್ಳುತ್ತದೆ. ಪ್ರತಿಯೊಂದು ಸಂಸ್ಕಾರಕ್ಕೂ ಮೊದಲು ಒಂದು ಯಜ್ಞ (ಹವನ), ಇಷ್ಟದೇವತೆಯ ಪ್ರಾರ್ಥನೆ ಮತ್ತು ಪ್ರಸನ್ನೀ ಕರಣ, ಬ್ರಾಹ್ಮಣರ ಮೂಲಕ ದೇವತಾ ಸಂತೋಷದ ಆವಾಹನೆ ಮತ್ತಿತರ ವಿಧಿ ಗಳಿರುತ್ತವೆ. ರಾಜಾಸ್ಥಾನದಲ್ಲಿ ಈ ಎಲ್ಲ ಸಂಸ್ಕಾರಗಳನ್ನು ಈಗಲೂ ಮಾಡಲಾಗು ತ್ತದೆ; ಆದರೆ ಅವುಗಳ ನಾಮರೂಪಗಳು ಅನೇಕ ಬದಲಾವಣೆಗಳಿಗೆ ಒಳಗಾಗಿವೆ.

ಹಿಂದೂಗಳಲ್ಲಿ ಬ್ರಹ್ಮ ಶಿವ, ಶಕ್ತಿ, ವಿಷ್ಣು ಮತ್ತಿತರ ದೇವದೇವಿಯರ ಆರಾಧಕರಿದ್ದಾರೆ; ಜೊತೆಗೆ, ಆರ್ಯಸಮಾಜ ಮತ್ತು ರಾಮಕೃಷ್ಣ ಸಂಘದ ಅನುಯಾಯಿಗಳು. ಸೃಷ್ಟಿಕರ್ತನಾದ ಬ್ರಹ್ಮ ಈಗ ಪ್ರಮುಖ ದೇವತೆಯಾಗಿ ಪೂಜೆಗೊಳ್ಳುವುದಿಲ್ಲ; ಆದರೆ ಮಧ್ಯಕಾಲದಲ್ಲಿ ಈ ದೇವತೆಗೆ ಮೀಸಲಾದ ಅನೇಕ ದೇವಾಲಯಗಳಿದ್ದುವು. ಪುಷ್ಕರದಲ್ಲಿ ಒಂಬತ್ತನೆಯ ಶತಮಾನದ ಒಂದು ಪ್ರಸಿದ್ಧ ವಾದ ಬ್ರಹ್ಮದೇವಾಲಯವಿದೆ; ಖೆದ್‌ನಲ್ಲಿ ಬ್ರಹ್ಮನ ಒಂದು ಹಳೆಯ ದೇಗುಲವಿದೆ; ಸಾವಿತ್ರಿ ಬ್ರಹ್ಮರ ಇನ್ನೊಂದು ದೇವಾಲಯ ಬಿಘುವಿನಲ್ಲಿದೆ; ಸಿರೋಹಿ ಜಿಲ್ಲೆಯ ವಸಂತಗಢ್‌ನಲ್ಲಿರುವ ಬ್ರಹ್ಮದೇವಾಲಯದಲ್ಲಿ ಆ ದೇವತೆಯ ಎರಡು ಕೈಗಳ ಮತ್ತು ಮೂರು ಮುಖದ ಶಿಲ್ಪವಿದೆ. ಅವನ ಪ್ರತಿಮೆಗಳು ಅನೇಕ ಕಡೆ ಸಿಕ್ಕಿವೆ.

ಶಿವನ ಆರಾಧನೆ ರಾಜಾಸ್ಥಾನದಲ್ಲಿ ಬಹಳ ಜನಪ್ರಿಯವಾಗಿತ್ತು. ಪ್ರತೀಹಾರ ವಂಶದ (ಕ್ರಿ.ಶ. ಎಂಟರಿಂದ ಹತ್ತನೆಯ ಶತಮಾನ) ಆಳಿಕೆಯಲ್ಲಿ, ಅಧಿಕೃತ ರಾಜ್ಯಪಂಥ ಶಿವನದಾಗಿತ್ತು; ರಾಜಾಸ್ಥಾನದಲ್ಲಿ ಶಿವಾಲಯಗಳು ಕಿಕ್ಕಿರಿದಿವೆ. ಶಿವನ ವಾಹನವಾದ ನಂದಿಯೂ ಒಂದು ಪೂಜಾವಸ್ತು. ಶಿವನ ಪತ್ನಿಯನ್ನು ಪಾರ್ವತಿ, ಶಕ್ತಿ, ಉಮೆ ಇತ್ಯಾದಿಯಾಗಿ ನಾನಾರೂಪಗಳಲ್ಲಿ ಪೂಜಿಸಲಾಗುತ್ತದೆ. ರಾಜಾಸ್ಥಾನದ ಅನೇಕ ರಾಜ್ಯಗಳಲ್ಲಿ ಶೈವ ಮತವೊಂದು ಜನಪ್ರಿಯ ಪಂಥವಾಗಿದೆ.

ಬಹುಪಾಲು ರಜಪೂತರು ವಿಶ್ವಮಾತೆಯಾದ ಶಕ್ತಿ – ಅಂಬಾ ಅಥವಾ ದೇವಿಯ ಆರಾಧಕರು. ಶಕ್ತಿಪಂಥ ಪ್ರತೀಹಾರ ಮತ್ತು ಚೌಹಾನ್ ಅವಧಿಗಳಲ್ಲಿ ಜನಪ್ರಿಯ ವಾಯಿತು. ಸಕರೈ ಅಥವಾ ಸಂಕ್ರ ಮಾತೆಯ ಪ್ರಸಿದ್ಧ ದೇವಾಲಯ ಬಹು ಜನಪ್ರಿಯ ವಾಗಿದೆ. ಶಿವ, ಶಕ್ತಿಯರ ಆರಾಧನೆಗೆ ನಿಕಟವಾಗಿ ಸಂಬಂಧಿಸಿದೆ, ಗಣೇಶಪೂಜೆ. ಚೌಹಾನರ ಅವಧಿಗೆ ಸೇರಿದ ಅನೇಕ ಗಣೇಶ ವಿಗ್ರಹಗಳು ಬುಚ್ಕಲ, ಮಂದೋರ್ ಮತ್ತು ಜೋಧ್‌ಪುರದ ಬಿಘುವಿನಲ್ಲಿ ಕಂಡುಬಂದಿವೆ.

ಸೂರ್ಯದೇವನ ಪೂಜೆ ಒಂದು ಕಾಲದಲ್ಲಿ ಈಗಿರುವುದಕ್ಕಿಂತ ಬಹಳ ಜನಪ್ರಿಯ ವಾಗಿತ್ತು. ಇಡೀ ರಾಜಾಸ್ಥಾನ ಒಂದು ಕಾಲದಲ್ಲಿ ವೈಭವೋಪೇತವಾದ ಸೂರ್ಯ ದೇವಾಲಯಗಳಿಂದ ತುಂಬಿಹೋಗಿತ್ತು. ಭಿನಮಲ್ ಸೂರ್ಯಪೂಜೆಯ ಒಂದು ಮಹಾಕೇಂದ್ರವಾಗಿತ್ತು. ಸೂರ್ಯದೇವನ ಪ್ರತಿಮೆಗಳು ಒಸಿಯ, ಮಂಡೋರ್,

ಪೊಕ್ರನ್, ಕಿರದು, ಬಿಥು ಮತ್ತು ಪಲಿಯಲ್ಲಿ ಸಿಕ್ಕಿವೆ.

ಸಂಸ್ಕಾರಗಳು ಪ್ರಸ್ತದ ಇರುಳು ನಡೆಯುವ *ಗರ್ಭಾದಾನ*ದಿಂದ ಮೊದಲಾಗುತ್ತದೆ; ಅದಕ್ಕೆ ಮುನ್ನ, ರಾಜಾಸ್ಥಾನದಾದ್ಯಂತ ಗೋನ ಅಥವಾ ಮುಕ್ಲವ ಎಂದು ಸಾಮಾನ್ಯವಾಗಿ ಕರೆಯುವ ವಿಧಿಯಿರುತ್ತದೆ. ಎರಡನೆಯ ಸಂಸ್ಕಾರವಾದ *ಪುಂಸವನ* ಗರ್ಭಧಾರಣೆಯ ಮೂರನೆಯ ತಿಂಗಳಲ್ಲಿ ನಡೆಯುತ್ತದೆ; ಕುಟುಂಬದ ಹಿರಿಯ ಮಹಿಳೆಯರು, ಹುಟ್ಟುವ ಮಗು ಗಂಡಾಗಲೆಂದು ದೈವಾನುಗ್ರಹಕ್ಕಾಗಿ ಪ್ರಾರ್ಥಿಸುತ್ತ, ಹೆಣ್ಣನ್ನು ಹರಸುತ್ತಾರೆ. ಮೂರನೆಯ ಸಂಸ್ಕಾರವಾದ *ಸೀಮಂತೋನ್ನಯನವೇ* ಈಗಿನ *ಅಥ್ಮಸ*. ಇದು ಹೆಚ್ಚಾಗಿ ಸಾಮಾಜಿಕ ಹಾಗೂ ಶಾಸ್ತ್ರೋಕ್ತ ಸಮಾರಂಭವಾಗಿದ್ದು, ಗರ್ಭಿಣಿಗೆ ಸಂಬಂಧಿಕರು ಸ್ವಾದು ಭಕ್ಷ್ಯಗಳನ್ನು ಕೊಟ್ಟು ಅವಳನ್ನು ಸಂತುಷ್ಟಿಗೊಳಿಸುವುದಾಗಿರುತ್ತದೆ. *ಜಾತಕರ್ಮ* ನಾಲ್ಕನೆಯ ಸಂಸ್ಕಾರ; ಪುತ್ರ ಜನನವಾದ ಕೂಡಲೆ, 'ನವಜಾತ ಶಿಶು ಧಾರ್ಮಿಕ, ಕೀರ್ತಿಶಾಲಿ, ಶ್ರೀಮಂತ ಹಾಗೂ ಗೋಸಂಪತ್ತಿನ ಒಡೆಯ' ನಾಗಲೆಂಬ ಹಾರೈಕೆಯಿಂದ ಆಚರಿಸತಕ್ಕದ್ದು. ಶಿಶುವಿನ *ನಾಮಕರಣ* ಐದನೆಯ ಸಂಸ್ಕಾರ; ಯಾವುದೇ ಶುಭದಿನದಂದು ಶುಭಗಳಿಗೆಯಲ್ಲಿ ಆಚರಿಸುವಂಥದು. *ಕರ್ಣಭೇದ*, ಕಿವಿ, ಮೂಗುಗಳನ್ನು ಚುಚ್ಚುವ ಸಂಸ್ಕಾರ. ಇದು ರಾಜಾಸ್ಥಾನದ ಎಲ್ಲ ಕೋಮುಗಳಿಗೂ ಸಮಾನವಾದದ್ದು. ಏಳನೆಯ ಸಂಸ್ಕಾರ ನಿಷ್ಕ್ರಮಣ. ಹೆರಿಗೆಯಾದ ಇಪ್ಪತ್ತೊಂದು ಅಥವಾ ನಲವತ್ತು ದಿನಗಳ ಬಳಿಕ ಹೆಣ್ಣು ಮಾಮೂಲು ಬದುಕಿಗೆ ಮರಳಿದಾಗ ಮಾಡುವಂಥದು. ಅವಳು ಮಿಂದು, ಹೊಸ ಬಟ್ಟೆ ತೊಟ್ಟು, ಗುಡಿಗೆ ಹೋಗಿಬರುತ್ತಾಳೆ; ಮನೆಯ ದೈನಂದಿನ ಕರ್ತವ್ಯಗಳಿಗೆ ಹಿಂದಿರುಗುವ ಮುನ್ನ. *ಅನ್ನಪ್ರಾಶನ* ಸಂಸ್ಕಾರದಲ್ಲಿ ಆರುತಿಂಗಳ ಮಗುವಿಗೆ ಅನ್ನ, ಮೊಸರು, ತುಪ್ಪ, ಮಧುಗಳ ಮೊದಲುಣಿಸನ್ನು ಕೊಡಲಾಗುತ್ತದೆ; *ಚೂಡಾಕರ್ಮ* ಸಂಸ್ಕಾರದಲ್ಲಿ, ಮೊದಲ ಬಾರಿಗೆ ಎಚ್ಚರದಿಂದ ತಲೆಗೂದಲು ಕತ್ತರಿಸಿ ಜುಟ್ಟು ಬಿಡಲಾಗುತ್ತದೆ.

*ಉಪನಯನ* ಸಂಸ್ಕಾರವನ್ನು ಸಾಮಾನ್ಯವಾಗಿ ಎಂಟನೆಯ ಅಥವಾ ಒಂಬತ್ತನೆಯ ವಯಸ್ಸಿನಲ್ಲಿ ಮಾಡಲಾಗುತ್ತದೆ; ಅದು, ಶೈಕ್ಷಣಿಕ ಜೀವನಕ್ಕೆ ಹುಡುಗನ ಪ್ರವೇಶವನ್ನು ಸೂಚಿಸುತ್ತದೆ. ಇದು ಓದುವ ಮತ್ತು ಜ್ಞಾನಾರ್ಜನೆ ಮಾಡುವ ಹನ್ನೊಂದನೆಯ ಸಂಸ್ಕಾರಕ್ಕೆ – *ವೇದಾರಂಭ* – ಅವನನ್ನು ಪಾತ್ರನನ್ನಾಗಿಸುತ್ತದೆ.

ವಿದ್ಯಾರ್ಥಿ ತನ್ನ ಅಧ್ಯಯನವನ್ನು ಮುಗಿಸಿ ಮನೆಗೆ ಮರಳುವುದನ್ನು ಮತ್ತು ಬ್ರಹ್ಮಚರ್ಯದ ಅವಧಿಯ ಅಂತ್ಯವನ್ನು ಸೂಚಿಸುತ್ತದೆ, *ಸಮಾವರ್ತನ*. ಅನಂತರ, ಅತ್ಯಂತ ಮುಖ್ಯವಾದ ಸಂಸ್ಕಾರ – *ವಿವಾಹ*. ಸಂತಾನ ಪಡೆದು, ಮೊಮ್ಮಕ್ಕಳನ್ನು ಕಂಡಮೇಲೆ, ಲೌಕಿಕ ಜೀವನದಿಂದ ನಿವೃತ್ತಿಗೊಳ್ಳುವ ಕಾಲ – *ವಾನಪ್ರಸ್ಥದ* ಅವಧಿ ಬರುತ್ತದೆ. ಈ ಕಾಲದಲ್ಲಿ, ವೃದ್ಧರು ಕಾಡಿಗೆ ಹೋಗಿ ಋಷಿ ಜೀವನ ನಡೆಸುವುದು ಸಾಧ್ಯವಿಲ್ಲ; ಆದರೆ ಯಾತ್ರೆಗಳನ್ನು ಕೈಗೊಂಡು, ಪವಿತ್ರ ಗಂಗೆಯಲ್ಲಿ ಮುಳುಗು ಹಾಕುವ ಮತ್ತು ಧಾರ್ಮಿಕ ಆದೇಶಗಳನ್ನು ಪಾಲಿಸುವ ಕಾಲವೆಂದು ವೃದ್ಧಾಪ್ಯವನ್ನು ಪರಿಗಣಿಸುವುದು ಪದ್ಧತಿ.

ಹಿಂದೂಗಳ ಮಟ್ಟಿಗೆ, ಈ ಆಚರಣೆಗಳು ರಾಜಾಸ್ಥಾನದ ವಿವಿಧ ಜಾತಿ, ಕೋಮುಗಳ ವೈವಿಧ್ಯಪೂರ್ಣ ರೂಢಿ, ಪದ್ಧತಿಗಳ ತಳಹದಿಯಾಗಿವೆ. ರಾಜಾಸ್ಥಾನದ ಸಂಸ್ಕೃತಿ ಭಾರತೀಯ ಸಂಸ್ಕೃತಿಯ ನೆಯ್ಗೆಯ ಒಂದು ಅವಿಭಾಜ್ಯ ಅಂಗ; ಆದರೆ ಅದಕ್ಕೆ ತನ್ನದೆ ಆದ ವಿಶಿಷ್ಟ ಭೌಗೋಳಿಕ, ಚಾರಿತ್ರಿಕ, ಸಾಮಾಜಿಕ ಮತ್ತು ಭಾವನಾತ್ಮಕ ವರ್ಣವಿದೆ. ರಾಜಾಸ್ಥಾನಿಗಳು ಅನೇಕ ಪರಿಳಿತಗಳ ನಡುವೆ ಇಂದಿಗೂ ತಮ್ಮ ಪ್ರಾಚೀನ ಸಂಸ್ಕೃತಿ, ನಾಗರಿಕತೆಗಳನ್ನು ಉಳಿಸಿಕೊಂಡು ಬರಲು ಸಮರ್ಥರಾಗಿರುವುದು ತಮ್ಮ ಗಾಢ ಧಾರ್ಮಿಕ ಶ್ರದ್ಧೆಯಿಂದ. ಬೇಗ ಏಳುವುದು, ಶರೀರದ ಕಶ್ಮಲಗಳನ್ನು ಹೊರಹಾಕಿ ಸ್ನಾನ ಮಾಡುವುದು, ಧ್ಯಾನ ಮತ್ತು ಪೂಜೆ, ಧಾರ್ಮಿಕ ಗ್ರಂಥಗಳ ಪಠಣ, ತೃಪ್ತಿಕರ ಬದುಕಿಗಾಗಿ ಮಾತ್ರವಲ್ಲದೆ ಅಗತ್ಯದಲ್ಲಿರುವವರಿಗೆ ಹಾಗೂ ಸದುದ್ದೇಶಗಳಿಗೆ ದಾನ ಮಾಡುವುದಕ್ಕಾಗಿ ಸಂಪಾದಿಸುವದು – ಇವುಗಳ ಮೇಲೆ ಪೌರಾಣಿಕ ಜೀವನ ವಿಧಾನ ಒತ್ತು ಹಾಕಿತು. ಸಮಾಜ ಅನೇಕ ಬದಲಾವಣೆಗಳನ್ನು ಹಾದುಬಂದಿದೆ; ಆದರೆ ಇವು ಹೆಚ್ಚು ಕಡಿಮೆ ರಾಜಾಸ್ಥಾನದ ಪ್ರಾಮಾಣಿಕ ವ್ಯಕ್ತಿಯೊಬ್ಬನ ನಿತ್ಯಕರ್ಮಗಳಾಗಿ ಉಳಿದುಬಂದಿವೆ.

ರಾಜಾಸ್ಥಾನಿ ಸಮಾಜದಲ್ಲಿ, ಧರ್ಮ ಮತ್ತು ರೂಢಿ ಎರಡೂ ವ್ರತದ ಆಚರಣೆಯ ಪ್ರಾಮುಖ್ಯವನ್ನು ಒತ್ತಿಹೇಳುತ್ತವೆ. ಅಕ್ಷರಶಃ ವ್ರತವೆಂದರೆ, ಏನನ್ನೆ ಆಗಲಿ ಮಾಡುವ ದೃಢಸಂಕಲ್ಪ, ಪ್ರತಿಜ್ಞೆ, ನಿಯಮಾನುಸಾರ ಆಚರಿಸುವ ವಿಧಿ, ಅಥವಾ ಪುಣ್ಯಾರ್ಜನೆಗಾಗಿ ಮಾಡುವ ಉಪವಾಸ. ರಾಜಾಸ್ಥಾನದಲ್ಲಿ, ವ್ರತಗಳನ್ನು ಮುಖ್ಯವಾಗಿ ಪುಣ್ಯಸಂಪಾದನೆಗಾಗಿ ಮತ್ತು ಶೀಲಸಂಪನ್ನ ಬದುಕಿಗಾಗಿ ಆಚರಿಸಲಾಗುತ್ತದೆ. ವರ್ಷವೆಲ್ಲ ಪವಿತ್ರದಿನಗಳು ವ್ರತದ ದಿನಗಳಾಗಿರುತ್ತವೆ; ಅಂದು ವ್ಯಕ್ತಿ ಯಾವುದೋ ಆಸೆಯ ಸಿದ್ಧಿಗಾಗಿ, ಮಾಮೂಲು ಆಹಾರವನ್ನು ಸ್ವೀಕರಿಸುವುದಿಲ್ಲ. ವ್ರತದ ನಿಯಮಾವಳಿ ಬಿಗಿಯಾದುದೇನಲ್ಲ. ವ್ರತದ ದಿವಸ ವ್ಯಕ್ತಿ ಆಹಾರ ಅಥವಾ ನೀರನ್ನು ಅಥವಾ ಎರಡನ್ನೂ ತೆಗೆದುಕೊಳ್ಳುವುದಿಲ್ಲ, ಅಥವಾ ಹಣ್ಣು ಹಾಲುಗಳನ್ನು, ಕಾಳುಗಳಿಲ್ಲದ ಒಂದೇ ಊಟವನ್ನು ಅಥವಾ ಸಿಹಿಭಕ್ಷ್ಯಗಳನ್ನು ತೆಗೆದುಕೊಳ್ಳುತ್ತಾನೆ.

ವ್ರತ ಒಂದು ದಿವಸದ್ದಾಗಬಹುದು ಅಥವಾ ಅನೇಕ ದಿವಸಗಳದ್ದಾಗಬಹುದು; ಯಾರೂ ಅದನ್ನು ಆಚರಿಸಬಹುದು. ಆದರೂ, ಅವಿವಾಹಿತೆಯರು ಮಾತ್ರ ಮಾಡುವ ವ್ರತಗಳು ಮತ್ತು ವಿವಾಹಿತೆಯರು ಮಾತ್ರ ಮಾಡತಕ್ಕವು ಉಂಟು. ವಿಧವೆಯರಿಗೇ ಮೀಸಲಾದ ವ್ರತಗಳೂ ಇವೆ.

ನಿರ್ದಿಷ್ಟ ವ್ರತಗಳನ್ನಾಚರಿಸುವ ಮಹಿಳೆಯರು ಹೇಳುವ ಮತ್ತು ಕೇಳುವ ಅನೇಕ ಧಾರ್ಮಿಕ ಕಥೆಗಳುಂಟು. ಅವು ಸಾರತಃ ಜನಪದ ಕಥೆಗಳಾಗಿದ್ದು, ಹಿಂದೂ ದೇವತೆಗಳಿಗೆ ಸಂಬಂಧಿಸಿದ ಪುರಾಣಗಳ ಅಕ್ಷಯವಾದ ಚಿಲುಮೆಯಲ್ಲಿ ಉಗಮಗೊಳ್ಳುತ್ತವೆ. ವಾರದ ಏಳು ದಿನಗಳೂ ಪವಿತ್ರವಾಗಿದ್ದು, ವ್ರತಾಚರಣೆಯಿಂದ ಮತ್ತು ಆಯಾ ವ್ರತದ ಮಹತ್ವವನ್ನು ಹೇಳುವ ಕಥೆಯನ್ನಾಲಿಸುವುದರಿಂದ ತುಷ್ಟಿಗೊಳಿಸಬಹುದಾದ ಒಬ್ಬ ದೇವತೆಗೆ ಮೀಸಲಾಗಿರುತ್ತವೆ.

ಹಿಂದೂಗಳಲ್ಲದೆ ಜೈನರೂ ತಮ್ಮ ಧಾರ್ಮಿಕ ಶ್ರದ್ಧೆ, ಔದಾರ್ಯಗಳಿಗೆ

ಹೆಸರಾಗಿದ್ದಾರೆ. ಸಾಪೇಕ್ಷವಾಗಿ ಹೆಚ್ಚು ಪ್ರಗತಿಪರವಾದ ಅವರ ಪುರಾಣಗಳು ಹೆಚ್ಚು ನೀತಿಬೋಧಕ ಹಾಗೂ ಅಪರಿಮಿತವಾಗಿವೆ. ತಮ್ಮ ದೇವಾಲಯಗಳ ನಿರ್ವಹಣೆಯಲ್ಲಿ ಅವರು ತುಂಬ ಎಚ್ಚರಿಕೆ ವಹಿಸುತ್ತಾರೆ. ಬಹುಪಾಲು ಜನರಿಗೆ ನಿತ್ಯ ದೇವಾಲಯ ದರ್ಶನ ಕಡ್ಡಾಯ ಕರ್ತವ್ಯವಾಗಿದೆ.

ತಮ್ಮ ಧಾರ್ಮಿಕ ನಂಬಿಕೆ, ಪೂಜೆಗಳಲ್ಲಿ ಬಿಗಿಯುಳ್ಳ ಜೈನರು ಮಾಂಸ, ಮದ್ಯಗಳಿಂದ ದೂರವಿರುತ್ತಾರೆ; ಅಹಿಂಸೆಯ ನಂಬಿಕೆ ಅವರನ್ನು ಒಮ್ಮೊಮ್ಮೆ ಎಷ್ಟು ದೂರ ಒಯ್ಯುತ್ತದೆಂದರೆ, ಅವರು ರಾತ್ರಿ ಆಹಾರವನ್ನು ವರ್ಜಿಸುತ್ತಾರೆ ಮತ್ತು ಮಧ್ಯಾಹ್ನ ಬಟ್ಟೆಯಲ್ಲಿ ಸೋಸಿದ ನೀರನ್ನು ಮಾತ್ರ ಕುಡಿಯುತ್ತಾರೆ. ತಿಂಗಳ ಎಂಟನೆಯ ಮತ್ತು ಹದಿನಾಲ್ಕನೆಯ ದಿನಗಳಂದು ತರಕಾರಿಗಳ ಬಳಕೆಯೂ ನಿಷಿದ್ಧ.

ವ್ರತಗಳು ಅವರ ಬದುಕಿನ ಸಾರಲಕ್ಷಣ; ವ್ರತದ ದಿನಗಳಂದು ತಮ್ಮವೇ ಆದ ಕತೆಗಳನ್ನು ಅವರು ಹೇಳುತ್ತಾರೆ. ತಮ್ಮ ಪರಿವ್ರಾಜಕ ಸಂನ್ಯಾಸಿಗಳನ್ನು ಜೈನರು ಬಹಳ ಗೌರವದಿಂದ ಕಾಣುತ್ತಾರೆ. ಈ ಯತಿಗಳು ದಿಗಂಬರರಾಗಿರುತ್ತಾರೆ, ಇಲ್ಲವೆ ಶ್ವೇತಾಂಬರರಾಗಿರುತ್ತಾರೆ; ಕ್ರಿಮಿಕೀಟಗಳು ಶ್ವಾಸದಲ್ಲಿ ತೂರದಂತೆ ಅವರು ಬಾಯಿಗೊಂದು ಪಟ್ಟಿ ಕಟ್ಟಿಕೊಳ್ಳುತ್ತಾರೆ. ಅವರು ಯಾವಾಗಲೂ ಬರಿಗಾಲಿನಲ್ಲಿ ನಡೆಯುತ್ತಾರೆ, ಎಂದೂ ಕತ್ತಿಯನ್ನುಪಯೋಗಿಸದೆ ತಲೆಗೂದಲನ್ನು ಕಿತ್ತು ತೆಗೆಯುತ್ತಾರೆ. ಎರಡು ಸೂರ್ಯ, ಎರಡು ಚಂದ್ರರಲ್ಲಿ ಜೈನರಿಗೆ ನಂಬಿಕೆ.

## ನಂಬಿಕೆ ಮತ್ತು ಮೂಢನಂಬಿಕೆಗಳು

ಈ ಸಂದರ್ಭದಲ್ಲಿ ರಾಜಾಸ್ಥಾನದಲ್ಲಿ ಪ್ರಚಲಿತವಾಗಿರುವ ನಂಬಿಕೆ, ಮೂಢನಂಬಿಕೆಗಳ ಚರ್ಚೆ ಅಪ್ರಸ್ತುತವಾಗಲಾರದು. ಇಂಥ ನಂಬಿಕೆ, ಮೂಢನಂಬಿಕೆಗಳು ಭಾರತದಾದ್ಯಂತ ಹಬ್ಬಿವೆ; ಆದರೂ, ರಾಜಾಸ್ಥಾನದ ವೈಶಿಷ್ಟ್ಯವಿದು: ಶಿಕ್ಷಣ ಮತ್ತು ಸಾಮಾಜಿಕ, ಆರ್ಥಿಕ, ರಾಜಕೀಯ ಜಾಗ್ರತಿ ಎಷ್ಟೆಲ್ಲ ಇದ್ದರೂ, ಗ್ರಾಮೀಣ ಹಾಗೂ ನಾಗರಿಕ ಸಮಾಜವೆರಡರಲ್ಲೂ ಈ ನಂಬಿಕೆ, ಮೂಢನಂಬಿಕೆಗಳು, ತಕ್ಕಮಟ್ಟಿಗೆ ತಗ್ಗಿದ್ದರೂ, ಇನ್ನೂ ಉಳಿದುಕೊಂಡಿವೆ.

ಇಷ್ಟ ದೇವಾಲಯವೊಂದರಲ್ಲಿ ಮಾಡುವ ದರ್ಶನ ಹಾಗೂ ಭಕ್ತಿಯೊಡನೆ ದಿನಚರಿಯನ್ನು ಆರಂಭಿಸುವುದು ಗಂಡಸರು, ಹೆಂಗಸರು ಇಬ್ಬರಲ್ಲೂ ನಡೆದು ಬಂದಿರುವ ಪದ್ಧತಿ. ಬಹುಪಾಲು ಕುಟುಂಬಗಳಲ್ಲಿ, ಮನೆಯ ಒಂದು ಸಣ್ಣ ಜಾಗವನ್ನು ಪೂಜಾಸ್ಥಳವನ್ನಾಗಿ ಬಳಸಲಾಗುತ್ತದೆ; ಅಲ್ಲಿ ದೇವ, ದೇವಿಯರ ಪ್ರತಿಮೆಗಳನ್ನೂ ಚಿತ್ರಗಳನ್ನೂ ಇಡಲಾಗುತ್ತದೆ. ಕುಟುಂಬದ ಸದಸ್ಯರು ಎದ್ದ ಸ್ವಲ್ಪ ಹೊತ್ತಿನಲ್ಲೇ ಈ ದೇವಸ್ಥಾನದಲ್ಲಿ ದರ್ಶನ ಪಡೆಯಲು ಸಾಲುಗಟ್ಟುತ್ತಾರೆ. ಮನೆಯಲ್ಲಿ ಮಾಡಿದ ಅಡುಗೆಯನ್ನು ಮೊದಲು ಈ ದೇವತೆಗಳಿಗೆ ಅರ್ಪಿಸಲಾಗುತ್ತದೆ; ಆ ಊಣಿಸನ್ನು ಕುಟುಂಬ ದೇವರ ಪ್ರಸಾದವೆಂದು ಪರಿಗಣಿಸುತ್ತದೆ. ಪ್ರತಿಯೊಬ್ಬರೂ ತಮ್ಮ ಇಷ್ಟದೇವತೆಯಾದ ನಿರ್ದಿಷ್ಟ ದೇವತೆಯಲ್ಲಿ ನಂಬಿಕೆಯಿಟ್ಟು, ಅದನ್ನು ತಮ್ಮ ಉದ್ಯಮಗಳ ಯಶಸ್ಸಿಗಾಗಿ ಹಾಗೂ ಆಶಾಪೂರ್ತಿಗಾಗಿ ಸ್ಮರಿಸಿ ಪ್ರಾರ್ಥಿಸುತ್ತಾರೆ.

ಗೀತೆ, ರಾಮಾಯಣಗಳಂಥ ಪವಿತ್ರ ಗ್ರಂಥಗಳನ್ನು ಸುಶಿಕ್ಷಿತ ಮತ್ತು ಸುಸಂಸ್ಕೃತ ಕುಟುಂಬಗಳು ಮಾತ್ರವಲ್ಲದೆ ಅರ್ಧಶಿಕ್ಷಿತ ಮತ್ತು ಅಶಿಕ್ಷಿತ ಕುಟುಂಬಗಳು ಕೂಡ ಗೌರವಿಸುತ್ತವೆ.

ಪ್ರತಿಯೊಂದು ಹಬ್ಬಕ್ಕೂ ಅದರದೇ ಆದ ಧಾರ್ಮಿಕ ವಿಧಿಗಳಿವೆ, ಸಂಬಂಧಿಸಿದ ದೇವತೆಗಳ ಪೂಜೆ ಸೇರಿದಂತೆ. ತಿಂಗಳ ಹನ್ನೊಂದನೆಯ ದಿನ ಬಹುಪಾಲು ಸ್ತ್ರೀಯರು ಉಪವಾಸ ಮಾಡುತ್ತಾರೆ; ಆ ದಿನ ಗಂಡುಮಕ್ಕಳು ಕೂಡ ಗತಿಸಿದ ತಮ್ಮ ತಾಯಿ, ತಂದೆ, ಮತ್ತಿತರ ಹಿರಿಯ ಬಂಧುಗಳ ನೆನಪಿನಲ್ಲಿ ಉಪವಾಸ ಮಾಡುತ್ತಾರೆ. ಹುಣ್ಣಿಮೆ ಮತ್ತೆ ಉಪವಾಸದ ದಿನ; ಅಂದು ಸತ್ಯನಾರಾಯಣರೂಪದಲ್ಲಿ ವಿಷ್ಣುವನ್ನು ಅರ್ಚಿಸಲಾಗುತ್ತದೆ ಮತ್ತು ಅವನ ಕಥೆಯನ್ನು ಬಹುಪಾಲು ವೈಷ್ಣವ ಗೃಹಗಳಲ್ಲಿ ಓದಲಾಗುತ್ತದೆ ಹಾಗೂ ಕೇಳಲಾಗುತ್ತದೆ. ಸೋಮವಾರ, ಮಂಗಳವಾರ ಮತ್ತು ಶನಿವಾರ, ಅಥವಾ ಇವುಗಳಲ್ಲಿ ಯಾವುದಾದರೊಂದು ದಿವಸ ಸ್ತ್ರೀ ಪುರುಷರಿಬ್ಬರೂ ಒಪ್ಪೊತ್ತು ಮಾತ್ರ ಊಟ ಮಾಡುತ್ತಾರೆ. ಇದು ಪುಣ್ಯಕರವೆಂದು ಅವರ ನಂಬಿಕೆ.

ಈ ಸಾಮಾನ್ಯ ನಂಬಿಕೆಗಳಲ್ಲದೆ, ರಾಜಾಸ್ಥಾನದ ಜನರಲ್ಲಿ ಸಾಕಷ್ಟು ಮೂಢ ನಂಬಿಕೆಗಳೂ ಇವೆ; ಅವರು ಅನೇಕ ದೈಹಿಕ ವ್ಯಾಧಿಗಳ ಸಂಬಂಧವಾಗಿ *ಜಂತರ್–ಮಂತರ್*ಗಳನ್ನು ನಂಬುತ್ತಾರೆ. *ಜಂತರ್*ಗಳು ಕಾಗದದ ಚೂರಿನ ಮೇಲೆ ಬರೆದ ಸಿದ್ಧ ಮಂತ್ರಗಳು; ಈ ಕಾಗದವನ್ನು ತಾಯಿತ *(ತವೀಜ್)* ಎಂದು ಕರೆಯುವ ಬೆಳ್ಳಿಯ ಪುಟ್ಟ ಕೋಶದಲ್ಲಿರಿಸಿ, ಕೊರಳಲ್ಲಿ ಧರಿಸಲಾಗುತ್ತದೆ. ಹಾಗೆಯೆ, ನಿರ್ದಿಷ್ಟ ಮಂತ್ರಗಳು ಹಾವು, ಚೇಳುಗಳ ಕಡಿತಕ್ಕೆ ಚಿಕಿತ್ಸೆಯಾಗಬಲ್ಲುವೆಂದು ನಂಬಲಾಗಿದೆ. ಜ್ವರ, ವಿಷಮ ಶೀತಜ್ವರ, ಸಿಡುಬು ಮತ್ತು ದಡಾರ – ಇವು ಅನಕ್ಷರಸ್ಥ ಜನತೆಯ *ಜಂತರ್ – ಮಂತರ್* ಚಿಕಿತ್ಸೆಗೊಳಪಡುವ ಕಾಯಿಲೆಗಳು. ನಿರ್ದಿಷ್ಟ ರೋಗಗಳ ಪರಿಹಾರಕ್ಕಾಗಿ ದೇವತೆಗಳನ್ನೂ ಪೂಜಿಸಲಾಗುತ್ತದೆ. ಶೀತಲಮಾತೆ (ಸಿಡುಬು ದೇವತೆ)ಯ ಗೌರ ವಾರ್ಥ ಹಾಡುಗಳನ್ನು ಹಾಡಲಾಗುತ್ತದೆ. ದಿನ ಬಿಟ್ಟು ದಿನ ಬರುವ ಜ್ವರದ – ಒಂದು ಬಗೆಯ ಮಲೇರಿಯ – ನಿವಾರಣೆಗಾಗಿ ಕಥೆಯೊಂದನ್ನು ಪಠಿಸಲಾಗುತ್ತದೆ. ನಾಯಿಕೆಮ್ಮಿನಿಂದ *(ಖುಲ್‌ಖುಲಿಯೊ)* ನರಳುವ ಮಗುವಿನ ತಾಯಿ *ರಾತಿ–ಜಗ* (ಇಡೀ ರಾತ್ರಿಯ ಭಕ್ತಿಸಂಗೀತ ಕಾರ್ಯಕ್ರಮ) ವನ್ನಾಚರಿಸುತ್ತಾಳೆ ಮತ್ತು ಹಾಡು, ಭಜನೆಗಳ ಮೂಲಕ ಇರುಳೆಲ್ಲ ಎಚ್ಚರವಾಗಿರುತ್ತಾಳೆ. ಇಂಥದೇ *ರಾತಿ–ಜಗ*ದಿಂದ ವಿಷಮಶೀತಜ್ವರವನ್ನೂ ಗುಣಪಡಿಸಬಹುದೆಂಬ ನಂಬಿಕೆಯುಂಟು.

ಬಂಜೆ ಸ್ತ್ರೀಯರು *ಜಂತರ್*ಗಳನ್ನು ಬಳಸುತ್ತಾರೆ ಮತ್ತು ಸಂತಾನಕ್ಕಾಗಿ ದೇವತೆಗಳನ್ನರ್ಚಿಸುತ್ತಾರೆ. ಮತ್ತೆ ಮತ್ತೆ ಮಕ್ಕಳನ್ನು ಕಳೆದುಕೊಳ್ಳುವವರೂ ಇಂಥ ವಿಧಾನಗಳನ್ನು ಬಳಸುತ್ತಾರೆ. ಇಂತಹ ಪ್ರಕರಣಗಳಲ್ಲಿ, ಮಕ್ಕಳಿಗೆ ಎಳೆಯ ವಯಸ್ಸಿನಲ್ಲೆ ಮೂಗು ಅಥವಾ ಕಿವಿಯನ್ನು ಚುಚ್ಚಿ, ಮೂಗಿಗೆ ಅಥವಾ ಕಿವಿಗೆ ಉಂಗುರಗಳನ್ನು ತೊಡಿಸಲಾಗುತ್ತದೆ. ಇಂತಹ ಗಂಡುಮಕ್ಕಳಿಗೆ ನಾಥ್‌ಮಲ್ ಅಥವಾ ನಾಥಿರಾಮ್ ಎಂದು ಹೆಸರಿಡಲಾಗುತ್ತದೆ. ಈ ಮಕ್ಕಳಿಗೆ ಮನೆಯ ಬಟ್ಟೆ ತೊಡಿಸಬಾರದೆಂದು ನಂಬಿಕೆ; ಬಟ್ಟೆಯನ್ನು ನಿರ್ದಿಷ್ಟ ಅವಧಿಯವರೆಗೆ ಸಂಬಂಧಿಗಳಿಂದ

ಅಥವಾ ಮಿತ್ರರಿಂದ ಭಿಕ್ಷೆ ತರಬೇಕು.

ಸಂತಾನವಿಲ್ಲದ, ಪುತ್ರನನ್ನು ಪಡೆಯಬಯಸುವ ಮಹಿಳೆಯರು ಭೈರೋನ್ ಅಥವಾ ಭೈರವ ದೇವಾಲಯಕ್ಕೆ ಹೋಗಿ, ಅವನನ್ನು ಪೂಜಿಸುತ್ತಾರೆ; ಅದು ಸಾಮಾನ್ಯವಾಗಿ *ಖೆಜ್ರಿ* ಮರದಡಿ ಇರುತ್ತದೆ. ಹೆಂಗಸರ ಒಂಗಡಿಸಿದ ವಸ್ತ್ರಗಳನ್ನು, ಅದರಲ್ಲೂ ಕಾಂಚ್ಲಿ ಅಥವಾ ಕುಪ್ಪಸವನ್ನು, ನೇತುಹಾಕಲು ಈ ಮರದ ಕೊಂಬೆಗಳನ್ನು ಬಳಸಲಾಗುತ್ತದೆ; ಭಕ್ತಿಯ ಇಷ್ಟಾರ್ಥ ಕೈಗೂಡಬೇಕಾದರೆ, ನಿತ್ಯ ಬಳಸಿದ ವಸ್ತ್ರಗಳನ್ನು ವರ್ಜಿಸಬೇಕೆಂಬುದು ನಂಬಿಕೆ.

ಬಂಜೆಯರು ಅಮಂಗಳಕರ ಮತ್ತು ಸ್ವಾಗತಕ್ಕೆ ತಕ್ಕವರಲ್ಲ ಎಂದು ನಂಬಲಾಗಿದೆ. ಬಂಜೆಯೆನಿಸಿದವಳ ದುಃಖವನ್ನು ವ್ಯಕ್ತಪಡಿಸಲು ಶಬ್ದಗಳಿಲ್ಲ. ಉತ್ಕಟ ನಿರಾಶೆ, ಅಸಹಾಯಕತೆಗಳಲ್ಲಿ ಅವಳು ಭೈರೋನ್‌ಜಿ – ಶಿವನ ಒಂದು ರೂಪ – ಯಲ್ಲಿಗೆ ಹೋಗಿ, ಜನಪದ ಗೀತವೊಂದರಲ್ಲಿ ಪ್ರಾರ್ಥಿಸುತ್ತಾಳೆ:

ಭೈರೋನ್‌ಜಿ, ಮರಳುಗಾಡಿನಲ್ಲಿ ಬೆಳೆದ ಗೋಧಿಯಿಂದ ಮಾಡಿದ
ಮಿಠಾಯಿಗಳನ್ನು ನಿನಗರ್ಪಿಸುತ್ತೇನೆ;
ಹಸುವಿನ ಹಾಲಿನಿಂದ ಮಾಡಿದ ಬೆಣ್ಣೆಯನ್ನು ಅವುಗಳಲ್ಲಿರಿಸುತ್ತೇನೆ.
ಓ ಕಾಶೀವಾಸಿ, ನನ್ನದೊಂದು ಪ್ರಾರ್ಥನೆಯನ್ನು ಕೇಳು.
ಭೈರೋನ್‌ಜಿ, ನನ್ನ ನಾದಿನಿಯರು ಹಂಗಿಸಿದ್ದಾರೆ ನನ್ನನ್ನು;
ಅವರ ತೊಟ್ಟಿಲುಗಳಲ್ಲಿ ತೂಗುತ್ತಾರೆ ಗಂಡುಮಕ್ಕಳನ್ನು.
ಭೈರೋನ್‌ಜಿ, ಕುಟುಂಬದಲ್ಲಿ ನಾನೊಬ್ಬಳೆ ಪುತ್ರಹೀನೆ.
ಭೈರೋನ್‌ಜಿ, ನನ್ನ ಕುಪ್ಪಸವೆಂದೂ ಹಾಲಿನಿಂದ ಒದ್ದೆಯಾಗಿಲ್ಲ,
ಅಥವಾ ನನ್ನ ತೋಳಮೇಲೆ ಮುದ್ದುಮಗ ಜೊಲ್ಲು ಸುರಿಸಿಲ್ಲ.
ಓ ಕಾಶೀನಿವಾಸಿ, ನನ್ನದೊಂದು ಪ್ರಾರ್ಥನೆಯನ್ನು ಕೇಳು.

ರಾಜಾಸ್ಥಾನದ ಜಾನಪದ, ಕುಟುಂಬದ ಮೃತಸದಸ್ಯರನ್ನು ಕೂಡ ಉಳಿದಿರುವ ಸದಸ್ಯರ ನಡುವೆ ಜೀವಂತವಾಗಿರಿಸುತ್ತದೆ. ಇಂಥ ಆತ್ಮಗಳನ್ನು *ಪಿತರ್* ಮತ್ತು *ಪಿತರಣಿಯರು* ಎಂದು ಕರೆಯಲಾಗುತ್ತದೆ. ತನ್ನ ಗಂಡನ ಮುಂದೆ ಸಾಯುವ ಸ್ತ್ರೀ *ಪಿತರಣಿಯ* ಅಂತಸ್ತು ಪಡೆಯುತ್ತಾಳೆ. *ಪಿತರ್* ಮತ್ತು *ಪಿತರಣಿಯರನ್ನು* ವರ್ಷದ ಒಂದು ನಿರ್ದಿಷ್ಟ ಪಕ್ಷವಾದ ಶ್ರಾದ್ಧಪಕ್ಷದಲ್ಲಿ ಸ್ಮರಿಸಲಾಗುತ್ತದೆ. *ಪಿತರ್* ಅಥವಾ *ಪಿತರಣಿ* ಸತ್ತ ದಿನದಂದು ಬ್ರಾಹ್ಮಣರಿಗೆ ಹಸು, ಕಾಗೆ, ನಾಯಿಗಳಿಗೆ ಆಹಾರವನ್ನು ಅರ್ಪಿಸಲಾಗುತ್ತದೆ. ಕೃಷ್ಣಪಕ್ಷದ ಹದಿನೈದನೆಯ ದಿವಸವೂ *ಪಿತರ್*‌ಗಳನ್ನು ನೀರು ಗಡಿಗೆಗಳನ್ನಿಟ್ಟ ಜಾಗದಲ್ಲಿ ಪೂಜಿಸಲಾಗುತ್ತದೆ. ಅವರ ಸ್ಮೃತಿಯನ್ನು *ರಾತಿ–ಜಗ* ಮತ್ತು ಇತರ ಸಂದರ್ಭಗಳಲ್ಲಿ ಹಾಡಲಾಗುವ ಹಾಡುಗಳ ಮೂಲಕ ಕಾಪಾಡಲಾಗುತ್ತದೆ.

## ಸ್ಥಳೀಯ ದೇವತೆಗಳು

ಭಾರತೀಯ ಸಂಸ್ಕೃತಿ ಮೊತ್ತದಲ್ಲಿ ಶಿಷ್ಟ ಮತ್ತು ಜನಪದ ಸಂಸ್ಕೃತಿಗಳ

ಸಮನ್ವಯ. ಆದರೆ ಈ ಪಿತ್ರಾರ್ಜಿತ ಆಸ್ತಿಯಲ್ಲಿ ವೇದಗಳು ಮತ್ತು ವಾಕ್ಪರಂಪರೆ ಎರಡೂ ಗೌರವಾನ್ವಿತ ಸ್ಥಾನ ಪಡೆದಿವೆ. ಭಾರತೀಯರು ಏಕಕಾಲದಲ್ಲಿ ಸೂರ್ಯ, ಮಾತೃದೇವಿ, ಶಿವ, ವಿಷ್ಣು, ಗಣೇಶರನ್ನು ಪೂಜಿಸುತ್ತಾರೆ. ಈ ವೈದಿಕ ಮತ್ತು ಪುರಾಣಿಕ ದೇವದೇವಿಯರ ಜೊತೆಗೆ ಹಲವಾರು ಜನಪದ ದೇವತೆಗಳಿವೆ. ರಾಜಾಸ್ಥಾನದಲ್ಲಿ ಈ ಸ್ಥಳೀಯ ದೇವತೆಗಳ ಗೌರವಾರ್ಥ ವ್ಯವಸ್ಥೆಗೊಳಿಸುವ ಜಾತ್ರೆ, ಹಬ್ಬಗಳಲ್ಲಿ ಗ್ರಾಮೀಣ ಬದುಕಿನ, ಅದರ ಸೌಂದರ್ಯ ಶಕ್ತಿಗಳ ವಿಶಾಲ ದೃಶ್ಯಪರಂಪರೆ ಕಂಡುಬರುತ್ತದೆ.

ರಾಜಸ್ಥಾನದಲ್ಲಿ ಸಂಕುಚಿತ ಜಾತೀಯತೆ ಇಲ್ಲವೆಂಬುದು ಗಮನಾರ್ಹ. ರಾಜಾಸ್ಥಾನದ ಜನಪದ ಕಥೆಗಳು ಮುಸ್ಲಿಮರನ್ನು ಕುರಿತಂತೆ ಮಾತ್ರವಲ್ಲ, ದಿವ್ಯಜ್ಞಾನಿಗಳಾದ ಹಿಂದೂ ಸಂತರನ್ನು ಕುರಿತು ಕೂಡ 'ಪೀರ'ರನ್ನು ಹೆಸರಿಸುತ್ತವೆ. ಈ ಭಾಗದ ಹಿಂದೂಗಳು 'ಪೀರ'ರ ಗೋರಿಗಳಿಗೆ *ಚಾದರ*ವನ್ನರ್ಪಿಸುತ್ತಾರೆ ಮತ್ತು ಮುಸ್ಲಿಮರು ಹಿಂದೂಗಳಷ್ಟೆ ಉತ್ಸಾಹದಿಂದ *ತೇಜಜಿ* ಮತ್ತಿತರ ಜಾತ್ರೆಗಳಲ್ಲಿ ಪಾಲ್ಗೊಳ್ಳುತ್ತಾರೆ.

ರಾಜಸ್ಥಾನಿ ಜಾನಪದ ನಾಥಪಂಥದ ಸ್ಥಾಪಕ–ಗುರು ಗೋರಖನಾಥನನ್ನು ಅಮರನೆಂದು ಭಾವಿಸುತ್ತದೆ. ಈ ಪಂಥಕ್ಕೆ ರಾಜಾಸ್ಥಾನದಲ್ಲೊಂದು ಪ್ರಮುಖ ಸ್ಥಾನವಿತ್ತು: ಇಂದಿಗೂ ಅದರ ಅನುಯಾಯಿಗಳು ಹಲವರಿದ್ದಾರೆ. ರಾಜಾಸ್ಥಾನದ ಇತರ ಅನೇಕ ಪಂಥಗಳು ತಮ್ಮ ಮೂಲವನ್ನು ಗೋರಖನಾಥನಿಗೊಯ್ಯುತ್ತವೆ; ಅವನು ಈ ಪಂಥಗಳ ಗುರುಗಳನ್ನು ಪ್ರಭಾವಿಸಿ, ಅವರನ್ನು ಶಿಷ್ಯರನ್ನಾಗಿಸಿಕೊಂಡನೆಂದು ತೋರುತ್ತದೆ. ಹೀಗಾಗಿ, ಜಸ್ನಾಥಿ ಸಂಪ್ರದಾಯವನ್ನು ಜಸ್ನಾಥ್ ಸ್ಥಾಪಿಸಿದ. ವಿಷ್ಣೋಯಿ ಸಂಪ್ರದಾಯವನ್ನು ಜಂಭಾಯಿ ಮತ್ತು ನಿರಂಜನಿ ಸಂಪ್ರದಾಯವನ್ನು ಹರಿದಾಸ ಸ್ಥಾಪಿಸಿದರು; ಕಡೆಯವನು, ಗೋರಖನಾಥನ ಪ್ರವಚನಗಳಿಗೆ ಆಧ್ಯಾತ್ಮಿಕ ಸಮಾಧಿಯಲ್ಲಿ ಕಿವಿಗೊಟ್ಟು ಸಂತನಾದ ಒಬ್ಬ ದೇಶಭ್ರಷ್ಟ.

ರಾಜಾಸ್ಥಾನಿ ಜನಪದ ಕಥೆಗಳು ಮತ್ತು ಜನಪದ ಗೀತಗಳು ಇತರ ನಾಥರನ್ನೂ ಹೇಳುತ್ತವೆ. ಜಲ್ಲಂಧರನಾಥ್, ಚೋರನ್ನಿನಾಥ್, ಬಾಲನಾಥ್ ಮತ್ತು ಗರೀಬ್ ನಾಥ್; 'ಜೋಗಿ'ಗಳು ಹಾಡುವ ಗೋಪೀಚಂದ ಭರ್ತರಿಯನ್ನು ಕುರಿತ ಜನಪದ ಕಥನಗೀತಗಳಿದ್ದು, ಅವು ಅತ್ಯುನ್ನತ ಮಾನವ ಭಾವಗಳನ್ನು ಕೆರಳಿಸುತ್ತವೆ.

ಈ ಎಲ್ಲ ಸಂತರು ಜನಸಾಮಾನ್ಯರ ಮನಸ್ಸಿನಲ್ಲಿ ಆಧ್ಯಾತ್ಮಿಕ ಮತ್ತು ದೈವಿಕ ಗೌರವಕ್ಕೆ ಪಾತ್ರರಾಗಿದ್ದಾರೆ. ಇವರೆಲ್ಲ ವಿಭಿನ್ನ ಜಾತಿ ಧರ್ಮಗಳಿಂದ ಬಂದವರಾಗಿದ್ದು ರಾಜಾಸ್ಥಾನದ ಜನಪದ ಸಂಸ್ಕೃತಿ ವೈವಿಧ್ಯಮಯವೂ ಸಂಕೀರ್ಣವೂ ಆಗಲು ಕಾರಣರಾಗಿದ್ದಾರೆ.

ಮಹಾಕಾವ್ಯ ಯುಗದಿಂದಲೂ ಯೋಧರ ನಾಡಾಗಿರುವ ರಾಜಾಸ್ಥಾನಕ್ಕೆ ಶಕ್ತಿಪೂಜೆಯ ಬಹು ಪ್ರಾಚೀನ ಪರಂಪರೆಯುಂಟು; ಮಾತೃದೇವತೆಗೆ ಮೀಸಲಾದ ದೇವಾಲಯಗಳು ಅಸಂಖ್ಯವಾಗಿವೆ. ರಾಜಾಸ್ಥಾನದ ಪ್ರತಿಯೊಂದು ಕುಟುಂಬಕ್ಕೂ ತನ್ನದೇ ಆದ ಕುಲದೇವಿಯುಂಟು. ಬೇರೆಕಡೆ ವಾಸಿಸುವ ರಾಜಾಸ್ಥಾನಿಗಳು ಮಗನ

ಚೌಲ, ವಿವಾಹೋತ್ತರ ಪೂಜೆ, ಆಶಾಸಿದ್ಧಿಯಂತಹ ಸಂದರ್ಭಗಳಲ್ಲಿ ಸಾವಿರಾರು ಕಿಲೋಮೀಟರ್ ಪ್ರಯಾಣಮಾಡಿ, ಕುಲದೇವಿಯ ಗುಡಿಗೆ ಬರುತ್ತಾರೆ. ಇಂಥ ದೇಗುಲಗಳಲ್ಲೆಲ್ಲ ಭೈರೋನ್‌ಜಿ ಅವಶ್ಯವಾಗಿ ಇರುತ್ತಾನೆ, ದೇವತೆಗೆ ಸಾಮಾನ್ಯ ಜನ ಎಣ್ಣೆಯನ್ನು ಸಮರ್ಪಿಸಿದರೆ, ಮಾಂಸಾಹಾರಿಗಳು ಮತ್ತು ಸಿರಿವಂತರು ತಮ್ಮ ವಾಡಿಕೆಯಂತೆ ದೇವಿ, ಭೈರೋನ್‌ಜಿ ಇಬ್ಬರನ್ನೂ ಆಡು, ಎಮ್ಮೆಗಳ ಮಾಂಸ ಮತ್ತು ಮದ್ಯದ ಸಮರ್ಪಣದಿಂದ ತುಷ್ಟಿಪಡಿಸುತ್ತಾರೆ.

ಕಲ್ಲಿನಲ್ಲಿ ಕೆತ್ತಿದ ಏಳು ಸ್ತ್ರೀ ಮೂರ್ತಿಗಳನ್ನು ರಾಜಾಸ್ಥಾನದಾದ್ಯಂತ ಮಹಾಮಾಯೆಯಾಗಿ ಅರ್ಚಿಸಲಾಗುತ್ತದೆ. ಅವರಲ್ಲಿ ಐವರನ್ನು ಮವಲಿಯ, ಬೈಯನ್ಸ್, ಉಪರ್‌ಲೈರ, ಮಬರನ್ಯಾನ್ಸ್ ಮತ್ತು ಜೋಧ್ನಿಯ ಎಂದು ಕರೆಯಲಾಗು ತ್ತದೆ. ಈ ದೈವಗಳ ಅಧಿಕಾರವ್ಯಾಪ್ತಿ ಗರ್ಭಧಾರಣೆಯಿಂದ ಹಿಡಿದು ಮಗುವಿನ ಐದನೆಯ ವರ್ಷದವರೆಗೆ. ಮಗುವಿನ ಆರೋಗ್ಯಕ್ಕಾಗಿ ಅವರನ್ನು ಯಾವಾಗಲೂ ಪ್ರಾರ್ಥಿಸಲಾಗುತ್ತದೆ; ಅನ್ನದ *ಭೋಗ, ಮೋತ್* ಅಥವಾ ಜೋಳವನ್ನು ಅವರಿಗೆ ಅರ್ಪಿಸಲಾಗುತ್ತದೆ. ರಾಜಾಸ್ಥಾನಿಗಳು *ಚುಂದರಿ*ಗೆ 'ಮೆಹಂದಿ'ಯ ಬಣ್ಣ ಹಾಕುತ್ತಾರೆ; *ರೋಲಿ* ಮತ್ತು *ಮೋಲಿ*ಯನ್ನು ಕೂಡ ಮಹಾಮಾಯೆಯರಿಗೆ ವಿಧಿಪೂರ್ವಕ ಸಮರ್ಪಿಸಲಾಗುತ್ತದೆ; ಆಗ ಅವರನ್ನೂ ಭೈರವನನ್ನೂ ಹೊಗಳುವ ಹಾಡುಗಳನ್ನು ಹಾಡಲಾಗುತ್ತದೆ.

ಮಾತೃದೇವತೆಯಾಗಿ ದುರ್ಗೆ ಹೆಸರಾಗಿದ್ದಾಳೆ; ಅವಳಿಗೆ ಪವಿತ್ರವಾದ ಇರುಳುಗಳು ವರ್ಷಕ್ಕೆರಡು ಸಲ ಬರುತ್ತವೆ. ಈ ಇರುಳುಗಳಲ್ಲಿ ಪಂಡಿತಭಕ್ತರು ದುರ್ಗಾಸಪ್ತಶತಿಯನ್ನು ಪಠಿಸುತ್ತಾರೆ ಮತ್ತು ಅವಳ ಪೂಜೆಗೆ ಸಂಬಂಧಿಸಿದ ವ್ರತಗಳನ್ನೂ ಇತರ ವಿಧಿಗಳನ್ನೂ ಆಚರಿಸುತ್ತಾರೆ. ಸ್ವತಃ ಹಾಗೆ ಮಾಡಲಾರದವರು ತಮ್ಮ ಪರವಾಗಿ ಅದನ್ನು ಮಾಡಲು ಬ್ರಾಹ್ಮಣರನ್ನು ನೇಮಿಸುತ್ತಾರೆ.

ಆದಿವಾಸಿ ಭಿಲ್ಲರು ಮತ್ತು ಮೀನರು ಕಾಳಿ ಅಥವಾ ಮಾತಾಜಿಯ ಭಕ್ತರು; ಜನಪದ ಜೀವನವನ್ನು ಅದರೆಲ್ಲ ವರ್ಣ, ಲಯ, ಉನ್ಮಾದಗಳಲ್ಲಿ ನೋಡ ಬಯಸುವವರಿಗೆ ಭಿಲ್ಲರ ಪ್ರಸಿದ್ಧ ಬಪ್ರಿ ನೃತ್ಯವೊಂದು ನಿಜವಾದ ರಸದೌತಣ.

ರಾಜಾಸ್ಥಾನದಲ್ಲಿ ಗ್ರಾಮಗಳು, ನಗರಗಳಿರುವಷ್ಟೆ ಶಕ್ತಿಗೆ ಅನೇಕ ಹೆಸರುಗಳಿವೆ. ಜಮ್ವಮಾತಾ, ಖಿಮೆಲ್ ಮಾತಾ, ಚಾಮುಂಡಾ, ಸಿಲಾದೇವಿ, ನಗ್ನೇಚಿಯಾಜಿ, ಜೋಬ್ನರ್ ಮಾತಾ, ಸಕಂಭಾರಿ – ಇವು ಹೆಚ್ಚು ಪ್ರಸಿದ್ಧವಾದ ಹೆಸರುಗಳಲ್ಲಿ ಕೆಲವು.

ರಾಜಾಸ್ಥಾನದಲ್ಲಿ ಶೀತಲಾಪೂಜೆ ಬಹು ಪ್ರಾಚೀನವಾದುದು. ದೇಶದ ಈ ಭಾಗದಲ್ಲಿ ಅತ್ಯಂತ ಭಯಂಕರವಾದ ರೋಗಗಳಲ್ಲೊಂದಾದ ಸಿಡುಬಿನ ವಿರುದ್ಧ ಮಕ್ಕಳಿಗೆ ರಕ್ಷಣೆ ಕೊಡುವ ದೇವಿ, ಶೀತಲಾ. ಸಿಡುಬು ದೇಹದಲ್ಲಿ ಅಪಾರ ಶಾಖವನ್ನು ಉತ್ಪಾದಿಸುವುದರಿಂದ, ತಂಪು ಮಾಡುವುದಕ್ಕಾಗಿ ದೇವಿಗೆ ಸೀರನ್ನೂ ತಂಗುಳು ಆಹಾರವನ್ನೂ ಅರ್ಪಿಸಲಾಗುತ್ತದೆ. ಆದ್ದರಿಂದಲೇ ಶೀತಲಾ ಎಂಬ ಹೆಸರು. ಅವಳು ಸೆಥಲ್ ಮಾತಾ ಎಂದೂ ಪ್ರಸಿದ್ಧಳು. ಅವಳ ವಾಹನವಾದ ಕತ್ತೆಯನ್ನೂ ಪೂಜಿಸಲಾಗುತ್ತದೆ. ಸಹಜವಾದ ಮೊಡವೆಯಂಥ ಗುರುತುಗಳುಳ್ಳ ಕಲ್ಲುಗಳನ್ನೂ ಶೀತಲಾ ವಿಗ್ರಹವೆಂದು ಅರ್ಚಿಸಲಾಗುತ್ತದೆ. ಅವಳಿಗೆ ಅರ್ಪಿತ ಮಾದುದನ್ನೆಲ್ಲ ಅವಳ ಪುರೋ

ಹಿತರೆಂದು ಪರಿಗಣಿಸಲಾಗುವ ಕುಂಬಾರರು ತೆಗೆದುಕೊಳ್ಳುತ್ತಾರೆ. ಅವಳ ಭೋಗ್‌ದಲ್ಲಿ ಸಿಹಿಯನ್ನು, ಸಜ್ಜೆ ರೊಟ್ಟಿ, ಮತ್ತು ರಬ್ ಅಥವಾ ರಬ್ಡಿ (ಬೆಣ್ಣೆ ಮತ್ತು ಸಜ್ಜೆಯಿಂದ ತಯಾರಿಸುವ ಸಾರಿನಂಥ ಪದಾರ್ಥ)ಗಳನ್ನು ಬಳಸಲಾಗುತ್ತದೆ. ಜೈಪುರ ಜಿಲ್ಲೆಯಲ್ಲಿ ಚಕ್ಸುವಿನ ಶೀತಲಾ ಲಕ್ಷಾಂತರ ಜನರನ್ನು ಶೀತ್ಲಾಷ್ಟಮಿಯ ದಿವಸ ಆಕರ್ಷಿಸುತ್ತಾಳೆ. ಶೇಖಾವತಿ ಪ್ರಾಂತದಲ್ಲಿ ಬಘೋರ್‌ದ ಶೀತ್ಲಾ ಹತ್ತಿರದ ಮತ್ತು ದೂರದ ಜನರ ಗೌರವಕ್ಕೆ ಪಾತ್ರಳು. ಪ್ರತಿಯೊಂದು ನಗರ, ಸಣ್ಣ ಪಟ್ಟಣ, ಗ್ರಾಮ ಅಥವಾ ಸ್ಥಳದಲ್ಲಿ ಅದರದೇ ಆದ 'ಶೀತ್ಲಾ – ಕಿ – ಮಧಿ' ಅಥವಾ ಗುಡಿಯುಂಟು.

ಭಯಂಕರ ದೇವದೇವಿಯರು ತಮ್ಮ ಭಯಾನಕ ರೂಪಗಳನ್ನು ವರ್ಜಿಸಿ, ಭಕ್ತರ ಕಲ್ಪನೆ, ಶ್ರದ್ಧೆಗಳಿಗನುಗುಣವಾಗಿ ಪ್ರಸನ್ನ ರೂಪಗಳನ್ನು ತಳೆದಿರುವುದಕ್ಕೆ ನಿದರ್ಶನ ಗಳಿವೆ. ಒಂದು ವಿಶಿಷ್ಟ ನಿದರ್ಶನವೆಂದರೆ, ಕಡೆಕಡೆಗೆ ಶಿವನಾಗಿ ಪರಿಣಮಿಸಿದ ವೈದಿಕ ರುದ್ರ; ಶಿವ ಜನಪ್ರಿಯ ದೇವತೆಗಳಲ್ಲಿ ಒಬ್ಬನಾಗಿದ್ದು, ಲಿಂಗ ಸಂಕೇತಿಸುವಂತೆ ಬದುಕಿನ ಮತ್ತು ಸಂತಾನೋತ್ಪತ್ತಿಯ ತತ್ವದ ಪೂಜೆಯೊಡನೆ ಸಾಹಚರ್ಯ ಗೊಂಡಿದ್ದಾನೆ. ಚಂಡಿಕೆ ಅಥವಾ ದುರ್ಗೆ ಕೂಡ ರಾಜಾಸ್ಥಾನದಲ್ಲಿ ತನ್ನ ಪ್ರಸನ್ನ ರೂಪಗಳಲ್ಲಿ ಕಾಣಿಸಿಕೊಳ್ಳುತ್ತಾಳೆ – ಅದರಲ್ಲೂ ಮದ್ಯಮಾಂಸಗಳನ್ನು ಸೇವಿಸದವರ ಪಾಲಿಗೆ. ಸಿಕರ್ ಜಿಲ್ಲೆಯಲ್ಲಿ ಸಕ್ರೈ ಮಾತೆಯ ಭಕ್ತರು ಬಹಳಷ್ಟಿದ್ದಾರೆ. ಈ ದೇವಿಯನ್ನು 'ಸಿಹಿ'ಗಳಿಂದ ತೃಪ್ತಿಗೊಳಿಸಲಾಗುತ್ತದೆ; ಅವಳ ಗುಡಿಗೆ ಅನತಿದೂರ ದಲ್ಲಿರುವ ಜೀನ್ ಮಾತೆಯಾದರೊ ಆಡು, ಎಮ್ಮೆಗಳನ್ನು ಸ್ವೀಕರಿಸುತ್ತಾಳೆ. ಶಂಕರಾ ಎಂಬುದು ಸಕ್ರೈ ಮಾತೆಯ ಮೂಲನಾಮ. ಜೈನ ಸಮಾಜಗಳ ಪಾಲಿಗೂ ದೇವಿಯ ಇಂಥ ಸೂಕ್ಷ್ಮ ರೂಪಗಳುಂಟು; ಓಸ್ವಾಲ್ ಜೈನರ ಸಚಿಯ ಮಾತೆ, ಮಾರ್ವಾರಿನ – ಹಿಂದಿನ ಜೋಧ್‌ಪುರ್ ರಾಜ್ಯ – ಆದ್ಯಂತ ಪ್ರಸಿದ್ಧಳಾಗಿದ್ದಾಳೆ.

ರಾಜಾಸ್ಥಾನದ ಸ್ತ್ರೀಯರು ಹೋಳಿಕಾಳನ್ನು ಮಾತೆಯೆಂದು ಭಾವಿಸುತ್ತಾರೆ; ಹೋಳಿಯ ಬೂದಿ ಪವಿತ್ರವೆಂದು ಪರಿಗಣಿಸಲಾಗುತ್ತದೆ. ಗಾಂಗೌರ್ ಅಥವಾ ಗೌರಿ (ಶಿವನ ಪತ್ನಿ ಪಾರ್ವತಿ) ಯ ಪೂಜೆಯೊಂದು ಹದಿನಾರು ದಿನಗಳ ಆಚರಣೆ; ಅದನ್ನು ಕನ್ಯೆ, ವಿವಾಹಿತ ಮಹಿಳೆ ಇಬ್ಬರೂ ಪಾಲಿಸುತ್ತಾರೆ. ಅಂತೆಯೆ ಮಳೆಗಾಲದ ತೀಜ್ ಹಬ್ಬಕ್ಕೆ ಪಾರ್ವತಿಯ ಹುಟ್ಟಿನ ಸಂಬಂಧವಿದೆ.

ಶಾಂತಿ ಮತ್ತು ಸಮರದಲ್ಲಿ ರಜಪೂತರ ಮಿತ್ರರೂ ತತ್ವಜ್ಞರೂ ಮಾರ್ಗದರ್ಶಿ ಗಳೂ ಆದ ಚಾರಣರು ಶಕ್ತಿಯ ಒಂಬತ್ತು ಲಕ್ಷ ಅವತಾರಗಳುಂಟೆಂದೂ ಅವುಗಳಲ್ಲಿ ಎಂಬತ್ತನಾಲ್ಕು ಚಾರಣಕುಲಕ್ಕೆ ಸಂಬಂಧಿಸಿದವೆಂದೂ ನಂಬುತ್ತಾರೆ. ಅವರು ಪೌರಾಣಿಕ ಹಿಂಗುಲಜ್ ದೇವಿಯನ್ನು ಪೂಜಿಸುತ್ತಾರೆ ಮತ್ತು ಬಂಕಲ್, ಅವದ್, ಕಮ್ಜ್ಲಿ, ಬರ್ವರ್, ಚಹಂದೆ, ಮಹಾಮಾಯ, ಚಲೆರೈ, ಕರ್ನಿ ಮತ್ತು ಇತರ ಅವತಾರಗಳನ್ನು ಕೂಡ ಗೌರವಿಸುತ್ತಾರೆ. ಈ ಅವತಾರಗಳಲ್ಲಿ ಒಂದೊಂದಕ್ಕೂ ಅನೇಕ ಪವಾಡಗಳು ಸಂಬಂಧಿಸಿದೆ.

ಆಯಿ ರಾಜಾಸ್ಥಾನದ ಇನ್ನೊಂದು ವಿಲಕ್ಷಣ ಪಂಥ. ಇದರ ಅನುಯಾಯಿಗಳು, ಹದಿನೈದನೆಯ ಶತಮಾನದಲ್ಲಿ ಬದುಕಿದ್ದಳೆಂದು ನಂಬಲಾದ ರಜಪೂತ ಮಹಿಳೆಯ

ಆಯಿಜಿಯನ್ನು ಶಕ್ತಿಯ ಅವತಾರವೆಂದು ಅರ್ಚಿಸುತ್ತಾರೆ. ಈ ಪಂಥದ ಪ್ರಮುಖ ಪೀಠ ಜೋಧ್‌ಪುರ್ ಜಿಲ್ಲೆಯ ಬಿಲಾರದಲ್ಲಿದೆ.

ರಾಜಾಸ್ಥಾನದ 'ಸತಿ' ಐತಿಹ್ಯ ಮಾತ್ರವಲ್ಲ, ಇತಿಹಾಸ ಕೂಡ. ಯುದ್ಧದಲ್ಲಿ ಧೈರ್ಯಸಾಹಸಗಳನ್ನು ಮಾಡಿದ ವೀರರು ಮತ್ತು ತಮ್ಮ ಗಂಡಂದಿರ ಚಿತೆಯ ಮೇಲೆ ಆತ್ಮಾಹುತಿ ಮಾಡಿಕೊಂಡ ರಾಣಿಯರು ಸಾರ್ವತ್ರಿಕವಾಗಿ ಮನ್ನಣೆಗೊಳ್ಳುತ್ತಾರೆ. ಸ್ತ್ರೀಯರ ಆತ್ಮಾಹುತಿಗೆ ಕಾನೂನಿನಲ್ಲಿ ಅವಕಾಶವಿಲ್ಲದಿದ್ದರೂ, ಹಿಂದಿನ ಕಾಲದ 'ಸತಿ'ಯರಿಗೆ ಜನ ಬಹಳ ಎತ್ತರದ ಸ್ಥಾನ ಕೊಡುತ್ತಾರೆ ಮತ್ತು ಅವರು ಎಲ್ಲ ಮಂಗಳ ಸಂದರ್ಭಗಳಲ್ಲಿ ಪೂಜ್ಯ ಮಾತೆಯರೆಂದು ಉಲ್ಲೇಖಗೊಳ್ಳುತ್ತಾರೆ. ರಾಜಾಸ್ಥಾನದ ಪ್ರತಿಯೊಂದು ಕುಟುಂಬದ ಪಾಲಿಗೂ ಸ್ಮರಿಸಲು ಮತ್ತು ಪ್ರಾರ್ಥಿಸಲು ಸ್ವಂತ 'ಸತಿ'ಯೊಬ್ಬಳಿರುವುದರಿಂದ, ಅಸಂಖ್ಯ ಸತಿಯರ ಲೆಕ್ಕ ಕೊಡಲು ಸಾಧ್ಯವಿಲ್ಲ; ಆದರೆ ಝುಂಝುಂನುದಲ್ಲಿನ ರಾಣಿ – ಸತಿಯ ದೇವಸ್ಥಾನ, ಸ್ಥಳೀಯ ದೇವತೆಗಳಾಗಿ ಸತಿಯರ ಮಹತ್ವವನ್ನು ವಿವರಿಸಲು ಸಾಕು. ಈ ದೇವಾಲಯದ ಟ್ರಸ್ಟ್‌ಗೆ ಕೋಟ್ಯಂತರ ರೂಪಾಯಿಗಳ ಆದಾಯವಿದೆ; ಈ ಸತೀ ದೇವಾಲಯದಲ್ಲಿ ನಡೆಯುವ ವಾರ್ಷಿಕ ಜಾತ್ರೆ ರಾಜ್ಯದ ಅತ್ಯಂತ ದೊಡ್ಡ ಮಾನವ ಮೇಳಗಳಲ್ಲೊಂದು. ಅಗರ್ವಾಲ್ ವೈಶ್ಯ ಸಮಾಜದ ಜಲನ್ ಮತ್ತು ಜುಲ್ಕನ್ ಪಂಥಗಳು ವಿಶೇಷತಃ ರಾಣಿ–ಸತಿಗೆ ಮೀಸಲಾಗಿವೆ.

ಈ ಸ್ತ್ರೀ ಹುತಾತ್ಮರಿಗೆ ದೈವಿಕತೆಯನ್ನು ಆರೋಪಿಸುವುದು ರಾಜಾಸ್ಥಾನಿ ಜನಪದ – ಸಂಸ್ಕೃತಿಯ ಒಂದು ಮುಖ್ಯಾಂಶ. ಭಾರತೀಯ ಸಂಸ್ಕೃತಿಯ ತಿರುಳಿಗೆ – ಸ್ತ್ರೀ ಗೌರವ – ಇದು ನಿಕಟವಾಗಿ ಹೊಂದಿಕೊಂಡಿದೆ.

ಈ ಪರಂಪರೆ ಶೀಲ ಮತ್ತು ಅತ್ಯುನ್ನತ ನೈತಿಕ ಗುಣದ ಮಹಿಳೆಯರಿಗಷ್ಟೆ ಸೀಮಿತ ವಾಗಿಲ್ಲ. ತಮ್ಮ ಶೌರ್ಯ, ಶೀಲ ಕಾರ್ಯಗಳಿಂದ ವೀರರಾದ ಮಹಾಪುರುಷರಿಗೂ ವಿಸ್ತರಣಗೊಳ್ಳುತ್ತದೆ. ಅವರ ಬಹುಪಾಲು ದಿವ್ಯ ಮತ್ತು ಪವಾಡ ಸದೃಶ ಸಾಧನೆ ಗಳಿಂದ ಪ್ರಭಾವಿತರಾದ ಜನ ಅವರನ್ನು ದೇವತೆಗಳನ್ನಾಗಿ ಪೂಜಿಸತೊಡಗಿದರು – ರಾಮ, ಕೃಷ್ಣರನ್ನು ವಿಷ್ಣುವಿನ ಅವತಾರಗಳೆಂದು ಒಪ್ಪಿಕೊಂಡಂತೆ. ಮಾಸ್ತಿಕಲ್ಲು ಗಳಂತೆ ವೀರಗಲ್ಲುಗಳೂ ರಾಜಾಸ್ಥಾನದ ಪ್ರತಿಯೊಂದು ಗ್ರಾಮದಲ್ಲಿ ಕಾಣಸಿಗುತ್ತವೆ; ಅವುಗಳ ಮುಂದೆ ಸಾಮಾನ್ಯ ಜನ ಗೌರವದಿಂದ ತಲೆಬಾಗುತ್ತಾರೆ. ಮಕದ್‌ಜಿ ಇಂಥ ಹೆಸರುಗಳಲ್ಲೊಂದು; ಅವನು, ದೇವ್‌ಜಿ ಸಹಿತ, ದೇವರ ಅವತಾರಗಳಲ್ಲೊಂದೆಂದು ಗುಜರರು ಭಾವಿಸುತ್ತಾರೆ. ಇಬ್ಬರಿಗೂ ಮೀಸಲಾದ ಅನೇಕ ದೇವಾಲಯಗಳಿವೆ. ಮತ್ತೊಬ್ಬ ವೀರ ಪಬುಜಿ ರಾಠೋರ್ ಲಕ್ಷ್ಮಣನ ಅವತಾರವೆಂದು ಪರಿಗಣಿತ ವಾಗಿದ್ದಾನೆ; ಮಾವಜಿಯನ್ನು ಬಗರ್ ಪ್ರಾಂತದಲ್ಲಿ (ಡುಂಗರ್‌ಪುರ – ಬನ್‌ಸ್ವಾರ) ವಿಷ್ಣುವಿನ ಕಲ್ಕಿ ಅವತಾರವೆಂದು ಅರ್ಚಿಸಲಾಗುತ್ತದೆ. ಹಾಗೆಯೆ, ರಾಮದೇವ್ ತನ್ವರ್ ಕೃಷ್ಣನ ಅವತಾರ; ಗೊಗಜಿ ಚೌಹಾನ್ ಕೂಡ ಅವತಾರ. ಈ ವೀರಪೂಜೆ ರಾಜಾಸ್ಥಾನದ ಒಂದು ವಿಶಿಷ್ಟತೆ.

ಪ್ರಾಚೀನ ಯಕ್ಷಪೂಜೆ ರಾಜಾಸ್ಥಾನದ ಗ್ರಾಮಗಳಲ್ಲಿ ಈಗಲೂ ಖೇತರ್‌ಪಾಲ್

ಹಾಗೂ ಭೋಮಿಯ ಪೂಜೆಯು ರೂಪದಲ್ಲಿ ಪ್ರಚಲಿತವಿದೆಯೆಂದು ಮನೋಹರ ಶರ್ಮ ನಂಬುತ್ತಾರೆ.[1] ಅವರ ಪ್ರಕಾರ ಗ್ರಾಮದ ಗಡಿಯನ್ನು ಭೋಮಿಯ ರಕ್ಷಿಸುತ್ತಾನೆ; ಖೇತರ್‌ಪಾಲ್‌ನ *ಖೆಜ್ರಿ* ವೃಕ್ಷ ಗ್ರಾಮದಲ್ಲಿದೆ. ಬಾವಿಯನ್ನೂ ಊರ ಹೊರಗೆ ಆದರಿಂದ ನೀರು ಸೇದುವವರನ್ನೂ ರಕ್ಷಿಸುವ ಮಹಾವೀರನಿಗೆ *ರೋಟ್* ಮತ್ತು *ಚೂರ್ಮ*ವನ್ನರ್ಪಿಸುವುದು ಯಕ್ಷಪೂಜೆ ಆಧುನಿಕ ರೂಪವಲ್ಲದೆ ಬೇರೆಯಲ್ಲ.

ಯಕ್ಷರು ನಿರ್ದಿಷ್ಟವಾದ ಮರವೊಂದರಲ್ಲಿ ವಾಸ ಮಾಡುತ್ತಾರೆಂಬ ಭಾವನೆ ಪ್ರಾಚೀನ ಕಾಲದಲ್ಲಿದ್ದುದರಿಂದ, ವೃಕ್ಷಪೂಜೆಯು ಪರಂಪರೆಯೊಂದಿದ್ದು, ಈ ಹೊತ್ತಿಗೂ ಅದು ಕಂಡುಬರುತ್ತವೆ. ದಸರಾದಂದು ರಜಪೂತರು *ಶರ್ನಿ* ಅಥವಾ *ಖೆಜ್ರಿ* ಮರವನ್ನು ಪೂಜಿಸುತ್ತಾರೆ. ಅರಳಿಮರವನ್ನು ಧಾರ್ಮಿಕ ಸ್ತ್ರೀಯರು ಪ್ರತಿದಿನವೂ ಪೂಜಿಸುತ್ತಾರೆ; ಕಾರ್ತಿಕಮಾಸದಲ್ಲಿ ಮತ್ತು ಸೋಮವತಿ ಅಮಾವಾಸ್ಯೆಯಂದು ಅದಕ್ಕೆ ವ್ಯಾಪಕ ಪೂಜೆ ಸಲ್ಲುತ್ತದೆ. ಜ್ಯೇಷ್ಠಮಾಸದ ಅಮಾವಾಸ್ಯೆಯಂದು ಆಲದಮರವನ್ನು ಪೂಜಿಸಲಾಗುತ್ತದೆ; ಬಾಳೆಗಿಡ ಪ್ರತಿದಿವಸ ಒಂದು ಸಲ ಪೂಜೆಗೊಳ್ಳುತ್ತದೆ.

ಹಿಂದೆಯೆ ಹೇಳಿದಂತೆ, 'ಪೀರ್'ಗಳು ರಾಜಾಸ್ಥಾನದ ಸ್ಥಳೀಯ ದೇವತೆಗಳಲ್ಲಿ ಬಹುಮುಖ್ಯ ಸ್ಥಾನವನ್ನು ಪಡೆದಿದ್ದಾರೆ. ಅವರು ಹಿಂದೂ, ಮುಸ್ಲಿಂ ಎರಡೂ ವರ್ಗಗಳಿಗೆ ಸೇರುತ್ತಾರೆ ಮತ್ತು ಎರಡರಿಂದಲೂ ಪೂಜೆಗೊಳ್ಳುತ್ತಾರೆ. ಜನಪ್ರಿಯ ಹೇಳಿಕೆಯೊಂದಿದ್ದು, ಅದನ್ನು ಹೀಗೆ ಅನುವಾದಿಸಬಹುದು:

ಉಂಟು ಪ್ರತಿಯೊಂದು ಹಳ್ಳಿಗೂ ಅದರದೇ *ಖೆಜ್ರಿ* ಮರ,
ಹಾಗೆಯೆ ಪ್ರತಿಯೊಂದು ಹಳ್ಳಿಗೂ ಅದರ *ಗುಗ* (ಪೀರ್).

ಹಲವರು ಪೀರ್‌ಗಳಲ್ಲಿ, ಅತ್ಯುನ್ನತವಾದ ಐವರು ಸ್ಥಳೀಯ ದೇವತೆಗಳು ಮಾತ್ರವಲ್ಲ, ರಾಜಾಸ್ಥಾನದ ಒಳಗೂ ಹೊರಗೂ ಮಾನ್ಯರಾಗಿದ್ದಾರೆ – ಅವರು; ಪಬು, ರಾಮದೇವ್, ಮೆಹ, ಹರ್ಭು ಮತ್ತು ಗುಗ.

ಪಬುಜಿಯೊಬ್ಬ ರಾಠೋಡ್ ವೀರ; ಅವನು ಗುಗಜಿ ಚೌಹಾನನ ಸಮಕಾಲೀನನೆಂದು ನಂಬಲಾಗಿದೆ. ಅವನ ಪ್ರಮುಖ ದೇವಾಲಯ ಜೋಧ್‌ಪುರ ಜಿಲ್ಲೆಯ ಪಲೋದಿಯ ಹತ್ತಿರ ಕೋಲ್‌ದಲ್ಲಿದೆ. ಅವನ ಬದುಕು ಪವಾಡಗಳ ವಸ್ತುವಾಗಿದ್ದು, ಅವನ್ನು ರಾಜಾಸ್ಥಾನದ ಚಾರಣರಾದ ಭೋಪರು ಹಾಡುತ್ತಾರೆ. ಕತೆ ಹೀಗಿದೆ: 'ಕಲಂಗಿ' ಎಂಬ ಹೆಣ್ಣು ಕುದುರೆಯೊಂದನ್ನು ದೇವಲ್ದೆ ಎಂಬ ಚಾರಣ ಮಹಿಳೆಯಿಂದ ಪಬುಜಿ ಪಡೆದ; ತನ್ನ ಪ್ರಾಣ ತೆತ್ತಾದರೂ ಅವಳ ಹಸುಗಳನ್ನು ಅವನು ರಕ್ಷಿಸಬೇಕೆಂಬುದು ಷರತ್ತು. ಅದನ್ನು ಪೂರೈಸಬೇಕಾದ ಕಾಲ ಬಂದಾಗ, ಪಬುಜಿ ವಿವಾಹಾಗ್ನಿಗೆ ಪ್ರದಕ್ಷಿಣೆ ಬರುತ್ತಿದ್ದ. ಹಸುಗಳನ್ನು ಜಿಂದ್ ರಾಜ್ ಖಿಂಚಿಯಿಂದ ಕಾಪಾಡುವುದಕ್ಕಾಗಿ ಅವನು ವಿಧಿಯನ್ನು ಕೂಡಲೆ ತ್ಯಜಿಸಿದ. ನಡೆದ ಘೋರ ಯುದ್ಧದಲ್ಲಿ ಪಬುಜಿ ತನ್ನೆಲ್ಲ ಕುಟುಂಬವನ್ನು ಕಳೆದುಕೊಂಡ; ಅವನ ಅಣ್ಣನ

1 ಶರ್ಮ ಮನೋಹರ್ 'ರಾಜಾಸ್ಥಾನ್ ಲೋಕ್-ಸಂಸ್ಕೃತಿ ಕಿ ರೂಪರೇಖಾ' ವರ್ದ, ಬ್ಲಸ್ಸೆಯ್, II-III

ಹೆಂಡತಿ ಸತಿಹೋಗುವುದಕ್ಕೆ ಮುನ್ನ ಏಕೈಕ ಉಳಿಕೆ ವ್ಯಕ್ತಿಯ ಉತ್ಪತ್ತಿಗಾಗಿ ತನ್ನ ಸ್ವಂತ ಗರ್ಭವನ್ನು ಕತ್ತರಿಸಿದಳು. ಈ ಹುಡುಗ, ನಂದಿಯೊ, ಮುಂದೆ ತನ್ನ ಪೂರ್ವಜರ ಮರಣದ ಸೇಡನ್ನು ತೀರಿಸಿದ.

ರಾಮದೇವ್‌ಜಿ ಅಥವಾ ಬಾಬೊ ರಾಮ್‌ದೇವ್ ರಾಮ್‌ಷಹ ಪೀರ್ ಆಗಿ ಕೂಡ ಪೂಜೆಗೊಳ್ಳುತ್ತಾನೆ. ರಾಮದೇವ್‌ಜಿಯ ಪ್ರಮುಖ ದೇವಾಲಯ ಜೈಸಲ್ಮೇರ್ ಜಿಲ್ಲೆಯ ಪೊಖರಾನ್ ಹತ್ತಿರ ರಾಮದೇವ್‌ರದಲ್ಲಿದೆ; ಆದರೆ ರಾಜಾಸ್ಥಾನದ ಹಳ್ಳಿಗಳಲ್ಲಿ ಈ 'ಪೀರ್' ಗೆ ಮೀಸಲಾದ ದೇವಾಲಯಗಳೆಲ್ಲ ರಾಮ್‌ದೇವ್ರಗಳೆಂದು ಹೆಸರಾಗಿವೆ. ಅವನು ಸಂವತ್ 1575ರಲ್ಲಿ ಜೀವಂತವಾಗಿ ಸಮಾಧಿಗೊಂಡನೆಂದು ಹೇಳಲಾಗಿದೆ. ಅವನ ಗುರು ಬಾಲನಾಥ್; ಅವನು ಹರ್ಭುಜಿಯ ಗುರು ಕೂಡ. ರಾವ್‌ದಿಯೊಜಿಯ ಜೀವನ ಪವಾಡಗಳಿಂದ ತುಂಬಿಹೋಗಿದೆ. ಅವನ ಬೋಧನೆಗಳ ಪುಸ್ತಕ– **ವಾಣಿ** –ಅವನೊಬ್ಬ ಮಹಾಸಂತನಾಗಿದ್ದನೆಂಬುದಕ್ಕೆ ಸಾಕ್ಷಿಯಾಗಿದೆ. ಅವನ ಅನುಯಾಯಿಗಳು ರಾಜಾಸ್ಥಾನದಲ್ಲಿ ಮಾತ್ರವಲ್ಲ, ಗುಜರಾತಿನಲ್ಲೂ ಬಹುಸಂಖ್ಯೆಯಲ್ಲಿದ್ದಾರೆ.

ರಜಪೂತನಾದ ಮೆಹಜಿ ಮಂಗಲಿಯ ಎಂದು ಪ್ರಸಿದ್ಧನಾಗಿದ್ದಾನೆ; ಏಕೆಂದರೆ, ಅವನು ಮಂಗಲಿಯ ರಜಪೂತನಾಗಿದ್ದ ತನ್ನ ಸೋದರಮಾವನ ಮನೆಯಲ್ಲಿ ಬೆಳೆದ. ತನ್ನ ವೈರಿಗಳನ್ನು ಅವನು ತಡೆಗಟ್ಟಿದರೂ, ಅಂತಿಮವಾಗಿ ಜೈಸಲ್ಮೇರ್‌ದ ರಾವ್ ರಾಮಂಗ್‌ದೇವ್‌ನೊಡನೆ ನಡೆದ ಯುದ್ಧವೊಂದರಲ್ಲಿ ಹತನಾದ.

ಮೆಹಜಿಯ ಮಗ ಹರ್ಭುಜಿ. ಅವನು ಶಸ್ತ್ರ ಹಿಡಿಯಲು ನಿರಾಕರಿಸಿ, ಬಾಲನಾಥನ ಶಿಷ್ಯನಾದ. ಅವನು ಕೂಡ ರಾವ್‌ದೇವ್‌ಜಿಯ ಮರಣದ ಎಂಟನೆಯ ದಿವಸ ರಾಮ್‌ದೇವ್‌ರದ ಅದೇ ಜಾಗದಲ್ಲಿ ಜೀವಂತಸಮಾಧಿ ಹೊಂದಿದ.

ಐದನೆಯ ಮಹಾ 'ಪೀರ್' ಗುಗಜಿ ಬಿಕನೀರ್‌ನಲ್ಲಿ ದಾದ್ರೇವದ ದೊರೆಯಾಗಿದ್ದನೆಂದು ಹೇಳಲಾಗಿದೆ. ಅವನಲ್ಲಿ ಅದ್ಭುತ ಯೋಧಗುಣಗಳಿದ್ದುವು; ಅವನು ತನ್ನ ಇಬ್ಬರು ಸಂಬಂಧಿಗಳೊಡನೆ – ಸರ್ಜನ್ ಮತ್ತು ಅರ್ಜನ್ – ಪಡೆಯೊಂದರ ಮುಖ್ಯಸ್ಥನಾಗಿದ್ದ. ಆದರೂ ಅವರು ದೆಹಲಿ ದರ್ಬಾರಿನಿಂದ ಸಶಸ್ತ್ರ ಸಹಾಯ ಪಡೆದು, ಗುಗಜಿಗೆ ಸೇರಿದ ತುರುಮಂದೆಯನ್ನು ಯಶಸ್ವಿಯಾಗಿ ಸುತ್ತುವರಿದರು. ಆಮೇಲೆ ನಡೆದ ಯುದ್ಧದಲ್ಲಿ ಗುಗಜಿ ತನ್ನೆಲ್ಲ ಹಸುಗಳನ್ನು ರಕ್ಷಿಸಿ, ಸರ್ಜನ್ ಮತ್ತು ಅರ್ಜುನ್‌ರನ್ನು ಕೊಂದುಹಾಕಿದ. ಅವರ ಸಾವು ಗುಗಜಿಯ ತಾಯನ್ನು ಕೆರಳಿಸಿತು; ಎಷ್ಟರಮಟ್ಟಿಗೆಂದರೆ, ಮತ್ತೆ ಅವನ ಮುಖ ನೋಡುವುದಿಲ್ಲವೆಂದು ಅವಳು ಅವನಿಗೆ ಹೇಳಿಬಿಟ್ಟಳು. ಸತ್ತವರು ಅವಳ ಸೋದರಿಯ ಮಕ್ಕಳು. ಗುಗಜಿ ತಾಯ ಮಾತಿಗೆ ಮಣಿದು, ದಾದ್ರೇವನನ್ನು ತೊರೆದು, ಸೊಹರ್ ಬಳಿ ಮೇದಿಯಲ್ಲಿ ನೆಲಸಿದ. ಅವನೊಂದು ಆಧ್ಯಾತ್ಮಿಕ ಸಮಾಧಿಯಲ್ಲಿದ್ದಾಗ, ಗುರು ಗೋರಖ್‌ನಾಥ್ ಅವನ ಮುಂದೆ ಪ್ರತ್ಯಕ್ಷನಾಗಿ, ಅವನನ್ನು ಶಿಷ್ಯನನ್ನಾಗಿ ಸ್ವೀಕರಿಸಿದ. ಗುಗಾಜಿ ಗೊಗಾಮೇದಿಯಲ್ಲಿ ಜೀವಂತ ಸಮಾಧಿಯ ಮೂಲಕ ಬದುಕನ್ನು ಕೊನೆಗಾಣಿಸಿದ. ಅಲ್ಲಿ ಅವನ ಗೌರವಾರ್ಥ ವಾರ್ಷಿಕ ಜಾತ್ರೆಯೊಂದು ನಡೆಯುತ್ತದೆ.

ಗುಗಾಜಿಯ ಪೂಜಕರನ್ನು ಹಾವು ಕಚ್ಚುವುದಿಲ್ಲವೆಂಬುದು ಜನಪ್ರಿಯ ನಂಬಿಕೆ. ಅವನು ಸರ್ಪಗಳ ದೈವವೆಂದು ಅಂಗೀಕರಿಸಲ್ಪಟ್ಟಿದ್ದಾನೆ; ರಾಜಾಸ್ಥಾನಿ ಮನೆಗಳಲ್ಲಿ ಆಗಾಗ ಪೂಜೆಗೊಳ್ಳುವ ಸಂಕೇತವೆಂದರೆ, ಗೋಡೆಯ ಮೇಲೆ ಚಿತ್ರಿತವಾದ ಒಂದು ಸರ್ಪ. ಕುದುರೆಸವಾರಿ ಮಾಡುವ ವೀರನಾಗಿಯೂ ಪೂಜೆಗೊಳ್ಳುತ್ತಾನೆ, ಗುಗಾಜಿ.

'ಪೀರ್' ಅಂತಸ್ತು ಪಡೆಯದಿದ್ದರೂ, ತೇಜಜಿ ರಾಜಾಸ್ಥಾನದ ಇನ್ನೊಬ್ಬ ಸ್ಥಳೀಯ ದೇವತೆ; ಅವನನ್ನು ಸರ್ಪಗಳ ವಿರುದ್ಧ ರಕ್ಷಣೆಗಾಗಿ ಭಾದ್ರಪದ ಶುಕ್ಲಪಕ್ಷದ ಹತ್ತನೆಯ ದಿವಸ ಅರ್ಚಿಸಲಾಗುತ್ತದೆ. ಆ ದಿನ ತೇಜ–ದಶಮಿ ಎಂದು ಹೆಸರಾಗಿದೆ. ಜನಪ್ರಿಯ ನಂಬಿಕೆಯ ಪ್ರಕಾರ, ಈ ಐತಿಹ್ಯ ವ್ಯಕ್ತಿ ನಾಗೌರ್ ಬಳಿಯ ಹಳ್ಳಿಯೊಂದರಲ್ಲಿ ಹುಟ್ಟಿ, ಕಿಷನ್‌ಗಢದ ಪನೇರಳನ್ನು ಮದುವೆಯಾದ ಒಬ್ಬ ಜಾಟ್. ಅವನು ತನ್ನ ಪತ್ನಿಯ ಸಂಗಡ ಮಾವನ ಮನೆಗೆ ಹೋಗಿದ್ದಾಗ, ಡಕಾಯಿತರು ಬಂದು, ಅವನ ಹಸುಗಳನ್ನು ಹೊಡೆದುಕೊಂಡು ಹೋದರು. ತೇಜಜಿ ಡಕಾಯಿತರ ಬೆನ್ನಟ್ಟಿ ಹೋದ; ಆದರೆ ದಾರಿಯಲ್ಲಿ ಹಾವೊಂದು ಅವನನ್ನು ತಡೆಗಟ್ಟಿ, ಕಚ್ಚುವುದರಲ್ಲಿತ್ತು. ಹಸುಗಳನ್ನು ಮರಳಿ ಪಡೆಯುವ ಧ್ಯೇಯವನ್ನು ಸಾಧಿಸಲು ಅವಕಾಶ ಕೊಡಬೇಕೆಂದು ತೇಜ ಹಾವಿನೊಡನೆ ವಾದಿಸಿದ, ಮತ್ತು ಹಿಂದಿರುಗುವಾಗ ತನ್ನನ್ನು ಅರ್ಪಿಸಿಕೊಳ್ಳುವುದಾಗಿ ಮಾತುಕೊಟ್ಟ. ಹಾವು ಒಪ್ಪಿತು. ತೇಜ ಮರಳಿದಾಗ, ಅವನ ಮೈ ಗಾಯಗಳಿಂದ ರಕ್ತಸಿಕ್ತವಾಗಿತ್ತು. ಹಾವು ಗಾಯಗಳ ಮೇಲೆ ಕಡಿಯಲು ನಿರಾಕರಿಸಿತು. ಆದರೆ ತೇಜ ತನ್ನ ಮಾತನ್ನುಳಿಸಿಕೊಳ್ಳಬೇಕಿತ್ತು. ಆದ್ದರಿಂದ ಅವನು ಗಾಯವಿಲ್ಲದ ತನ್ನ ನಾಲಿಗೆಯನ್ನು ಹೊರಚಾಚಿದ; ಹಾವು ಅದನ್ನು ಕಚ್ಚಿತು. ಆದರೆ ಗುಣಸಂಪನ್ನನಾದ ತೇಜನ ಬಗೆಗೆ ಹಾವಿಗೆ ಎಷ್ಟು ಮರುಕವುಂಟಾಯಿತೆಂದರೆ, ಅವನ ಹೆಸರಿನಲ್ಲಿ ತಾಯಿತ ಕಟ್ಟಿಕೊಂಡವರು ಹಾವಿನ ಕಡಿತದಿಂದ ಸಾಯುವುದಿಲ್ಲ ಎಂಬ ವರದಾನದಿಂದ ಅವನನ್ನು ಹರಸಿತು.

ರಾಜಾಸ್ಥಾನದ ಅತ್ಯಂತ ದೊಡ್ಡ ಜಾತ್ರೆಗಳಲ್ಲಿ ಒಂದಾದ ಪ್ರಸಿದ್ಧ ಪರ್ಬತ್‌ಸರ್ ಜಾತ್ರೆಯ ಮೂಲ ತೇಜಜಿ. ಹಾವು ಕಚ್ಚಿದ ಮನುಷ್ಯನ ಮುಂಗೈ ಸುತ್ತ ಅಥವಾ ಮನುಷ್ಯನ ಇಲ್ಲವೆ ದನದ ಕಾಲಿನ ಸುತ್ತ ತೇಜಜಿಯ ಹೆಸರಿನಲ್ಲಿ ಕಟ್ಟಿದ ದಾರ ಸಾವಿನಿಂದ ಪಾರು ಮಾಡುತ್ತದೆಂಬುದು ಸಾಮಾನ್ಯ ನಂಬಿಕೆ. ಹಾವು ಕಡಿತದ ವಿರುದ್ಧ ಈ ರಕ್ಷಣೆಯಿಂದಾಗಿ, ತೇಜಜಿ ಪ್ರಾಯಃ ರಾಜಾಸ್ಥಾನದ ಅತ್ಯಂತ ಜನಪ್ರಿಯ ಸ್ಥಳೀಯ ದೇವತೆ. ಪ್ರತಿಯೊಂದು ಹಳ್ಳಿಯಲ್ಲೂ ಒಂದು 'ದೇವಲ್' ಸಣ್ಣ ಗುಡಿ – ಅಥವಾ ತೇಜಜಿ – ಕಾ – ಚಬುತಾರ ಎಂದು ಹೆಸರಾದ ಸರಳ ವೇದಿಕೆಯಿರುತ್ತದೆ. ಹಾವು ಕಡಿತದ ಪ್ರಕರಣಗಳನ್ನು ತೇಜಜಿಯ ತಾಯಿತಕ್ಕಾಗಿ ಅಲ್ಲಿಗೆ ತರಲಾಗುತ್ತದೆ.

ಜನಪದ ದೇವತೆಗಳ ಪೂಜೆ ಜನಸಾಮಾನ್ಯರ ನಂಬಿಕೆಗಳನ್ನು ಆಧರಿಸಿವೆ; ಜನತೆಯಾದರೋ ತಮ್ಮ ಅಪ್ರಾಕೃತ ಅಂಶಕ್ಕಾಗಿ ವಾಚಿಕ ಪರಂಪರೆ ಮತ್ತು ಪ್ರಸಂಗಗಳನ್ನು ಅವಲಂಬಿಸಿದೆ. ಈ ಐತಿಹ್ಯ ಮತ್ತು ಕಿರುಗತೆಗಳು ಜನಪದರ ಮನಸ್ಸಿನ ಮೇಲೆ ಮೋಡಿ ಬೀರಿ, ನಂಬಿಕೆ ಮತ್ತು ಪೂಜೆಗೊಳ್ಳುತ್ತವೆ.

ಆದರೂ, ಜನಪದ ಮನಸ್ಸಿನ ಮೇಲೆ ಪ್ರಭಾವ ಮುದ್ರೆಯೊತ್ತುವುದು ಅಪ್ರಾಕೃತ

ಅಂಶವೊಂದೆ ಅಲ್ಲ. ನಾಯಕನ ಸ್ವಭಾವ, ಅವನ ಸತ್ಯನಿಷ್ಠೆ, ಮಾತನ್ನುಳಿಸಿ ಕೊಳ್ಳುವುದರಲ್ಲಿ ದೃಢತೆ ಮತ್ತು ಇತರ ಗುಣಗಳು ಗೌರವವನ್ನು ಪ್ರಚೋದಿಸಿ, ಅವನಲ್ಲಿ ಶ್ರದ್ಧೆಯನ್ನು ಬಲಪಡಿಸುತ್ತವೆ.

ಮನೋಹರ ಶರ್ಮರ ಪ್ರಕಾರ ರಾಜಾಸ್ಥಾನದಲ್ಲಿ ಪಂಚಪೀರರ ಪೂಜೆ, ಪ್ರಾಚೀನ ಯಕ್ಷಪೂಜೆ, ನಾಗಪೂಜೆಗಳ ಸಮನ್ವಯ. ಅದರ ಮೇಲೆ ಇಸ್ಲಾಮಿಕ್ ಸಂಸ್ಕೃತಿಯ ಪ್ರಭಾವವಿದ್ದು, ನಾಥಪಂಥದ ಅಂಶಗಳನ್ನೂ ಅದು ಒಳಗೊಂಡಿದೆ. ವೀರರು ಮತ್ತು ಸಂತ ದೇವತೆಗಳು 'ದೇವಲ್'ಗಳಲ್ಲಿ ಮಾತ್ರವಲ್ಲ, ಸರಳ ಮತ್ತು ಧಾರ್ಮಿಕ ಜನತೆಯ ಹೃದಯ, ಮನಸ್ಸುಗಳಲ್ಲಿ ಗರ್ಭಿತವಾಗಿವೆ.

## ಮಾಟ ಮತ್ತು ಮದ್ದುಗಳು

ಸಾಮಾನ್ಯವಾಗಿ, ರಾಜಾಸ್ಥಾನದ ಜನ ಪವಾಡಗಳನ್ನು ನಂಬುವಷ್ಟು ಮಾಟ – ಮಂತ್ರಗಳನ್ನು ನಂಬುವುದಿಲ್ಲ. ಆದರೂ ರಾಜಾಸ್ಥಾನಿ ಜಾನಪದ, ಯಾವುದೇ ಇತರ ಜಾನಪದದಂತೆ, ಅತಿಮಾನುಷ ಅಂಶಗಳಿಂದ ತುಂಬಿದೆ. ಪವಾಡಗಳನ್ನು ಮಾಡುವ ಅತಿಮಾನುಷ ಪಾತ್ರಗಳೂ ಅತಿಮಾನುಷ ಶಕ್ತಿಗಳೂ ಉಂಟು. ಹಾರುವ ಕುದುರೆ ಗಳು, ಮಾನವಭಾಷೆಯಲ್ಲಿ ಮತ್ತು ಮಾನವಧ್ವನಿಯಲ್ಲಿ ಮಾತನಾಡುವ ಹಾಗೂ ಮಾನವ ಸ್ತ್ರೀಪುರುಷರಿಗೆ ದೂತರಾಗಿ ನೆರವಾಗುವ ಗಿಳಿಗಳು ಮತ್ತು ಮೈನಾಗಳು, ಜೀವಂತ ವ್ಯಕ್ತಿಗಳಂತೆ ವರ್ತಿಸುವ ನದಿಗಳು, ಸಸ್ಯಗಳು, ಯಕ್ಷಕಿನ್ನರರು, ಭೂತಗಳು, ಮೃಗಗಳು, ಹಾವುಗಳು – ಇವುಗಳನ್ನು ಹೇಳುತ್ತವೆ, ಜನಪದ ಕಥೆಗಳು.

ಮಾನುಷ ಮತ್ತು ಅಮಾನುಷಗಳ ನಡುವೆ ಭೇದ ಬಗೆಯದಿರುವುದು, ಹಾಗೂ ತಾನು ಅನುಸರಿಸಿ ಅನುಭವಿಸುವ ಎಲ್ಲವರಲ್ಲೂ ಜೀವಾತ್ಮಗಳ ಸ್ಪಂದನವನ್ನು ಗುರುತಿಸುವುದು ಜನಪದ ಮನಸ್ಸಿಗೆ ಸಹಜ. ವಾಸ್ತವ ಮತ್ತು ಭ್ರಮೆಯ ನಡುವೆ ಯಾವ ವ್ಯತ್ಯಾಸವನ್ನು ಕಲ್ಪಿಸುವುದಿಲ್ಲ, ಜನಪದ ಚಿತ್ತ.

ರಾಜಾಸ್ಥಾನಿ ಜಾನಪದದಲ್ಲಿ ಅಮಾನುಷ ಮತ್ತು ಅತಿಮಾನುಷ ಅಂಶಗಳು ಎರಡು ಬಗೆ: ದಿವ್ಯಶಕ್ತಿಗಳು ಮತ್ತು ಪ್ರಾಣಿಗಳು ಅಥವಾ ಪಕ್ಷಿಗಳು. ದಿವ್ಯಶಕ್ತಿಗಳಲ್ಲಿ ಇವರು ಸೇರುತ್ತಾರೆ: ಶಂಕರ ಮತ್ತು ಪಾರ್ವತಿ, ಗುರು ಗೋರಖ್‌ನಾಥ್, ಭೈರವ, ಹನುಮಾನ್, ಮಾತಾಜಿ ಅಥವಾ ದೇವಿ, ಇಂದ್ರ, ಸ್ವರ್ಗದ ಅಪ್ಸರೆಯರು, ನಾಸದ್, ಮತ್ಸ್ಯೇಂದ್ರನಾಥ, ಮತ್ತು ವಿಷ್ಣು. ಎರಡನೆಯ ವರ್ಗದಲ್ಲಿ ಇವು ಬರುತ್ತವೆ: ಕುದುರೆ, ಗಿಳಿ, ಮೈನಾ, ಕಾಗೆ, ಹಂಸ, ಆಮೆ, ಹಾವು, ಹದ್ದು, ಎತ್ತು ಮತ್ತು *ಕುರ್ಜಾ* ಹಕ್ಕಿ. ಮಾನವನ ಸತ್ಯ ಮತ್ತು ಆದರ್ಶಗಳ ಅನ್ವೇಷಣೆಯಲ್ಲಿ, ದಿವ್ಯ ಹಾಗೂ ಪವಾಡಸದೃಶ ಆದೇಶಗಳ ಸಂದರ್ಭಗಳಲ್ಲಿ ಅವನಿಗೆ ಸಹಾಯ ಮಾಡಲು ಇವುಗಳನ್ನು ಕೋರಲಾಗುತ್ತದೆ.

ಪ್ರಭುಜಿ ರಾಠೋಡನ ಕತೆಯಲ್ಲಿ, ಅವನ ಹೆಣ್ಣು ಕುದುರೆ ಕಲಂಗಿ ಶಕ್ತಿಯ ಅವತಾರವಾಗಿ ತೋರುತ್ತದೆ, ಮತ್ತು ತನ್ನ ಸವಾರನಿಗಾಗಿ ಪವಾಡದಂಥ ಸಾಧನೆಗಳ ನ್ನೆಸಗುತ್ತದೆ. ತೇಜಜಿಯ ನೀಲಿ ಕುದುರೆ ಮಾನವಜೀವಿಯಂತೆ ಮಾತನಾಡುತ್ತವೆ

ಮತ್ತು ಅವನ ಸಾವಿನ ಸುದ್ದಿಯನ್ನು ಅವನ ತಾಯಿಗೆ ಅಳುತ್ತ ಮುಟ್ಟಿಸುತ್ತದೆ.

ನಿಹಲ್ದೆ – ಸುಲ್ತಾನ್ ಪ್ರಾಯಶಃ ರಾಜಾಸ್ಥಾನದ ಅತ್ಯಂತ ಜನಪ್ರಿಯ ಜನಪದಕಥೆ; ಅದರಲ್ಲಿ ಮಾಟ, ಕಿನ್ನರರು, ರೂಪಪರಿವರ್ತನೆ, ದೇಹಾಂತರ ಮತ್ತು ಹಾರುವ ಮಾನವಜೀವಿಗಳಂಥ ಅನೇಕ ಅತಿಮಾನುಷ ಅಂಶಗಳಿವೆ. ನಾಯಕನಾದ ಸುಲ್ತಾನ ಬುದ್ಧಿ, ಹೃದಯಗಳ ಮಹಾಗುಣಗಳನ್ನುಳ್ಳ ಆದರ್ಶ ಯೋಧ; ಆದರ್ಶ ರಾಜ ಮತ್ತು ಆದರ್ಶ ಪತಿ. ಅವನು ಜನರಲ್ಲಿ ಧೈರ್ಯ ಮತ್ತಿತರ ಪುರುಷೋಚಿತ ಗುಣ ಗಳನ್ನು ಪ್ರೇರಿಸುವ ವೀರ. ಅವನ ಹೆಂಡತಿ ನಿಹಲ್ದೆ ಸುಶೀಲೆ; ಸೀತೆಯಂತೆ ದೃಢತೆ, ಸಹನೆಯನ್ನುಳ್ಳವಳು. ರಜಪೂತ ಮಹಿಳೆಯರಂತೆ ಧೀರೆಯಾದರೂ, ಅಸೂಯೆಯ ಭಾವನೆಗಳನ್ನು ಸಹ ಅವಳು ಪ್ರಕಟಿಸುತ್ತಾಳೆ.

ಅವರು ರಾಜಾಸ್ಥಾನದ ಮಾದರಿ ನಾಯಕ, ನಾಯಿಕೆಯರು; ಅತಿಮಾನುಷ, ಮಾಂತ್ರಿಕ ಮತ್ತು ಪವಾಡಾತ್ಮಕ ಘಟನೆಗಳು ಕತೆಯ ಮುಖ್ಯಾಂಶವನ್ನು ಬೆಳಗುತ್ತವೆ. ಎಲ್ಲ ಪವಾಡಗಳೂ ದಿವ್ಯಾನುಗ್ರಹದಿಂದ ಅಥವಾ ಗುರು ಗೋರಖ್‌ನಾಥನಿಂದ ಜರುಗುತ್ತವೆ. ಯಾವೊಬ್ಬ ವ್ಯಕ್ತಿಯಿಂದಲ್ಲ – ಅವನೆಷ್ಟೇ ಸಮರ್ಥನಾಗಿರಲಿ.

ಸರಳ, ನಿರಾಡಂಬರವಾದ ರಾಜಾಸ್ಥಾನಿಯ ನಂಬಿಕೆ, ಭರವಸೆಗಳು, ಲೌಕಿಕ ಪ್ರಯೋಜನಗಳ ಸಾಧನವಾಗಿ ಮಾಟವನ್ನು ಬಳಸುವುದರ ಸಾಧ್ಯತೆಯನ್ನು ತಳ್ಳಿಹಾಕುವುದಿಲ್ಲ. ಭಿಲ್ಲರು ಮತ್ತು ಗರಾಸಿಯರಲ್ಲಿ ಭೋಪರು ಹಾಗೂ ಜೋಗಿಗಳು ಮಾಟ ಮಾಡುತ್ತಾರೆ; ಅದು, ಸತ್ತವರ ಭೂತಗಳಿಗೆ ಮತ್ತು ಮಾಟಕ್ಕೆ ಬಹಳ ಹೆದರುವ, ಮೂಢನಂಬಿಕೆ ತುಂಬಿದ ಇನ್ನೊಂದು ಜನಾಂಗ. ಮಾಟಗಾರ ಒಂದು ಹಿಡಿ *ಶ್ರದ್* ತೆಗೆದುಕೊಂಡು, ನಿರ್ದಿಷ್ಟ ದಿಕ್ಕಿನಲ್ಲಿ ಎಸೆಯುತ್ತಾನೆ – ಒಮ್ಮೊಮ್ಮೆ ಒಬ್ಬ ಪುರುಷನತ್ತ ಅಥವಾ ಮಹಿಳೆಯತ್ತ. ಅದು ತಾಗಿದಾಗ, ಮಾರಕವಾಗುವು ದೆಂದು ಹೇಳಲಾಗುತ್ತದೆ. ಈ ತಂತ್ರವನ್ನು ವೈರಿಗಳ ಉಚ್ಚಾಟನೆಗಾಗಿ ಆಶ್ರಯಿಸ ಲಾಗುತ್ತದೆ.

ಕಥೋಡಿಯ ಮತ್ತು ಸೆಹ್ರಿಯಗಳಂಥ ಕಾಡು ಬುಡಕಟ್ಟುಗಳಿಗೆ ಪರಿಚಿತವಾದ ಮದ್ದುಗಳೆಂದರೆ ಅರಣ್ಯಸಸ್ಯಗಳು ಮಾತ್ರ. ಕಾಳಿಕಾಭಕ್ತರಾದ ಅವರು ಆತ್ಮೀಯರ ಕಾಯಿಲೆಯ ಕಾಲದಲ್ಲಿ ಆ ದೇವಿಯನ್ನು ತುಷ್ಟಿಗೊಳಿಸಲು ಮರಗಳನ್ನು ಸುಡುತ್ತಾರೆ. ಗರಾಸಿಯರು ತಮ್ಮ ಮಾಟಗಾರರಾದ ಭೋಪರ ಬಳಿ ಹೋಗುತ್ತಾರೆ; ಅವರು 'ಕೆಟ್ಟಕಣ್ಣು' ಮತ್ತು ಭೂತಗಳು ಉಂಟು ಮಾಡುವ ಕಾಯಿಲೆಯ ಬಹು ಪಾಲು ಪ್ರಕರಣಗಳನ್ನು ಪತ್ತೆಹಚ್ಚಿ, ಚಿಕಿತ್ಸೆ ಮಾಡುತ್ತಾರೆ.

'ಕೆಟ್ಟಕಣ್ಣೆ'ನ ಪರಿಣಾಮವನ್ನು – ಅದರಲ್ಲೂ ಮಕ್ಕಳ ಮೇಲೆ – ಹಳ್ಳಿಗಳಲ್ಲಿ ವ್ಯಾಪಕವಾಗಿ ನಂಬಲಾಗುತ್ತದೆ; ಮಾಟಗಾರರು, ಸಯನರು ಮತ್ತು ಭೋಪರು ತಯಾರಿಸುವ ಯಂತ್ರ, ತಾಯಿತಗಳು ಆಗಾಗ ರಕ್ಷಣೆಯಾಗಿ ಬಳಕೆಗೊಳ್ಳುತ್ತವೆ; ಮಲೇರಿಯ, ವಿಷಮಶೀತಜ್ವರದಂತಹ ಕಾಯಿಲೆಗಳನ್ನು ವಾಸಿ ಮಾಡಲು ಕೂಡ. ಕಾಯಿಲೆ ಬಿದ್ದವರು ಗುಣಮುಖರಾಗುವುದಕ್ಕಾಗಿ ನಿರ್ದಿಷ್ಟ ದೇವ, ದೇವಿಯರಿಗೆ ಪ್ರಾರ್ಥನೆ ಸಲ್ಲಿಸಲಾಗುತ್ತದೆ.

## ಮಾಟ

ಅಜ್ಞಾತವಾದುದು, ವಿವರಿಸಲು ಸಾಧ್ಯವಲ್ಲದ್ದು ಎಂದೂ ಮನುಷ್ಯನಲ್ಲಿ ಭಯ ಮೂಡಿಸಿದೆ. ನಿಗೂಢತೆ ಇಲ್ಲಿಯೆ ನಿರೀಕ್ಷಿಸಿದ್ದನ್ನೆಲ್ಲ ಮಾಡುವುದು; ಏಕೆಂದರೆ ಮುಗ್ಧ ಮನಸ್ಸಿನ ಪಾಲಿಗೆ, ಮಂತ್ರ ಮತ್ತು ಮೂಢನಂಬಿಕೆ ಜ್ಞಾನದ ಬದಲಿಯಾಗಿ ಕೆಲಸ ಮಾಡುತ್ತವೆ. ಇಂದಿಗೂ ನಿಗೂಢತೆ ಗ್ರಾಮೀಣ ಪರಿಕಲ್ಪನೆಯ – ಅದರಲ್ಲೂ ಹಿಂದುಳಿದ ಪ್ರದೇಶಗಳಲ್ಲಿ – ಒಂದು ಅವಿಭಾಜ್ಯಾಂಗವಾಗಿದೆ. ರಾಜಾಸ್ಥಾನದ ಹಿಂದುಳಿದ ಪ್ರದೇಶಗಳು ಇದಕ್ಕೆ ಅಪವಾದವಲ್ಲ.

ಮಾಟದಿಂದುಂಟಾಗುವ ವಿಚಿತ್ರತಮ ಸಂಗತಿಗಳನ್ನು ಹಿರಿಯರು ನಿರೂಪಿಸುತ್ತಾರೆ: ಐಚ್ಛಿಕವಲ್ಲದ ಹಾಡುಗಾರಿಕೆ, ಬಲಾತ್ಕಾರ ನಗ್ನತೆ ಮತ್ತು ತರುಣಿಯರು ಕೂಡ ಮಾಟಗಾರರಿಂದ ಲೈಂಗಿಕ ಸುಖಕ್ಕಾಗಿ ಆಕರ್ಷಿಲ್ಪಡುವಿಕೆ, ಗುಡಿಸಲುಗಳು ಹೊತ್ತಿ ಉರಿಯುವುದು, ಮೈಮೇಲೆ ಕೂದಲು ಹುರಿಹಚ್ಚೆಯಂತಹ ಗುರುತುಗಳು ಕಾಣಿಸಿಕೊಳ್ಳುವುದು, ಮತ್ತು ಕಬ್ಬಿಣದ ಪೆಟ್ಟಿಗೆಗಳಲ್ಲಿ ಸುಟ್ಟ ಬಟ್ಟೆಗಳು. ನಿಗೂಢ ಪ್ರತೀಕಾರದ ಹೆದರಿಕೆಯಿಂದ ಹಳ್ಳಿಯ ಜನ ಮಾಟಗಾರರನ್ನು ಗುರುತಿಸಲು ನಿರಾಕರಿಸುತ್ತಾರೆ. ಆದರೆ ಪ್ರತಿಯೊಂದು ಹಳ್ಳಿಯಲ್ಲೂ ಮಾಟದ ಕೆಡುಕುಗಳನ್ನೆದುರಿಸಲು ಮಾಂತ್ರಿಕರಿರುತ್ತಾರೆ.

ಯಾವುದರ ಮೇಲಾಗಲಿ ಯಾರ ಮೇಲಾಗಲಿ ಹಿಡಿತವನ್ನು ಹಿತಕರವಾದ ಅಭ್ಯಾಸದ ಮೂಲಕ ಸಾಧಿಸಬಹುದೆಂಬ ನಂಬಿಕೆಯ ಮೇಲೆ ಮಾಟ ನಿಂತಿದೆ. ಆಚರಣೆಯ ಪರಿಮಾಣ ನಿಗೂಢ ವಿದ್ಯೆಯ ಅಡಿಗಲ್ಲು ಎಂದು ಮಾಟಗಾರರು ಭಾವಿಸುತ್ತಾರೆ.

ರಾಜಾಸ್ಥಾನದ ಪ್ರತಿಯೊಂದು ಹಳ್ಳಿ ಮತ್ತು ಸಣ್ಣ ನಗರದಲ್ಲೂ ಮಾಟಗಾರರುಂಟು. ನಗರಗಳಲ್ಲಿ ಅವರು ಸಾಮಾನ್ಯವಾಗಿ ರುದ್ರಭೂಮಿಗಳಲ್ಲಿ ವಾಸಿಸುತ್ತಾರೆ; ಅಲ್ಲಿ ಸತ್ತವರ ಮತ್ತು ಹುಗಿದ ಹಸುಳೆಗಳ ಪ್ರೇತಗಳು *(ಕಚ ಕಲ್ವಾ)* ಇರುತ್ತವೆಂದು ಭಾವಿಸಲಾಗಿದೆ. (ರಾಜಾಸ್ಥಾನದಲ್ಲಿ, ಹಸುಳೆಗಳನ್ನು ಹೂಳಲಾಗುತ್ತದೆ, ಸುಡುವುದು ವಿರಳ). ಈ ಮಾಟಗಾತಿಯರು ಸಾಮಾನ್ಯ ಕಾಯಿಲೆಗಳ ಚಿಕಿತ್ಸೆಗಾಗಿ, ಮತ್ತು ದೆವ್ವ ಭೂತಗಳು ಹಿಡಿದವರ ಚಿಕಿತ್ಸೆಗಾಗಿ ಕೂಡ *ಝುಢ– ಫೂಂಕ್*‌ನ್ನು ಆಚರಿಸುತ್ತಾರೆ.

'ಕೆಟ್ಟ ಕಣ್ಣು' ಸಣ್ಣ ನಗರಗಳಲ್ಲಿ ಕೂಡ ಹೆದರಿಕೆ ಹುಟ್ಟಿಸುತ್ತದೆ; ಎಷ್ಟರ ಮಟ್ಟಿಗೆಂದರೆ, ಗರ್ಭಧಾರಣೆಗಾಗಿ ಮಗುವೊಂದರ ಒಂದು ಚೂರು ಬಟ್ಟೆಯನ್ನೋ ಕೇಶಗುಚ್ಛವನ್ನೋ ಕತ್ತರಿಸಬಹುದಾದ ಬಂಜೆ ಸ್ತ್ರೀಯರ ವಿರುದ್ಧ ತಮ್ಮ ಮಕ್ಕಳನ್ನು ರಕ್ಷಿಸಿಕೊಳ್ಳುವುದರ ಬಗೆಗೆ ತಾಯಂದಿರು ಯಾವಾಗಲೂ ಎಚ್ಚರಿಕೆಯಿಂದಿರುತ್ತಾರೆ. ಈ ತಂತ್ರ ಕೆಲಸ ಮಾಡಿ, ಗರ್ಭಧಾರಣೆಯುಂಟಾದರೆ, ಅದು 'ಕೆಟ್ಟ ಕಣ್ಣು' ತಾಗಿದ ಮಗುವಿನ ಪ್ರಾಣಕ್ಕೆ ಸಂಚಕಾರವೆಂದು ಸಾಮಾನ್ಯ ನಂಬಿಕೆ.

ಸಣ್ಣ ನಗರಗಳಲ್ಲಿ ಕೂಡುದಾರಿಗಳು ಅಥವಾ ಚೌಕಗಳು ಭೂತಪ್ರೇತಗಳಿಂದ ಮತ್ತು ಮಾಟಗಾತಿ – ಡಾಕಿನಿಯರಿಂದ ಪ್ರಭಾವಿತವಾಗಿರುತ್ತವೆಂದು

ಭಾವಿಸಲಾಗಿದೆ; ಇಂಥ ಕೂಡುದಾರಿಗಳ ಕೇಂದ್ರದಲ್ಲಿ, ಭೂತಪ್ರೇತಗಳ ಉಚ್ಚಾಟನೆಗಾಗಿ ಮುಸ್ಸಂಜೆ ಅಥವಾ ನಟ್ಟಿರುಳಿನಲ್ಲಿ ನಿರ್ದಿಷ್ಟ ನೈವೇದ್ಯಗಳನ್ನರ್ಪಿಸಲಾಗುತ್ತದೆ.

ರಾಜಾಸ್ಥಾನದ ಪ್ರಾಚೀನತಮ ಆದಿವಾಸಿ ಬುಡಕಟ್ಟಾದ ಭಿಲ್ಲರು ಒಂದು ಕಾಲದಲ್ಲಿ ಮಾಟವನ್ನು ಬಹುತೇಕ ಧಾರ್ಮಿಕವಾಗಿ ನಂಬಿದ್ದರು. ಭೂತಪ್ರೇತಗಳನ್ನು ದೂರವಿಡುವುದಕ್ಕಾಗಿ ಅವರು ಈಗಲೂ ಯಂತ್ರ, ತಾಯಿತಗಳನ್ನು ಧರಿಸುತ್ತಾರೆ. ಅವರ ಮಾಟವೈದ್ಯರೆಂದರೆ ಭೋಪರು; ಪ್ರಮುಖ ಭಿಲ್ ನೆಲೆಗಳಲ್ಲೆಲ್ಲ ಅವರು ಕಂಡುಬರುತ್ತಾರೆ. ಭೋಪರ ಆದೇಶದಂತೆ, ಶಂಕಿತ ಮಾಟಗಾತಿಯೊಬ್ಬಳ ಮೇಲೆ ಹಿಂದೆ ದೌರ್ಜನ್ಯ ನಡೆಯಿತು. ಅವಳನ್ನು ಆದಿಮ ನ್ಯಾಯವಿಧಾನಗಳಿಗೆ ಗುರಿ ಮಾಡಲಾಯಿತು; ಅವುಗಳಲ್ಲಿ ಜಲದಿವ್ಯ ಅತ್ಯಂತ ಸಾಮಾನ್ಯವಾದದ್ದು. ಶಂಕಿತ ಮಾಟಗಾತಿಯನ್ನು ಗೋಣಿಚೀಲದ ಒಂದು ಬದಿಯಲ್ಲಿರಿಸಲಾಯಿತು; ಇನ್ನೊಂದು ಬದಿಯಲ್ಲಿ ಮೂರು ಒಣ ಬೆರಣಿಗಳು. ಚೀಲವನ್ನು ನೀರಿಗೆಸೆಯಲಾಯಿತು. ಆ ಹೆಂಗಸು ಮುಳುಗಿದರೆ, ಅವಳು ಮಾಟಗಾತಿಯಲ್ಲ; ಈಜಿಕೊಂಡು ಮರಳಿದರೆ, ಮಾಟಗಾತಿ.

ಮತ್ತೊಂದು ಪರೀಕ್ಷಾ ಪ್ರಕಾರವೆಂದರೆ, ಶಂಕಿತ ವ್ಯಕ್ತಿಯನ್ನು ಗೋಣಿಚೀಲವೊಂದರಲ್ಲಿರಿಸಿ ಹೊಲಿದು, ಅದನ್ನು ಸುಮಾರು ಮೂರಡಿಯಷ್ಟು ಆಳವಾಗಿ ನೀರಿನಲ್ಲಿ ಮುಳುಗಿಸುವುದು. ಒಳಗಿದ್ದ ಹೆಂಗಸು ತನ್ನ ತಲೆಯನ್ನು ನೀರಿನ ಮೇಲಿರಿಸಬಲ್ಲಳಾದರೆ, ಅವಳು ಮಾಟಗಾತಿ.

1865ರಲ್ಲಿ, ರಾಜಾಸ್ಥಾನದ ಭಿಲ್ ಹಳ್ಳಿಯೊಂದಕ್ಕೆ ಕಾಲರಾ ರೋಗವನ್ನು ತಂದಳೆಂದು ಶಂಕಿಸಲಾದ ಹೆಂಗಸೊಬ್ಬಳನ್ನು ಹರಳುಗಿಡದ ದೊಣ್ಣೆಗಳಿಂದ–ಅವು ಮಾಟಶುದ್ಧಿಗೆ ಉತ್ತಮವೆಂದು ಭಾವನೆ – ಬಡಿದು ಕೊಲ್ಲಲಾಯಿತು. ಆದರೆ ಇಂಥ ಪ್ರಕರಣಗಳು ಈಗ ವಿರಳವಾಗಿವೆ.

ಸತ್ತವರ ಬೂದಿಯನ್ನು ಯಾವುದಾದರೂ ಪವಿತ್ರ ನದಿಯಲ್ಲಿ ಮುಳುಗಿಸಬೇಕು, ಹಾಗೆ ಮಾಡುವ ತನಕ ಸತ್ತವರ ಆತ್ಮ ತನ್ನ ಲೌಕಿಕ ಸಂಬಂಧಗಳ ಬಳಿ ಸುಳಿದಾಡುತ್ತಿರುತ್ತದೆ ಎಂದು ಭಿಲ್ಲರು, ಬಹುಪಾಲು ಹಿಂದೂಗಳಂತೆ, ನಂಬುತ್ತಾರೆ. ಶಥ ಅಥವಾ ತಿಥಿಯೂಟದ ಸಂದರ್ಭದಲ್ಲಿ, ಪರಿಸರವನ್ನು ದುಷ್ಟಶಕ್ತಿಗಳಿಂದ ಪಾರು ಮಾಡಲು ಭೋಪ ಅಥವಾ ಮಾಟ–ವೈದ್ಯನದೇ ಕಾರುಬಾರು. ಸತ್ತವನ ಆತ್ಮ ಅವನ ಶರೀರವನ್ನು ಹೊಕ್ಕು, ತಾನು ಬಯಸಿದ್ದನ್ನೆಲ್ಲ ಅವನ ಮೂಲಕ ಕೇಳುತ್ತದೆ ಎಂದು ಭಾವಿಸಲಾಗುತ್ತದೆ. ಈ ಬೇಡಿಕೆಗಳನ್ನು ಕೂಡಲೆ ಪೂರೈಸಲಾಗುತ್ತದೆ. ಇಂಥವೇ ವಿಧಿಗಳನ್ನು ಜೋಗಿಗಳು ಆಚರಿಸುತ್ತಾರೆ; ಕರ್ಮಗಳು ಮಾಮೂಲು ಕಂಠಪೂರ್ತಿ ಕುಡಿತದಿಂದ ಕೊನೆಗಾಣುತ್ತವೆ.

ಈಚಿನ ವರ್ಷಗಳಲ್ಲಿ, ಜೈಪುರದಿಂದ ಸುಮಾರು ಎಂಬತ್ತು ಕಿಲೋಮೀಟರ್ ದೂರವಿರುವ ಮೆಹ್ನ್‌ದಿಪುರ್ ಬಲಾಜಿ ದೇವಾಲಯ ದೈವ, ಭೂತಗಳು ಹಿಡಿದ ಇಂಥ ವ್ಯಾಧಿಗಳ ಚಿಕಿತ್ಸೆಯ ಕೇಂದ್ರವಾಗಿ ಬಹಳ ಪ್ರಸಿದ್ಧಿ ಗಳಿಸಿದೆ. ಅಂತಹ ಪ್ರಕರಣಗಳನ್ನು ಇಲ್ಲಿಗೆ ರಾಜಾಸ್ಥಾನದಿಂದ ಮಾತ್ರವಲ್ಲದೆ ಭಾರತದ ದೂರದ ಭಾಗ

ಗಳಿಂದಲೂ ತರಲಾಗುತ್ತದೆ.

## ಶಕುನಗಳು ಮತ್ತು ಕಣಿ

ರಾಜಾಸ್ಥಾನಿಗಳು ಬಹಳ ಧಾರ್ಮಿಕ ಮತ್ತು ಅಂಧಶ್ರದ್ಧೆಯ ಮನೋಭಾವ ದವರಾದ್ದರಿಂದ, ಏನು ಮಾಡಬೇಕಾದರೂ, ಶಕುನಗಳನ್ನು ವಿಶೇಷವಾಗಿ ಗಮನಿಸು ತ್ತಾರೆಂಬುದು ಅಚ್ಚರಿಯಲ್ಲ. ಶಕುನಗಳು ಒಳ್ಳೆಯವೂ ಆಗಿರಬಹುದು, ಕೆಟ್ಟವೂ ಆಗಿರಬಹುದು; ಯಾವುದಾದರೂ ವ್ಯವಹಾರಕ್ಕಾಗಿ ಮನೆ ಬಿಡುವ ಸಂದರ್ಭದಂಥ ಸಂದರ್ಭಗಳಲ್ಲಿ ಒಳ್ಳೆಯ ಶಕುನಗಳನ್ನು ಇಷ್ಟಪಡುವುದು ಸಹಜವೇ. ವ್ಯಾಪಾರ ಮಾಡುವ ಅಥವಾ ದೂರದ ಪ್ರಾಂತಗಳಲ್ಲಿ ಜೀವನ ನಡೆಸುವ ರಾಜಾಸ್ಥಾನದ ದೊಡ್ಡ ವಣಿಜವರ್ಗಕ್ಕೆ ಸೇರಿದ ಜನ, ಶಕುನಗಳು ಅನುಕೂಲವಾಗಿರದಿದ್ದರೆ ಪ್ರಯಾಣವನ್ನು ದಿನಗಟ್ಟಲೆ ಮುಂದೆ ಹಾಕುತ್ತಾರೆ. ಚೆನ್ನಾಗಿ ವಸ್ತ್ರ ಧರಿಸಿದ, ಗಂಡನುಳ್ಳ ಹೆಂಗಸು ಅಥವಾ ನೀರು ತುಂಬಿದ ಕೊಡವನ್ನು ತಲೆಯ ಮೇಲೆ ಹೊತ್ತವಳು, ಜಾಟ್, ಜಲಗಾರ ಅಥವಾ ಜಲಗಾತಿ ದಾರಿಗಡ್ಡ ಬಂದರೆ, ಅವು ಶುಭ ಶಕುನಗಳು. ಖಾಲಿಕೊಡ ಹಿಡಿದ ಅಥವಾ ತಲೆಗೆ ಮುಸುಕು ಹಾಕದ ಹೆಂಗಸು, ಕಟ್ಟಿಗೆ ತುಂಬಿದ ಬಂಡಿ, ಕಿವಿಯಾಡಿಸುವ ನಾಯಿ, ದಾರಿಗಡ್ಡಬರುವ ಬೆಕ್ಕು, ಅಕ್ಕಸಾಲೆ – ಇವು ಕೆಟ್ಟ ಶಕುನಗಳು. ಯಾರಾದರೂ ಆಣೆ ಮಾಡುತ್ತಿರುವಾಗ – ಸಂಭಾಷಣೆಯಲ್ಲಿ ಕೂಡ – ಸೀನಿನ ಸದ್ದು, ಎಡಗಡೆ ಗೌಜುಗ ಹಕ್ಕಿಯ ಮತ್ತು ಬಲಗಡೆ *ಕೊಚರಿಯ* ಆರ್ತನಾದ ಕೂಡ ಅಪಶಕುನಗಳಾಗಿ ಪರಿಗಣಿತವಾಗಿವೆ. ಕತ್ತೆ ಅಥವಾ ಹಾವು ಎದುರಿಗೆ ಬಂದರೆ, ಕತ್ತೆಯನ್ನು ಎಡಗಡೆ ಮತ್ತು ಹಾವನ್ನು ಬಲಗಡೆ ಯಾವಾಗಲೂ ದಾಟಿ ಹೋಗಲಾಗುತ್ತದೆ.

ಪ್ರಯಾಣಕ್ಕೆ ಶುಭದಿವಸ ಮತ್ತು ಕಾಲವನ್ನು ಆರಿಸಿಕೊಳ್ಳಲಾಗುತ್ತದೆ. ಸೋಮವಾರ ಮತ್ತು ಶನಿವಾರ ಪೂರ್ವಕ್ಕೆ ಪಯಣ ಮಾಡಕೂಡದು. ಬುಧವಾರ ಮತ್ತು ಅಮಾವಾಸ್ಯೆಯಂದು ಎಲ್ಲಿಗೂ ಹೋಗಕೂಡದು. ಹೊರಡುವ ಸಮಯ ದಲ್ಲಿ ಹಾಲು ಕುಡಿಯುವುದು ಮತ್ತು ಹಪ್ಪಳ ತಿನ್ನುವುದು ನಿಷಿದ್ಧ. ಅದರ ಬದಲು, ಅದೃಷ್ಟ ಖುಲಾಯಿಸಲೆಂದು ತುಸು *ಗುರ್* ಮತ್ತು ಮೊಸರು ಕೊಡಲಾಗುತ್ತದೆ. ಹಾಗೆಯೆ, ಮಂಗಳವಾರ ಮತ್ತು ಶನಿವಾರಗಳಂದು ಕ್ಷೌರ ವರ್ಜ್ಯ; ಕ್ಷೌರದಂಗಡಿಗಳು ಇಡೀ ರಾಜಾಸ್ಥಾನದಲ್ಲಿ ಮಂಗಳವಾರ ಮುಚ್ಚಿರುತ್ತವೆ. ಶನಿವಾರ ಮತ್ತು ಭಾನುವಾರ ಹೊಸ ಬಟ್ಟೆಗಳನ್ನು ಧರಿಸುವುದಿಲ್ಲ.

ರಾಜಾಸ್ಥಾನದ ಅಂಧಶ್ರದ್ಧಾನ್ವಿತ ಮೀನರು–ಅದರಲ್ಲೂ ಅಪರಾಧಿ ಜೀವನ ನಡೆ ಸುವವರು–ಶಕುನಗಳನ್ನು ಬಹಳ ಗಂಭೀರವಾಗಿ ತೆಗೆದುಕೊಂಡು, ತದನುಸಾರವಾಗಿ ತಮ್ಮ ಚಲನವಲನಗಳನ್ನು ನಿರ್ಧರಿಸುತ್ತಾರೆ. ಕತ್ತೆ ಅಥವಾ ಗೂಗೆ ಎಡದಲ್ಲಿ ಕೂಗಿದರೆ ಮತ್ತು ನರಿ ಬಲದಲ್ಲಿ ಕೂಗಿದರೆ, ಅದು ಕಳವು ಅಥವಾ ದರೋಡೆಯಲ್ಲಿ ಗೆಲುವಿನ ಸೂಚಕ. ಕೊಕ್ಕರೆಯ ಕೂಗು ದುರದೃಷ್ಟಸೂಚಕ. ಬೆಕ್ಕು, ಕುರಿ ಅಥವಾ ಕತ್ತೆ ಕಿರುಬ ಎದುರಾದರೂ ಅಷ್ಟೆ.

ಭವಿಷ್ಯದ–ಅಜ್ಞಾತದ–ಮುನ್‌ಸೂಚನೆಗಳೆಂದು ಶಕುನಗಳನ್ನು ವ್ಯಾಖ್ಯಾನಿಸಲಾಗುತ್ತದೆ; ಭವಿಷ್ಯದಲ್ಲಿ ತಮಗೇನು ಕಾದಿದೆ ಎಂಬುದರ ಬಗೆಗೆ ಕಲ್ಪಿಸಿಕೊಳ್ಳುವುದು ಸಾಮಾನ್ಯರ ಸಹಜ ಪ್ರವೃತ್ತಿ. ಭವಿಷ್ಯಕ್ಕೆ ಸಂಬಂಧಿಸಿದ ಪ್ರಶ್ನೆಗಳಿಗೆ ಉತ್ತರಿಸಬಲ್ಲದ್ದು ಅತಿಮಾನುಷ ಜ್ಞಾನ; ಇಂಥ ಜ್ಞಾನವುಳ್ಳವರೆಂದು ನಟಿಸುವ ಭೋಪರು, ಜೋಗಿಗಳು ಮತ್ತಿತರರ ಸುತ್ತ ಮೂಢಜನ ನೆರೆಯುತ್ತಾರೆ; ಅವರು ಸಾಮಾನ್ಯಾವಸ್ಥೆಯಲ್ಲಿರುವಾಗ ಅಲ್ಲ, ಅವರ ಮೈಮೇಲೆ ಭೈರೋನ್‌ಜಿ, ಮಾತಾಜಿ ಮತ್ತು ಅಂತಹ ಇತರ ದೇವತೆಗಳು ಬಂದಾಗ ಉಂಟಾಗುವ ಸಮಾಧಿಯ ಅವಧಿಗಳಲ್ಲಿ. ಇಂಥ ಹೊತ್ತುಗಳಲ್ಲಿ ಅವರ ಅವಸ್ಥೆಯನ್ನು ನಿರ್ದಿಷ್ಟ ದೇವತೆಯ **ಭಾವೊ** ಎಂದು ಕರೆಯಲಾಗುತ್ತದೆ. ತೇಜಜಿಯ ಪುರೋಹಿತರು ಹಾವು ಕಡಿತದ ವಿಷವನ್ನು ಹೀರಿ ತನ್ಮೂಲಕ ರೋಗಿಯನ್ನು ಗುಣಪಡಿಸುತ್ತಾರೆಂದು ಹೇಳುವುದು ಈ ಅವಸ್ಥೆಯಲ್ಲೆ.

***ಬುಚ್‌ಹೊವಲ್*** ಅಥವಾ ಪ್ರಶ್ನೆ ಕೇಳುವುದು ಪ್ರಾಚೀನ ಯಕ್ಷಪೂಜೆಯ ಒಂದು ಅಂಗವಾಗಿತ್ತೆಂದು ಮನೋಹರ ಶರ್ಮ ತಮ್ಮ ರಾಜಾಸ್ಥಾನಿ ಜನಪದ ಸಂಸ್ಕೃತಿಯ ಅಧ್ಯಯನದಲ್ಲಿ ಹೇಳುತ್ತಾರೆ ಮತ್ತು ***ಯಕ್ಷ–ಪ್ರಶ್ನೋತ್ತರಿ*** ಪದ್ಧತಿಯನ್ನೂ ಉಲ್ಲೇಖಿಸುತ್ತಾರೆ. ಯಕ್ಷ ಯಾರ ಮೈಮೇಲೋ ಬಂದು ಅವನ ಮೂಲಕ ಪ್ರಶ್ನೆಗಳಿಗೆ ಉತ್ತರಿಸುವುದು ವಾಡಿಕೆಯಾಗಿತ್ತು. ಅದು ಈಗಲೂ ಅಸ್ತಿತ್ವದಲ್ಲಿದ್ದು, ***ಭುಜಕರಾನೊ*** ಅಥವಾ ***ಅಖಿಕರ್ಟನೊ*** ಎಂದು ಕರೆಯಲ್ಪಡುತ್ತದೆ. ದೇವತೆ ಮವಲಿಯನ್ ಅಥವಾ ಮಹಾವೀರ್–ಪುರೋಹಿತನ ಮೈಹೊಗುತ್ತದೆ; ಭಕ್ತರು ಅವನಿಗೆ ಪ್ರಶ್ನೆ ಹಾಕುತ್ತಾರೆ. ಮುಂದಿನ ಸಂಗತಿಗಳನ್ನು ಉತ್ತರಗಳು ಮುನ್ನುಡಿಯುತ್ತವೆ.

ಕಳವು, ಮದುವೆ ಅಥವಾ ಭೌತಿಕ ಲಾಭಗಳಂಥ ವೈಯಕ್ತಿಕ ಸರಳ ಸಮಸ್ಯೆಗಳ ಸಂದರ್ಭಗಳಲ್ಲಿ, ಉತ್ತರಗಳು ನಿಶ್ಚಿತವಲ್ಲದಿರಬಹುದು; ಆದರೆ, ಕಳ್ಳರು ಪಶ್ಚಿಮದಿಂದ ಬಂದು ಪೂರ್ವಕ್ಕೆ ಹೋದರು, ಅವರು ಪರಿಚಿತರಾಗಿದ್ದು, ಒಂದೆರಡು ದಿನಗಳಲ್ಲಿ ಮತ್ತೆ ಬರುತ್ತಾರೆ ಇತ್ಯಾದಿಯಾಗಿ ಸಾಮಾನ್ಯ ಸೂಚನೆಗಳನ್ನು ಕೊಡಲಾಗುತ್ತದೆ.

ಹವಾ ಮುನ್ಸೂಚನೆಗೆ ಸಂಬಂಧಿಸಿದಂತೆ, ರಾಜಾಸ್ಥಾನಿ ಜಾನಪದವೊಂದು ಜ್ಞಾನದ ಗಣಿ. ಪ್ರಕೃತಿ ವ್ಯಾಪಾರಗಳ ವಾಸ್ತವ ಪರಿಶೀಲನೆಯಿಂದ ಬಂದ ಶತಮಾನಗಳ ವಿವೇಕವನ್ನೊಳಗೊಂಡ ಜನಪ್ರಿಯ ಹೇಳಿಕೆಗಳ ಮತ್ತು ದ್ವಿಪದಿಗಳ ರಾಶಿಯೆ ಉಂಟು. ಮಳೆ ಭಗವಂತನ ಮಹೋನ್ನತ ವರವಾಗಿರುವಂಥ ಬಂಜರು ಮತ್ತು ಅರೆಬಂಜರು ಪ್ರದೇಶಗಳ ಕೃಷಿಕರ ಮತ್ತು ಪಶುಪಾಲಕರ ಪಾಲಿಗೆ ಮಳೆ ಮತ್ತು ಬರಗಳನ್ನು, ಮುಂದಿನ ಒಳ್ಳೆಯ ಅಥವಾ ಕೆಟ್ಟ ದಿವಸಗಳನ್ನು ಈ ಪ್ರಾಂತದ ಗ್ರಾಮೀಣ ಜನ ಮುನ್ನುಡಿಯಬಲ್ಲವರಾಗಿರುವುದು ಈ ಕಾರಣದಿಂದಲೆ.

# ರೂಢಿಗಳು ಮತ್ತು ಸಂಪ್ರದಾಯಗಳು

ಚಾರಿತ್ರಿಕವಾಗಿ, ರಾಜಾಸ್ಥಾನದ ರೂಢಿ, ಸಂಪ್ರದಾಯಗಳ ಉಗಮವನ್ನು ವೇದಗಳಲ್ಲಿ ಸುಲಭವಾಗಿ ಗುರುತಿಸಬಹುದು; ಅಲ್ಲಿ ಪ್ರತಿಯೊಂದು ಗಂಡು, ಹೆಣ್ಣಿನ ಸಂಸ್ಕಾರಗಳಿಗಾಗಿ ನಿಶ್ಚಿತ ವಿಧಿ, ಕರ್ಮಗಳನ್ನು ಸೂಕ್ಷ್ಮತಮ ವಿವರಗಳಲ್ಲಿ ಗೊತ್ತುಪಡಿಸಲಾಗಿದೆ. ವಾಸ್ತವವಾಗಿ ರಾಜಾಸ್ಥಾನದ ರೂಢಿ, ಸಂಪ್ರದಾಯಗಳು ಈ ವೈದಿಕ ವಿಧಿ, ಆಚರಣೆಗಳ ರಾಜಾಸ್ಥಾನಿ ರೂಪಾಂತರ. ಸಾವಿರಾರು ವರ್ಷಗಳ ಕಾಲ ರಾಜಾಸ್ಥಾನದ ಜನ ವೇದಗಳ ಆದೇಶಗಳನ್ನು ಪ್ರತಿಯೊಂದು ಘಟ್ಟದಲ್ಲಿ, ಹುಟ್ಟಿನಿಂದ ಸಾವಿನತನಕ ಧಾರ್ಮಿಕವಾಗಿ ಅನುಸರಿಸಿದ್ದಾರೆ. ಆದರೆ ಅವರು ಕಾಲಕಾಲಕ್ಕೆ ಕೆಲವು ಪ್ರಾದೇಶಿಕ ವಿಧಿ ಹಾಗೂ ಆಚರಣೆಗಳನ್ನು ಈ ವೈದಿಕ ಕರ್ಮಗಳಿಗೆ ಸೇರಿಸಿದ್ದಾರೆ ಹಾಗೂ ಅವುಗಳನ್ನು ವಿಶಿಷ್ಟವಾಗಿಸಿದ್ದಾರೆ ಮತ್ತು ತನ್ಮೂಲಕ ಹೆಚ್ಚು ವರ್ಣರಂಜಿತ ಮತ್ತು ಆಕರ್ಷಕಗೊಳಿಸಿದ್ದಾರೆ.

ವೇದದ ಪ್ರಕಾರ, ಪ್ರತಿಯೊಬ್ಬ ವ್ಯಕ್ತಿಯೂ ಹುಟ್ಟಿನಿಂದ ಸಾವಿನವರೆಗೆ ಸಂಸ್ಕಾರಗಳೆಂಬ ನಿರ್ದಿಷ್ಟ ಕರ್ಮಗಳನ್ನಾಚರಿಸಬೇಕು; ಅವುಗಳ ಸಂಖ್ಯೆ ಹದಿನಾರು; ಅವು ಮುಖ್ಯವಾಗಿ ಬದುಕಿನ ಮೂರು ಮಹತ್ವದ ಘಟನೆಗಳಿಗೆ – ಹುಟ್ಟು, ಮದುವೆ ಮತ್ತು ಸಾವು – ಸಂಬಂಧಿಸಿವೆ.

## ಹುಟ್ಟು

### *ಗರ್ಭಾದಾನ*

ರಾಜಾಸ್ಥಾನದಲ್ಲಿ ಕಡೆಯಪಕ್ಷ ಒಂಬತ್ತು ಮುಖ್ಯ ವಿಧಿಗಳು ಶಿಶುಜನನ ಸಂದರ್ಭದಲ್ಲಿ ನಡೆಯುತ್ತವೆ. ಮೊದಲನೆಯದು *ಗರ್ಭಾದಾನವಿಧಿ*. ವಧು ಮೊದಲ ಬಾರಿಗೆ ಗರ್ಭ ಧರಿಸಿದಾಗ, ಅದು ಕುಟುಂಬಕ್ಕೆ ಶುಭಶಕುನವೆಂದು ಪರಿಗಣಿತವಾಗಿ, ಸಂತೋಷ ಸಂಭ್ರಮಗಳ ಸಂದರ್ಭವಾಗುತ್ತದೆ. ಬಂಧುಬಾಂಧವರು ಬಂದು, ಹುಡುಗಿಯನ್ನು ಅಭಿನಂದಿಸುತ್ತಾರೆ. ಅವರು ಧೋಲಕ್ ಶಬ್ದಕ್ಕೆ ಒಟ್ಟಿಗೆ ಹಾಡುತ್ತ ತಮ್ಮ ಅಮಿತ ಸಂತೋಷವನ್ನು ವ್ಯಕ್ತಪಡಿಸುತ್ತಾರೆ. ಹಾಡುಗಳು ಅರ್ಥವತ್ತಾಗಿರುತ್ತವೆ; ತಿಂಗಳು ತಿಂಗಳಿಗೆ ಹುಡುಗಿಯ ದೇಹದಲ್ಲುಂಟಾಗುವ ಬದಲಾವಣೆಗಳನ್ನೂ ಅವುಗಳ ಪರಿಣಾಮವಾಗಿ ಅವಳ ಭಾವನೆ, ವರ್ತನೆಗಳಲ್ಲಾಗುವ ಬದಲಾವಣೆ

ಗಳನ್ನೂ ಅವಳ ಇಷ್ಟಾನಿಷ್ಟಗಳನ್ನೂ ಅನೇಕ ಹಾಡುಗಳು ವರ್ಣಿಸುತ್ತವೆ.

ಉದಾಹರಣೆಗೆ, ಜನಪ್ರಿಯ ಹಾಡುಗಳಲ್ಲೊಂದು ಈ ಮಾತುಗಳಿಂದ ಮೊದಲಾಗುತ್ತದೆ:

ಮೊದಲ ತಿಂಗಳಲ್ಲಿ ಮಲಗಿರುತ್ತಾಳೆ ಭಾವೀ ತಾಯಿ
ಹಗಲಿರುಳು ಹಾಸಿಗೆಯಲ್ಲಿ
ಅವಳಿಗೆ ಆಲಸ್ಯ, ಜಡತೆ ಎರಡನೆಯ ತಿಂಗಳು ಕೂಡ,
ಕಳೆಯುತ್ತಾಳೆ ಕಾಲವನ್ನೆಲ್ಲ ಹಾಸಿಗೆ ಮೇಲೆ,
ಆದರೆ ಈಗೀಗ ಅಸ್ವಸ್ಥತೆ;
ತಾಯಿಯಾಗಲಿರುವ ಈ ಚೆಲುವೆಗೊಂದೇ ಒಂದು ಆಸೆ
ಬೆಳ್ಳಿ ಬಟ್ಟಲಲ್ಲಿ *ಕೇಸರ* ತೆಗೆದುಕೊಳ್ಳುವುದು.

*ಅಠ್‌ವಾಸ (ಗರ್ಭಧಾರಣೆಯ ಎಂಟನೆಯ ತಿಂಗಳು)*

ಹುಡುಗಿ ಗರ್ಭಧಾರಣೆಯ ಎಂಟನೆಯ ತಿಂಗಳನ್ನು ಪ್ರವೇಶಿಸಿದಾಗ, ಗರ್ಭಸ್ಥ ಶಿಶುವಿನ ಕ್ಷೇಮವನ್ನು ಖಚಿತಪಡಿಸಿಕೊಳ್ಳುವುದಕ್ಕಾಗಿ *ಅಠ್‌ವಾಸ* ವಿಧಿಯನ್ನಾ ಚರಿಸಲಾಗುತ್ತದೆ. ಬಂಧುಬಾಂಧವರು ಹುಡುಗಿಯ ಮನೆಯಲ್ಲಿ ನೆರೆದು, ಸುರಕ್ಷಿತ ಹೆರಿಗೆಗಾಗಿ ಮನೆ ದೇವರಿಗೆ ಪ್ರಾರ್ಥನೆ ಸಲ್ಲಿಸುತ್ತಾರೆ. ಅವರು ತಮ್ಮ ಇಷ್ಟದೈವದ ದೇವಾಲಯಕ್ಕೆ ಹೋಗಿ, ಆಶೀರ್ವಾದ ಬೇಡುತ್ತಾರೆ. ಇದು ಇಡೀ ಇರುಳು ನಡೆಯುವ ಸಂಗೀತಗೋಷ್ಠಿಯ ಸಂದರ್ಭವೂ ಹೌದು. ಸ್ತ್ರೀಯರು ಸಂಜೆ ಸೇರಿ, ಇರುಳೆಲ್ಲ ಹಾಡುತ್ತಾರೆ. ಎಂಟನೆಯ ತಿಂಗಳಲ್ಲಿ ಪ್ರತಿನಿತ್ಯವೂ ಸಿಹಿ ಹಂಚಲಾಗುತ್ತದೆ; ಈ ಸಂದರ್ಭದಲ್ಲಿ ಶ್ರೀಮಂತರು ಭೋಜನಕೂಟಗಳನ್ನೇರ್ಪಡಿಸುತ್ತಾರೆ.

ಈ ವಿಧಿಯ ಅತ್ಯಂತ ಸ್ವಾರಸ್ಯದ ಭಾಗವೆಂದರೆ, ತಾಯಿಯಾಗಲಿರುವ ಹುಡುಗಿಯನ್ನು ಕುಟುಂಬದ ರಾಣಿಯೆಂಬಂತೆ ಉಪಚರಿಸುವುದು. ಹತ್ತಿರದ ಮತ್ತು ದೂರದ ಸಂಬಂಧಿಗಳು ಹುಡುಗಿಯಲ್ಲಿಗೆ ಬಂದು, ತಮ್ಮ ಸ್ವಂತ ಕೈಗಳಿಂದ ಅವಳಿಗೆ ಉಣಿಸುತ್ತಾರೆ. ನೆಂಟರಿಷ್ಟರು ಅವಳನ್ನು ಔತಣಗಳಿಗೆ ಆಮಂತ್ರಿಸುವುದೂ ಉಂಟು. ವಾಸ್ತವವಾಗಿ ಅವಳು ಕಡೆಯಪಕ್ಷ ಒಂದು ತಿಂಗಳವರೆಗೆ ಸಮಾಜದ ನಾಯಿಕೆಯೇ ಸರಿ.

ದಸ್ತಿರಿ ದಾಖಲೆಗಳ (21 ಫೆಬ್ರವರಿ 1783) ಪ್ರಕಾರ, ಈವಿಧಿಯನ್ನು ಮಧ್ಯಯುಗದಲ್ಲಿ ಕೂಡ ಬಹು ಸಂಭ್ರಮದಿಂದ ಆಚರಿಸಲಾಗುತ್ತಿತ್ತು. *ಸೀಮಂತೋ ನಯನ್* ಎಂಬ ಹೆಸರಿನಲ್ಲಿ ಇದನ್ನು ಹವನ, ಮತ್ತಿತರ ಸ್ಥಳೀಯ ವಿಧಿಗಳ ಮೂಲಕ ಆಚರಿಸಲಾಗುತ್ತಿತ್ತು.

*ಜಾತಕರ್ಮ ವಿಧಿ*

ಮಗು ಹುಟ್ಟಿದಾಗ, ತುಪ್ಪ ಬೆರೆಸಿದ ಒಂದು ಚಮಚ ಜೇನುತುಪ್ಪವನ್ನು ಮಗುವಿಗೆ ಊಡುವುದರ ಮೂಲಕ ಜನನವಿಧಿಯನ್ನು ಆಚರಿಸಲಾಗುತ್ತದೆ. ಮಗು

ಗಂಡಾದಾಗ, ಕುಟುಂಬದ ಹಿರಿಯ ಹೆಂಗಸೊಬ್ಬಳು ತಾಮ್ರದ ತಟ್ಟೆ ಬಡಿಯುವುದರ ಮೂಲಕ ಜನನವನ್ನು ಪ್ರಕಟಿಸುತ್ತಾಳೆ. ಹೀಗಾಗಿ, ಪುತ್ರಜನನದ ವಿಷಯ ಸ್ಥಳಕ್ಕೆಲ್ಲ ಕೂಡಲೆ ತಿಳಿಯುತ್ತದೆ; ಅವರೆಲ್ಲ ಬಂದು ಕುಟುಂಬವನ್ನು ಅಭಿನಂದಿಸುತ್ತಾರೆ. ಕೋವಿಗಳಿದ್ದವರು ಗಂಡುಮಗುವಿನ ಜನನವನ್ನು ಸೂಚಿಸಲು ಹಲವು ಸುತ್ತು ಗುಂಡು ಹಾರಿಸುತ್ತಾರೆ.

ಜಾತಕ ಸಿದ್ಧಪಡಿಸುವುದಕ್ಕಾಗಿ ಗಂಡುಮಗುವಿನ ಜನನದ ವೇಳೆ ಮತ್ತು ದಿನಾಂಕವನ್ನು ಗುರುತುಹಾಕಿಕೊಳ್ಳಲು ಕುಲಪುರೋಹಿತನನ್ನು ಆಮಂತ್ರಿಸಲಾಗುತ್ತದೆ. ಬಂಧು, ಮಿತ್ರರಿಗೆ ಸಿಹಿ ಕಳುಹಿಸಲಾಗುತ್ತದೆ ಮತ್ತು ಉತ್ಸವಾಚರಣೆಗಾಗಿ ರಾತ್ರಿಯೆಲ್ಲ ಸಂಗೀತಗೋಷ್ಠಿಗಳನ್ನು ನಡೆಸಲಾಗುತ್ತದೆ.

ಪುತ್ರಜನನ ಕುಟುಂಬದಲ್ಲಿ ಯಾವಾಗಲೂ ಅಮಿತ ಸಂತೋಷದ ಸಂದರ್ಭವಾದರೆ, ಹೆಣ್ಣು ಮಗುವಿನ ಜನನವನ್ನು ದುಃಖದಿಂದ ಸ್ವಾಗತಿಸಲಾಗುತ್ತದೆ. ತಾಯಿ ತನ್ನ ಪತಿಯ ತೋಳ್ತೆಕ್ಕೆಯಲ್ಲಿ ಬಿಕ್ಕಿ ಅಳುತ್ತಾಳೆ ಮತ್ತು ಮತ್ತೊಂದು ಮಗುವಿಗಾಗಿ ಪ್ರಾರ್ಥಿಸುತ್ತಾಳೆ. ಅಷ್ಟೇಕೆ, ಘಟನೆ ಲಕ್ಷ್ಯಕ್ಕೇ ಬರುವುದಿಲ್ಲ: ಹಾಡುವುದಿಲ್ಲ, ಸಿಹಿಯಿಲ್ಲ, ವಿಧಿಗಳಿಲ್ಲ, ಹೆಣ್ಣು ಮಗುವಿನ ಆಗಮನವನ್ನು ತಿಳಿಸುವ ಒಂದು ಪತ್ರ ಕೂಡ ಬಂಧುಗಳಿಗೆ ಹೋಗುವುದಿಲ್ಲ.

ಸಾಂಪ್ರದಾಯಿಕವಾಗಿ, ಹೆಣ್ಣು ಮಗುವಿನ ಜನನಕ್ಕೆ ರಾಜಾಸ್ಥಾನದಲ್ಲಿ ಎಂದೂ ಸ್ವಾಗತವಿಲ್ಲ. ಮಧ್ಯಯುಗದಲ್ಲಿ ಕೂಡ, ಮಗಳು ಹುಟ್ಟಿದಾಗ ಜನ ಉತ್ಸವವನ್ನಾಚರಿಸುತ್ತಿರಲಿಲ್ಲ. ತನ್ನ *Annals and Antiquities of Rajasthan* ದಲ್ಲಿ ಜೇಮ್ಸ್ ಟಾಡ್ ಹೇಳುತ್ತಾನೆ: "ಹೆಣ್ಣು ಹುಟ್ಟಿದಾಗ, ತಾಯನ್ನು ಯಾರೂ ಕಾತರದಿಂದ ವಿಚಾರಿಸುವುದಿಲ್ಲ, ಹೊಸ ಜೀವದ ಆಗಮನವನ್ನು ಯಾರೂ ಸ್ವಾಗತಿಸುವುದಿಲ್ಲ, ದೃಶ್ಯದಲ್ಲಿ ಅದೊಂದು ಅತಿಕ್ರಮ ಪ್ರವೇಶವಾಗಿ ತೋರುತ್ತದೆ; ಆ ದೃಶ್ಯವಾದರೊ ಒಮ್ಮೊಮ್ಮೆ ಜನನದ ಗಳಿಗೆಯಲ್ಲೆ ಮುಕ್ತಾಯಗೊಳ್ಳುತ್ತದೆ. ಹೆಣ್ಣುಮಗುವಿನ ಹುಟ್ಟಿನೊಡಗೂಡಿದ ಮೌನವೆ ದುಃಖವನ್ನು ಬಲವಂತವಾಗಿ ವ್ಯಕ್ತಪಡಿಸುತ್ತದೆ.[1]

ರಾಜಕುಟುಂಬಗಳಲ್ಲಿ, ಪುತ್ರ ಜನನವೊಂದು ಐತಿಹಾಸಿಕ ಘಟನೆಯಾಗಿದ್ದು, ಇಡೀ ತಿಂಗಳ ಉತ್ಸವಾಚರಣೆಯನ್ನು ಕೋರುತ್ತಿತ್ತು. ಕೆಲವರು ಮಹಾರಾಜರು ತಮ್ಮ ರಾಜಧಾನಿಯ ಜನಸಮುದಾಯಕ್ಕೆಲ್ಲ ಭೋಜನ ಏರ್ಪಡಿಸುವುದು ವಾಡಿಕೆಯಾಗಿತ್ತು. ಅದರಲ್ಲೂ ಜೈಪುರದ ಮಹಾರಾಜರು ತಮ್ಮ ಉದಾರವಾದ ಆತಿಥ್ಯಕ್ಕೆ ಹೆಸರಾಗಿದ್ದರು. ಅವರು ಇಡೀ ಜೈಪುರವನ್ನು ಆಮಂತ್ರಿಸುತ್ತಿದ್ದರು; ಪ್ರತಿಯೊಬ್ಬ ಪ್ರಜೆಯೂ ಉಣ್ಣುವ ತನಕ, ಭೋಜನಕೂಟ ದಿನಗಟ್ಟಲೆ ಮುಂದುವರಿಯುತ್ತಿತ್ತು. ಮಹಾರಾಜರ ಹುಟ್ಟುಹಬ್ಬಗಳಂದು, ರಾಜ್ಯಾದ್ಯಂತ ಎಲ್ಲ ಶಾಲಾ ಮಕ್ಕಳಿಗೆ ಸಿಹಿತಿಂಡಿಗಳನ್ನು ಹಂಚಲಾಗುತ್ತಿತ್ತು.

[1] Tod, James, *Annals and Antiquities of Rajasthan*, London, Vol.I, Pp.504-5.

*ನಾಮಕರಣ*

ನಾಮಕರಣ ವಿಧಿಯನ್ನು ಮಗು ಹುಟ್ಟಿದ ಹನ್ನೊಂದನೆಯ ದಿವಸ ಅಥವಾ ನೂರೊಂದನೆಯ ದಿವಸ ನೆರವೇರಿಸಲಾಗುತ್ತದೆ. ಅದಕ್ಕಾಗಿ ಕುಲಪುರೋಹಿತನನ್ನು ಆಮಂತ್ರಿಸಲಾಗುತ್ತದೆ. ಅವನು ವೇದಗಳಿಂದ ಮಂತ್ರಗಳನ್ನು ಪಠಿಸಿ, ಮಗುವನ್ನು ಹರಸುತ್ತಾನೆ. ಆ ದಿವಸ ಮಗುವಿಗೊಂದು ಹೆಸರು ಕೊಡಲಾಗುತ್ತದೆ. ಕುಟುಂಬದ ಮತ್ತು ಸ್ಥಳದ ಮಹಿಳೆಯರು ಸೇರಿ, ಹಾಡುಗಳನ್ನು ಹಾಡುತ್ತಾರೆ ಮತ್ತು ಮಗುವಿಗೆ ಶುಭಾಶಯಗಳನ್ನರ್ಪಿಸುತ್ತಾರೆ. ಕುಲದೇವತೆಯನ್ನೂ ಪೂಜಿಸಿ, ಪುರೋಹಿತನಿಗೆ ದಾನ ಕೊಡಲಾಗುತ್ತದೆ. ಮಧ್ಯಯುಗದಲ್ಲಿ ನಾಮಕರಣ ವಿಧಿಯನ್ನು ಹತ್ತನೆಯ ಅಥವಾ ನಲವತ್ತನೆಯ ದಿನದಂದು ನೆರವೇರಿಸುತ್ತಿದ್ದರು. ಕುಲಪುರೋಹಿತ ಹೆಸರೊಂದನ್ನಾರಿಸಿ, ಒಳ್ಳೆಯ ಮತ್ತು ಕೆಟ್ಟ ನಕ್ಷತ್ರಗಳ ವಿವರವನ್ನೊಳಗೊಂಡ ಜಾತಕವನ್ನು ತಯಾರಿಸುತ್ತಿದ್ದ.

*ಪಾನ್‌ಘಟ್ ಪೂಜನ್ (ಬಾವಿಪೂಜೆ)*

ಮಗು ಹುಟ್ಟಿದ ಕೆಲದಿನಗಳ ಬಳಿಕ ಕುಟುಂಬದ ಮತ್ತು ಸ್ಥಳದ ಮಹಿಳೆಯರು ತಾಯನ್ನು ಹತ್ತಿರದ ಬಾವಿಗೆ ಕರೆದೊಯ್ದು, ಅಲ್ಲಿ ಜಲಪೂಜೆ ಮಾಡುತ್ತಾರೆ. ಬಾವಿಯ ದಾರಿಯಲ್ಲಿ ಸ್ತ್ರೀಯರ ಮೆರವಣಿಗೆ ದೇವದೇವಿಯರ ಬಗೆಗೆ ಮೇಳಗೀತೆ ಹಾಡುತ್ತದೆ. ಇದು ವೇದೋಕ್ತವಲ್ಲದ, ಶುದ್ಧ ರಾಜಾಸ್ಥಾನಿ ಪದ್ಧತಿ. ರಾಜಾಸ್ಥಾನದಲ್ಲಿ ನೀರಿಗೆ ಕೊರತೆಯಿರುವುದರಿಂದ, ವೇದಗಳಲ್ಲಿನ ಸೂರ್ಯ ಮತ್ತು ಅಗ್ನಿಯಂತೆ ಅದು ಕೂಡ ಪೂಜಾವಸ್ತು.

*ಅನ್ನಪ್ರಾಶನ*

ಮಗುವಿಗೆ ಆರು ತಿಂಗಳು ತುಂಬಿದಾಗ, ಅನ್ನಪ್ರಾಶನ ವಿಧಿಯನ್ನು ನಡೆಸಲಾಗುತ್ತದೆ. ಈಗ ಮಗು ಆಹಾರವನ್ನು ಅರಗಿಸಿಕೊಳ್ಳಬಲ್ಲುದು. ಆದ್ದರಿಂದ ಅದಕ್ಕೆ ಅನ್ನ, ಮೊಸರು, ತುಪ್ಪ ಹಾಗೂ ಜೇನುತುಪ್ಪವನ್ನು ಮೊದಲ ಉಣಿಸಾಗಿ ಕೊಡಲಾಗುತ್ತದೆ. ಕೆಲವು ಕುಟುಂಬಗಳಲ್ಲಿ ಮಗುವಿಗೆ ಖೀರು ಕೊಡಲಾಗುತ್ತದೆ. ಈ ಸಂದರ್ಭದಲ್ಲಿ ಯಜ್ಞ ನಡೆಸಿ, ಬಂಧುಮಿತ್ರರಿಗೆ ಸಿಹಿ ಹಂಚಲಾಗುತ್ತದೆ. ಕುಟುಂಬದ ಮತ್ತು ಸ್ಥಳದ ಮಹಿಳೆಯರು ಮತ್ತೆ ಒಗ್ಗೂಡಿ, ಸಂಬಂಧಿಸಿದ ಕರ್ಮದ ಹಾಡುಗಳನ್ನು ಹಾಡುತ್ತಾರೆ. ಕುಟುಂಬದ ಸದಸ್ಯರು ಮನೆದೇವರನ್ನು ಪೂಜಿಸುತ್ತಾರೆ.

*ಝುರೂಲ ಅಥವಾ ಮುಂಡನ*

ಹುಡುಗನಿಗೆ ಎರಡು ಅಥವಾ ಮೂರು ವರ್ಷವಾದಾಗ, ಮುಂಡನಕರ್ಮವನ್ನು ನೆರವೇರಿಸಲಾಗುತ್ತದೆ. ಹೊಟ್ಟೆಯಲ್ಲಿದ್ದಾಗ ತಲೆಗೂದಲು ಅಶುದ್ಧವಾಗಿತ್ತೆಂದೂ ಆದ್ದರಿಂದ ಅದನ್ನು ಬೋಳಿಸಬೇಕೆಂದೂ ನಂಬಿಕೆ. ಒಂದು ಶುಭ ದಿವಸದಂದು

ವೇದಮಂತ್ರಘೋಷಗಳ ನಡುವೆ ಹುಡುಗನ ತಲೆ ಬೋಳಿಸಲಾಗುತ್ತದೆ. ತಲೆಯ ಮೇಲೆ ಜುಟ್ಟನ್ನು ಮಾತ್ರ ಉಳಿಸಲಾಗುತ್ತದೆ. ಕೆಲವು ಕುಟುಂಬಗಳು ಈ ವಿಧಿಯನ್ನು ತಮ್ಮ ಪೈತೃಕ ದೇವಸ್ಥಾನದಲ್ಲಿ ನೆರವೇರಿಸುತ್ತವೆ.

*ಉಪನಯನ*

ಹುಡುಗನಿಗೆ ಎಂಟು ಅಥವಾ ಒಂಬತ್ತು ವರ್ಷಗಳು ತುಂಬಿದಾಗ ಈ ವಿಧಿಯನ್ನಾಚರಿಸಲಾಗುತ್ತದೆ. ಉಪನಯನದ ಅಕ್ಷರಾರ್ಥವೆಂದರೆ, ಹುಡುಗನನ್ನು ಬ್ರಹ್ಮಚರ್ಯಜೀವನದ ದೀಕ್ಷೆಗಾಗಿ ಒಬ್ಬ ಆಚಾರ್ಯ ಅಥವಾ ಗುರುವಿನ ಬಳಿ ಗೊಯ್ಯುವುದು. ಈ ಕರ್ಮದಲ್ಲಿ, ಹುಡುಗ ಯತಿವೇಷದಲ್ಲಿರುತ್ತಾನೆ. ಅವನ ಕೈಗೊಂದು ದಂಡವನ್ನು ಕೊಡಲಾಗುತ್ತದೆ. ಯಜ್ಞೋಪವೀತವನ್ನು ಅವನ ಎಡ ಭುಜದ ಮೇಲೆ, ಓರೆಯಾಗಿ ಬಲತೋಳಿನ ಕೆಳಗೆ ತೂಗುಹಾಕಲಾಗುತ್ತದೆ; ಅಂದಿನಿಂದ ಮುಂದಕ್ಕೆ ಸದಾ ಅದನ್ನವನು ಧರಿಸಬೇಕೆಂದು ನಿರೀಕ್ಷಿಸಲಾಗುತ್ತದೆ. ಕುಲಪುರೋಹಿತ ಸೂರ್ಯನಿಗೆ – ಸವಿತುರ್ – ಉದ್ದಿಷ್ಟವಾದ, ಋಗ್ವೇದ ಸೂಕ್ತಗಳ ಅತ್ಯಂತ ಪವಿತ್ರವಾದ ಪದ್ಯವನ್ನು ಹುಡುಗನ ಕಿವಿಯಲ್ಲುಸುರುತ್ತಾನೆ. ಗಾಯತ್ರಿ ಮಂತ್ರವೆಂದು ಹೆಸರಾದ ಆ ಪದ್ಯ ಹುಡುಗನನ್ನು ಜ್ಞಾನಜಗತ್ತಿಗೆ ಪ್ರವೇಶಗೊಳಿಸುತ್ತದೆ.

ಮಧ್ಯಯುಗದಲ್ಲಿ ಉಪನಯನ ಕರ್ಮ ಬ್ರಾಹ್ಮಣರಿಗೆ ಸೀಮಿತವಾಗಿದ್ದು, ಇಂದಿಗೂ ಅದನ್ನವರು ಆಚರಿಸುತ್ತಾರೆ. ರಾಜಕ್ಷತ್ರಿಯ ಕುಟುಂಬಗಳಲ್ಲಿ ಮದುವೆಗಳ ಕಾಲದಲ್ಲಿ ಅದನ್ನು ಸಾಂಪ್ರದಾಯಿಕವಾಗಿ ಆಚರಿಸಲಾಗುತ್ತಿತ್ತು.

*ದತ್ತು*

ದತ್ತು ಪದ್ಧತಿ ರಾಜಾಸ್ಥಾನದಲ್ಲಿ ಸಾಕಷ್ಟು ಸಾಮಾನ್ಯವಾದುದು. ಗಂಡುಮಕ್ಕಳಿಲ್ಲದವರು ತಮ್ಮ ಉತ್ತರಾಧಿಕಾರ ಪರಂಪರೆಯ ಮುಂದುವರಿಕೆಗಾಗಿ ಗಂಡುಮಗುವೊಂದನ್ನು ದತ್ತು ತೆಗೆದುಕೊಳ್ಳುತ್ತಾರೆ. ರಾಜಾಸ್ಥಾನದಲ್ಲಿ ರಾಜ ಮಹಾರಾಜರು ಗಂಡುಮಕ್ಕಳನ್ನು ದತ್ತು ತೆಗೆದುಕೊಂಡು, ಭಾರತದಲ್ಲಿದ್ದ ಬ್ರಿಟಿಷ್ ವೈಸ್‌ರಾಯ್ ಸಮ್ಮತಿಯಿಂದ ಅವರನ್ನು ಉತ್ತರಾಧಿಕಾರಿಗಳನ್ನಾಗಿ ಮಾಡುವುದು ವಾಡಿಕೆಯಾಗಿತ್ತು. ಜೈಪುರದ ಬಹುತೇಕ ಮಹಾರಾಜರು ದತ್ತು ಮಕ್ಕಳು. ಜೈಪುರದ ಕಡೆಯ ಮಹಾರಾಜ ಭವಾನಿಸಿಂಗ್ ಒಂದು ಅಪವಾದ. ಅವನು ಜೈಪುರದ ದಿವಂಗತ ಮಹಾರಾಜ ಮಾನ್‌ಸಿಂಗ್‌ನ ಮೊದಲ ರಾಣಿಯ ಮಗ. ಆದರೆ ಮಹಾರಾಜ ಮಾನ್‌ಸಿಂಗನೆ ಸ್ವತಃ ದತ್ತುಪುತ್ರ; ಅಂತೆಯೆ ಅವನ ತಂದೆ ಮಹಾರಾಜ ಮಾಧೋಸಿಂಗ್.

ದತ್ತುವಿಧಿ ಬಹಳ ಸರಳ. ಕುಟಂಬದ ಹಿರಿಯರು ಮತ್ತು ಬಿರಾದರಿ (ಸಮಾಜ) ದತ್ತು ತೆಗೆದುಕೊಳ್ಳುವವನ ನಿವಾಸದಲ್ಲಿ ಸೇರುತ್ತಾರೆ. ಅವರು ಈ ವಿಧಿಯ ಪಂಚರಾಗುತ್ತಾರೆ. ಅವರ ಸಮ್ಮುಖದಲ್ಲಿ ದತ್ತು ಬಾಲಕನಿಗೆ ಕುಂಕುಮ ಹಚ್ಚಿ, ಬಣ್ಣದ

ರುಮಾಲೊಂದನ್ನು ಅವನ ತಲೆಯ ಮೇಲಿರಿಸಲಾಗುತ್ತದೆ. ದತ್ತು ಕ್ರಿಯೆಯನ್ನು ಅರ್ಥಪೂರ್ಣಗೊಳಿಸುವುದಕ್ಕಾಗಿ ಎಲ್ಲ ಹಿರಿಯ – *ಪಂಚ*–ರಿಗೆ ಸಣ್ಣ ಪ್ರಮಾಣದಲ್ಲಿ ಅಫೀಮು ಕೊಡಲಾಗುತ್ತದೆ. ಅನಂತರ, ಅವರು ದತ್ತು ತೆಗೆದುಕೊಳ್ಳುವವನೊಡನೆ ದತ್ತು ದಾಖಲೆಗೆ ಸಹಿ ಹಾಕುತ್ತಾರೆ – ವಿವಾದ ಉದ್ಭವಿಸಿದ ಪಕ್ಷದಲ್ಲಿ ತಮ್ಮನ್ನು ಸಾಕ್ಷಿಗಳನ್ನಾಗಿ ಉಲ್ಲೇಖಿಸುವುದು ಸಾಧ್ಯವಾಗಲೆಂದು. ದತ್ತು ಸ್ವೀಕಾರದ ಬಳಿಕ, ದತ್ತು ತೆಗೆದುಕೊಂಡವನ ಹೆಂಡತಿ ಗಂಡುಮಗುವಿಗೆ ಜನ್ಮವಿತ್ತರೆ, ದತ್ತುಪುತ್ರನಿಗೆ ಔರಸ ಪುತ್ರನೊಡನೆ ಸಮಾನ ಹಕ್ಕುಗಳಿರುತ್ತವೆ.

## ವಿವಾಹ

ರಾಜಾಸ್ಥಾನಿಯ ಬದುಕಿನ ಹದಿನಾರು ಸಂಸ್ಕಾರಗಳಲ್ಲಿ ಮದುವೆ ಅತ್ಯಂತ ಪವಿತ್ರ ಹಾಗೂ ಪ್ರಮುಖವಾದುದು. ಮದುವೆಯಾಗುವುದು ಪ್ರತಿಯೊಬ್ಬ ದೃಢಕಾಯ ವ್ಯಕ್ತಿಯ ಧಾರ್ಮಿಕ ಮತ್ತು ಸಾಮಾಜಿಕ ಹೊಣೆಗಾರಿಕೆ – ಅವನು ಅಥವಾ ಅವಳು ಬ್ರಹ್ಮಚರ್ಯವ್ರತವನ್ನು ಕೈಕೊಳ್ಳದಿದ್ದ ಪಕ್ಷದಲ್ಲಿ.

ಮದುವೆಯ ಸಾಮಾನ್ಯ ಬಗೆಯೆಂದರೆ, ಒಂದೇ ಜಾತಿಯೊಳಗೆ ತಂದೆತಾಯಿ ಏರ್ಪಡಿಸುವಂಥದು. ಒಬ್ಬ ಭಟ್ಟ, ಚಾರಣ ಅಥವಾ ಪುರೋಹಿತನ ಪ್ರಭಾವದಿಂದ ಮದುವೆಗಳು ವ್ಯವಸ್ಥಿತವಾಗುತ್ತವೆ. ಕುಲಪುರೋಹಿತ ಹುಡುಗನ ಮತ್ತು ಹುಡುಗಿಯ ಜಾತಕಗಳನ್ನು ಹೋಲಿಸಿ ನೋಡುತ್ತಾನೆ; ಅವು ತಾಳೆಯಾದರೆ, ಮದುವೆ ನಿಷ್ಕರ್ಷೆಯಾಗುತ್ತದೆ.

ಮದುವೆಗೆ ನಿಗದಿತ ವಯಸ್ಸಿಲ್ಲ; ಆದರೆ ಸಾಮಾನ್ಯವಾಗಿ ನಗರ ಪ್ರದೇಶಗಳ ಹುಡುಗಿಯರಿಗೆ ಹದಿನೆಂಟರ ವಯಸ್ಸಿನಲ್ಲಿ ಮತ್ತು ಹುಡುಗರಿಗೆ ಇಪ್ಪತ್ತೊಂದರ ವಯಸ್ಸಿನಲ್ಲಿ ಮದುವೆ ಮಾಡುತ್ತಾರೆ. ಕಾನೂನು ನಿಷೇಧಿಸಿದ್ದರೂ, ಗ್ರಾಮೀಣ ಪ್ರದೇಶಗಳಲ್ಲಿ, ಅದರಲ್ಲೂ ಬುಡಕಟ್ಟು ಪ್ರದೇಶಗಳಲ್ಲಿ ಶಿಶುವಿವಾಹಗಳು ಈಗಲೂ ಬಹು ಸಾಮಾನ್ಯ. ನಿದರ್ಶನಕ್ಕೆ, ಸಹ್ರಿಯರಲ್ಲಿ ಮಗು ಇನ್ನೂ ತಾಯಿ ಹೊಟ್ಟೆಯಲ್ಲಿರುವಾಗಲೆ ಮದುವೆ ನಿಷ್ಕರ್ಷೆಗೊಳ್ಳುತ್ತದೆ. 1961ರ ಮೇ ತಿಂಗಳಲ್ಲಿ 48,000 ದಷ್ಟು ಇಂಥ ಮದುವೆಗಳು ಸಿರೋಹಿ ಜಿಲ್ಲೆಯೊಂದರಲ್ಲೆ ನಡೆದುವು; ಮದುವೆಯಾದವರಲ್ಲಿ ಬಹುಮಂದಿ ಮೂರಕ್ಕೂ ಕೆಳಗಿನ ವಯಸ್ಸಿನವರು.

ಮಧ್ಯಯುಗದಲ್ಲಿ ಕೂಡ ಶಿಶುವಿವಾಹಗಳು ಸಾಕಷ್ಟು ಸಾಮಾನ್ಯವಾಗಿದ್ದುವು. ಉದಯಪುರದ ಕುಂವರ್ ವಸಂತ ಸಿಂಘ್ ಜೈಸಲ್ಮೇರಿನ ರಾಜಪುತ್ರಿಯನ್ನು 1619ರಲ್ಲಿ ವರಿಸಿದಾಗ, ಅವನಿಗೆ ಹನ್ನೆರಡು ವರ್ಷ ವಯಸ್ಸು. ಮರು ಮತ್ತು ಧೋಲಾ ವಿವಾಹವಾದಾಗ ಅವರಿಗೆ ಕ್ರಮವಾಗಿ ಒಂದೂವರೆ ವರ್ಷ ಮತ್ತು ಮೂರುವರ್ಷ ವಯಸ್ಸು. ಪಂಜಾಬಿನಲ್ಲಿ ಹೀರ್–ರಂಝಾ ಐತಿಹ್ಯದಂತೆ ಧೋಲಾ–ಮರು ಐತಿಹ್ಯ ರಾಜಾಸ್ಥಾನದಲ್ಲಿ ಜನಪ್ರಿಯವಾಗಿದೆ.

### *ಅಂತರಜಾತೀಯ ವಿವಾಹ*

ರಾಜಾಸ್ಥಾನದಲ್ಲಿ ಅಂತರಜಾತೀಯ ವಿವಾಹಗಳು ಬಹಳ ಪ್ರಚಲಿತವಲ್ಲ; ಆದರೆ ಅವು ಹೆಚ್ಚು ಹೆಚ್ಚು ಜನಪ್ರಿಯ ಹಾಗೂ ಸ್ವೀಕಾರ್ಯವಾಗುತ್ತಿವೆ. ಜಾತಿಯ ಗೋಡೆಗಳನ್ನೊಡೆಯ ಬಯಸುವ ಸುಶಿಕ್ಷಿತರಲ್ಲಿ ಅಂಥ ಮದುವೆಗಳು ಬಹಳ ವಿರಳವೇನಲ್ಲ. ಇನ್ನೊಂದು ಕಡೆ, ಅವಕ್ಕೆ ಸ್ವಾಗತವಿದೆ. ಕೆಲವೊಮ್ಮೆ ಮನ್ಮಥನ ಪಾತ್ರವೂ ಉಂಟು. ಪ್ರೇಮವಿವಾಹಗಳು ಬಹುತೇಕ ಅಂತರ್ಜಾತೀಯ ವಿವಾಹ ಗಳು.

ಮಧ್ಯಯುಗದಲ್ಲಿ ಕೂಡ ಅಂತರ್ಜಾತೀಯ ವಿವಾಹಗಳು ನಡೆಯುತ್ತಿದ್ದುವು. ಗುಹ್ಲಿ ವಂಶದ ಶಕ್ತಿಕುಮಾರ್ ಹರಿಯಾದೇವಿಯೆಂಬ ಹೂಣ ಬಾಲೆಯನ್ನು ವರಿಸಿದ. (ಕ್ರಿ. ಶ. 977ರ ಆತ್ಪುರ್ ಶಾಸನ). ಮೇವಾರದ ಮಹಾರಾಣ ಮೊಕಲ್‌ನ ಪುತ್ರರಾದ ಚಚ ಮತ್ತು ಮೇರ ಬಡಗಿಜಾತಿಯ ಸ್ತ್ರೀಯಲ್ಲಿ ಜನಿಸಿದವರು. ಭಿನ್ಮಲ್‌ದ ಮುಖಂಡ ಬ್ರಾಹ್ಮಣ ಹುಡುಗಿಯೊಬ್ಬಳನ್ನು ಮದುವೆಯಾದ. ರಜಪೂತರ ಅಂತಃಪುರಗಳಲ್ಲಿ ವಿವಿಧ ಜಾತಿ, ಕೋಮುಗಳಿಗೆ ಸೇರಿದ ನೂರಾರು ಮಂದಿ ಸ್ತ್ರೀಯರು ಶಾಂತಿಯಿಂದ ಒಡಬಾಳುತ್ತಿದ್ದರು. ಈ ಹೆಂಗಸರನ್ನು ರಾಣಿಯರೆಂದು ಒಪ್ಪುತ್ತಿರಲಿಲ್ಲ; ಅವರು *ಖಾವಸನ್‌*ಗಳು ಮತ್ತು *ಪರದಯತನ್‌*ಗಳು (ಇಟ್ಟುಕೊಂಡವರು) ಎನಿಸಿಕೊಂಡಿದ್ದರು. ಅಂತಃಪುರದಲ್ಲಿ ಅವರಿಗೆ ಪ್ರತ್ಯೇಕವಾದ ಅಂತಸ್ತು ಇತ್ತು.

ಆ ಕಾಲದಲ್ಲಿ ಅಂತರ್ಜಾತೀಯ ವಿವಾಹಗಳಿಗೆ ಎರಡು ಕಾರಣಗಳಿದ್ದುವು. ಮೊದಲನೆಯದಾಗಿ ಆಳರಸರು ಮತ್ತು ಶ್ರೀಮಂತರು ವಿಶೇಷ ರಾಜಕೀಯ ಮತ್ತು ಸೈನಿಕ ಪ್ರಭಾವವುಳ್ಳ, ನಿರ್ದಿಷ್ಟ ಜನವರ್ಗವನ್ನು ಒಲಿಸಿಕೊಳ್ಳುವುದಕ್ಕಾಗಿ ಕೆಲವೊಮ್ಮೆ ಕೆಳಜಾತಿಯ ಸ್ತ್ರೀಯರನ್ನು ವರಿಸುತ್ತಿದ್ದರು. ಎರಡನೆಯದಾಗಿ, ವರದಕ್ಷಿಣೆ ಪದ್ಧತಿ ಮತ್ತು ವಿಧವಾವಸ್ಥೆ ಬಹುಪಾಲು ಅಂತರ್ಜಾತೀಯ ಸಂಬಂಧಗಳಿಗೆ ಕಾರಣವಾಗಿದ್ದುವು. ಈ ಎರಡು ಕಾರಣಗಳಲ್ಲದೆ, ವೈಯಕ್ತಿಕ ಅಂಶವೂ ಇತ್ತು. ಕೆಲವರು ಪ್ರೇಮಪರವಶರಾಗಿ, ಮದುವೆಯ ಉದ್ದೇಶದಿಂದ ಜಾತಿಯ ಗೋಡೆಗಳನ್ನೆಲ್ಲ ಒಡೆದುಹಾಕುತ್ತಿದ್ದರು.

### *ಅಂತರ್‌ಮತೀಯ ವಿವಾಹಗಳು*

ಮಧ್ಯಕಾಲದಲ್ಲಿ, ಅಂತರ್ಜಾತೀಯ ವಿವಾಹಗಳು ಮಾತ್ರವಲ್ಲ, ಅಂತರ್ಮತೀಯ ವಿವಾಹಗಳೂ ದಾಖಲಾಗಿವೆ. ರಾಜಾಸ್ಥಾನಕ್ಕಿದ್ದ ಮುಘಲ್ ಸಂಪರ್ಕ ಈ ಅಂತರ್ಮತೀಯ ವಿವಾಹಸಂಬಂಧಗಳಿಗೆ ಬಹುಮಟ್ಟಿಗೆ ಕಾರಣವಾಗಿತ್ತು; ಆ ಸಂಬಂಧಗಳು ಅಕ್ಬರನ ಕಾಲದಲ್ಲಿ ಮೊದಲಾಗಿ, ಫರ್ರುಕ್ಷಿಯರ್ ಆಳಿಕೆಯವರೆಗೆ ಮುಂದುವರಿದುವು. ಜೈಪುರದ ರಾಜಾ ಭರ್ಮಲ್ ಅಕ್ಬರನಿಗೆ ಮಾರ್ಚ್ 1562ರಲ್ಲಿ ತನ್ನ ಮಗಳನ್ನು ಮದುವೆ ಮಾಡಿಕೊಟ್ಟ ಮೊದಲ ರಜಪೂತ ದೊರೆ; ಆದರಿಂದ ಆವನ ಸಂಬಂಧ ತೈಮೂರ್ ಮನೆತನದೊಡನೆ ಗಟ್ಟಿಯಾಯಿತು. ಇತರ ರಜಪೂತ

ದೊರೆಗಳು ಅವನ್ನನ್ನು ಅನುಸರಿಸಿ, ತಮ್ಮ ಹೆಣ್ಣು ಮಕ್ಕಳನ್ನು ಮುಘಲ್ ದೊರೆಗಳಿಗೆ ಮದುವೆ ಮಾಡಿಕೊಟ್ಟರು. ಜೈಸಲ್ಮೇರ್, ಬಿಕನೀರ್ ಮತ್ತು ಕೋತದ ರಜಪೂತ ರಾಜಪುತ್ರಿಯರು ಮುಘಲ್ ಚಕ್ರವರ್ತಿಗಳೊಡನೆ ಮತ್ತು ಅವರ ಮಕ್ಕಳೊಡನೆ ಮದುವೆಗೊಂಡರು. ಜಹಾಂಗೀರ್ ಅಂಬರನ ರಾಜಪುತ್ರಿ ಮಾನಬಾಯಿಯನ್ನು 1585ರಲ್ಲಿ ಮತ್ತು ಮಾಹಾರಾಜ ಉದಯಸಿಂಹನ ಮಗಳು ಜೋಧಾಬಾಯಿಯನ್ನು 1586ರಲ್ಲಿ ವರಿಸಿದ; ತರುವಾಯ ಬಿಕನೀರ್‌ನ ರಾಯಿಸಿಂಹನ ಮಗಳನ್ನು ಕೂಡ. ತನ್ನ ಉಚ್ಛ್ರಾಯಸ್ಥಿತಿಯಲ್ಲಿ ಅವನು ರಾಜಾ ಮಾನ್‌ಸಿಂಹನ ಹಿರಿಯಮಗನಾದ ಜಗತ್‌ಸಿಂಹನ ಮಗಳನ್ನು ಮದುವೆಯಾದ. ಜೈಸಲ್ಮೇರ್‌ನ ರಾವಲ್ ಭೀಮನ ಮಗಳನ್ನು ಕೂಡ ಅವನು ವರಿಸಿ, ಮಲಿಕ ಜಾನ್ ಎಂಬ ಬಿರುದಿನಿಂದ ಅವಳನ್ನು ಕರೆದ. ಮಾರ್ವಾರದ ದೊರೆ ಅಜಿತ್‌ಸಿಂಹ ತನ್ನ ಮಗಳಾದ ಬಾಯಿ ಇಂದ್ರ ಕುವರ್‌ಳನ್ನು ಚಕ್ರವರ್ತಿ ಫರ್ರುಕ್ಸಿಯರ್‌ಗೆ ಕೊಟ್ಟಿದ್ದ.

ಅಂತರ್‌ಮತೀಯ ಮದುವೆಗಳು ಮಧ್ಯಕಾಲದಲ್ಲಿ ಮುಘಲರ ರಾಜಕೀಯ ಒತ್ತಡದ ಫಲಗಳಾಗಿದ್ದುವು. ಅವಕ್ಕೆ ಎಂದೂ ಜನರ ಸಮ್ಮತಿಯಿರಲಿಲ್ಲ. ಅವರಿಗೆ ಹಿಂದೂ – ಮುಸ್ಲಿಂ ವಿವಾಹಗಳ ಕಲ್ಪನೆಯೆ ಅಸಹ್ಯವಾಗಿತ್ತು. ಬಿಕನೀರ್‌ನ ಕವಿ ಪೃಥ್ವೀರಾಜ್ ಮೇಲಿಂದ ಮೇಲೆ ಉದ್ಧೃತವಾಗುವ ತನ್ನೊಂದು ಕವನದಲ್ಲಿ ಜನತೆಯ ಭಾವನೆಗಳನ್ನು ಪ್ರತಿಧ್ವನಿಸಿದ: "ಜಗತ್ತಿನ ಈ ಬಜಾರಿನಲ್ಲಿ, ನಾಚಿಕೆಗೆಟ್ಟ ಸ್ತ್ರೀಯರು ಮತ್ತು ಮಾನಗೆಟ್ಟ ಪುರುಷರು ಗಿರಾಕಿ ಅಕ್ಬರ್‌ನೊಡನೆ ಹೇರಳವಾಗಿದ್ದಾರೆ. ಇಂಥ ಸಹವಾಸದಲ್ಲಿ ಪ್ರತಾಪ್ ಮಾಡುವುದೇನು ? ಇತರ ರಜಪೂತರು ತಮ್ಮನ್ನು ತಾವು ಗುಲಾಮಗಿರಿಗೆ ಮಾರಿಕೊಂಡಿದ್ದಾರೆ; ಆದರೆ ತನ್ನ ಪೂರ್ವಿಕರ ಮಾನವನ್ನು ಮನಸ್ಸಿನಲ್ಲಿಟ್ಟುಕೊಂಡಿರುವ ಪ್ರತಾಪ್ ತನ್ನ ಬಾವುಟ ಹಾರಾಡುತ್ತಿರುವಂತೆ ನೋಡಿಕೊಂಡಿದ್ದಾನೆ."

ಅಂತರ್‌ಮತೀಯ ವಿವಾಹಗಳ ವಿಷಯವನ್ನು ರಾಜಾಸ್ಥಾನದಲ್ಲಿ ಆಧುನಿಕ ಕಾಲದಲ್ಲಿ ಯಾರೂ ಕೇಳಿಲ್ಲ, ಕೆಲವು ಅಪವಾದಗಳನ್ನು ಬಿಟ್ಟರೆ.

### ಬಹುಪತ್ನೀತ್ವ

ಅಂತರ್ಜಾತೀಯ ಮತ್ತು ಅಂತರ್ಮತೀಯ ಮದುವೆಗಳ ಜೊತೆಗೆ, ಬಹುಪತ್ನೀತ್ವ ರಾಜಾಸ್ಥಾನದ ಮತ್ತೊಂದು ಆಸ್ತಿ. ಕಾನೂನು ನಿಷೇಧಿಸಿದ್ದರೂ, ಬಹುಪತ್ನೀತ್ವ ರಜಪೂತರು, ಭಿಲ್ಲರು, ಮೀನರು ಮತ್ತು ಇತರ ಬುಡಕಟ್ಟು ಸಮಾಜಗಳಲ್ಲಿ ಸಾಕಷ್ಟು ಪ್ರಚುರವಾಗಿದೆ. ಅವರು ಈಗಲೂ ಅದನ್ನೊಂದು ಅಂತಸ್ತಿನ ಚಿಹ್ನೆಯೆಂದು ಪರಿಗಣಿಸುತ್ತಾರೆ. ಜಾಗೀರ್‌ದಾರರು ಮತ್ತು ರಜಪೂತರು ಸಾಂಪ್ರದಾಯಿಕವಾಗಿ ಬಹುಪತ್ನೀ ಪದ್ಧತಿಯವರು, ಮಧ್ಯಯುಗದಲ್ಲಿ ಹೆಚ್ಚು ಕಡಿಮೆ ಎಲ ರಜಪೂತ ದೊರೆಗಳಿಗೂ ಸರಾಸರಿ ಒಂಬತ್ತುಮಂದಿ ಪತ್ನಿಯರಿರುತ್ತಿದ್ದರು. ಮಹಾರಾಣಾ ಪ್ರತಾಪನಿಗೆ (1540-79) ಹನ್ನೊಂದು ಮಂದಿ, ಬಿಕನೀರ್‌ನ ರಾಯಿ ಸಿಂಹನಿಗೆ (1594-1612) ಆರುಮಂದಿ ಮತ್ತು ಜೋಧ್‌ಪುರದ ಅಭಯ್

ಸಿಂಹನಿಗೆ (1724-49) ಹನ್ನೆರಡು ಮಂದಿ ಪತ್ನಿಯರಿದ್ದರು. ಆದರೆ ಜೈಪುರದ ರಾಜಾ ಮಾನಸಿಂಹನಿಗೆ 1500 ಮಂದಿ ಪತ್ನಿಯರಿದ್ದು ಅವನು ಎಲ್ಲ ದಾಖಲೆಗಳನ್ನೂ ಮೀರಿಸಿದ. 700 ಪತ್ನಿಯರಿದ್ದ ಜೈಪುರದ ಮಹಾರಾಜ ಜೈಸಿಂಹ ಅವನನ್ನು ನಿಕಟವಾಗಿ ಅನುಸರಿಸಿದ. ಈ ದೊರೆಗಳ ಮುಖ್ಯ ಪತ್ನಿಗೆ ಪಟ್ರಾಣಿ ಎಂದು ಹೆಸರು. ಉತ್ತರಾಧಿಕಾರಿಯ ತಾಯಿಯಾಗುವ, ಮನೆಯೊಡತಿಯಾಗುವ ಹಕ್ಕು ಆವಳಿಗಿತ್ತು.

ಪತ್ನಿಯರನ್ನಲ್ಲದೆ ನೂರಾರು ಮಂದಿ ಇತರ ಸ್ತ್ರೀಯರನ್ನು ಅಂತಃಪುರಗಳಲ್ಲಿ ಟ್ಟುಕೊಳ್ಳುತ್ತಿದ್ದರು, ರಜಪೂತ ದೊರೆಗಳು. ದೊಡ್ಡ ಅಂತಃಪುರ ಶ್ರೀಮಂತಿಕೆಯ ಹಕ್ಕು, ಮುಂದಾಳುಗಳ ವಿಶೇಷಾಧಿಕಾರ ಹಾಗೂ ಯುಗದ ಷೋಕಿ ಯಾಗಿತ್ತು. 1949ರಲ್ಲಿ, ಸ್ವಾತಂತ್ರ್ಯ ಪ್ರಾಪ್ತಿಯನಂತರ, 60,000ದಷ್ಟು ಸ್ತ್ರೀಯರನ್ನು ಈ ಅಂತಃಪುರಗಳಿಂದ ಬಿಡುಗಡೆಗೊಳಿಸಲಾಯಿತು ಮತ್ತು ಅವರು ಇಷ್ಟಪಟ್ಟ ವರನ್ನು ವರಿಸಿ ಹೊಸ ಬದುಕು ಪ್ರಾರಂಭಿಸುವಂತೆ ಪ್ರೋತ್ಸಾಹಿಸಲಾಯಿತು.

## *ವಿವಾಹ ವಿಧಿಗಳು*

ರಾಜಾಸ್ಥಾನದಲ್ಲಿನ ವಿವಾಹ ವಿಧಿಗಳು ಬಹುಮಟ್ಟಿಗೆ ಉಳಿದ ಉತ್ತರಭಾರತದ ವಿಧಿಗಳೇ ಆಗಿವೆ. ನಿಶ್ಚಿತಾರ್ಥದಿಂದ ಮದುವೆಯವರೆಗೆ ವಿಧಿಗಳ ದೀರ್ಘಪರಂಪರೆಯೆ ಇದೆ. ಅವುಗಳಲ್ಲಿ ಅತ್ಯಂತ ಮುಖ್ಯವಾದುದೆಂದರೆ, *ಸಗಾಯ್*, *ತಿಲಕ್*, *ತೋರಣ–ಬಂಧನ*, *ಸಪ್ತಪದಿ* ಮತ್ತು *ಗೌನ*. ವಧು ಮತ್ತು ವರ ಇಬ್ಬರ ಮನೆಗಳಲ್ಲೂ ಹಲವಾರು ಕಿರಿಯ ವಿಧಿಗಳಿರುತ್ತವೆ; ಅವುಗಳನ್ನು ಗ್ರಾಮೀಣ ಪ್ರದೇಶಗಳಲ್ಲಿ ಸಾಂಪ್ರದಾಯಿಕವಾಗಿ ಆಚರಿಸಲಾಗುತ್ತದೆ. ಆದರೂ ನಗರ ಪ್ರದೇಶಗಳ ಸುಶಿಕ್ಷಿತ ಮಂದಿ ಈ ತೊಡಕಿನ ಆಚರಣೆಗಳನ್ನು ಕ್ರಮೇಣ ಬಿಡುತ್ತಿದ್ದಾರೆ.

## *ಸಗಾಯ್ (ನಿಶ್ಚಿತಾರ್ಥ)*

ನಿಶ್ಚಿತಾರ್ಥವಿಧಿ ಸಂಕ್ಷಿಪ್ತ ಮತ್ತು ಸರಳ. ಜಾತಕಗಳು ಹೊಂದಿಕೊಳ್ಳುತ್ತವೆ ಎಂದು ಕುಲಪುರೋಹಿತ ಹುಡುಗ, ಹುಡುಗಿಯರ ತಂದೆತಾಯಿಗಳಿಗೆ ತಿಳಿಸಿದಾಗ, ಮದುವೆ ನಿಶ್ಚಿತವಾಗುತ್ತದೆ. ಅನಂತರ ಹುಡುಗಿಯ ತಂದೆ ಹುಡುಗನ ತಂದೆಗೆ ಒಂದು ತೆಂಗಿನಕಾಯಿ, ಒಂದು ಬಣ್ಣದ ರುಮಾಲು, ಬಟ್ಟೆಗಳು, ಒಡವೆಗಳು, ಒಣಗಿದ ಹಣ್ಣುಗಳು, ಸಿಹಿತಿಂಡಿ, ಪಾನ್ ಇತ್ಯಾದಿಗಳನ್ನು ಕಳುಹಿಸುತ್ತಾನೆ. ಆದರೂ ಕೆಲವು ಕುಟುಂಬ ಗಳಲ್ಲಿ ನಿಶ್ಚಿತಾರ್ಥ ವಿಧಿ ಕೇವಲ ಒಂದು ತೆಂಗಿನಕಾಯನ್ನು ಹಾಗೂ ರೂ. 1–25ನ್ನು ಕೊಡುವುದರ ಮೂಲಕ ನೆರವೇರುತ್ತದೆ; ತೆಂಗಿನಕಾಯಿ ನಿಶ್ಚಿತಾರ್ಥದ ಪ್ರಮುಖ ಸಂಕೇತ.

ಮಧ್ಯಯುಗದಲ್ಲಿ ಕೂಡ, ಈ ವಿಧಿಯನ್ನು ವರನಿಗೆ ತೆಂಗಿನಕಾಯಿ ಸಮರ್ಪಿಸುವುದರ ಮೂಲಕ ಆಚರಿಸಲಾಗುತ್ತಿತ್ತು. ವಾಸ್ತವವಾಗಿ, ತೆಂಗಿನಕಾಯಿ ಸಮರ್ಪಣೆ ಎಷ್ಟು ಮುಖ್ಯವಾಗಿತ್ತೆಂದರೆ, ಐನೂರು ವರ್ಷಗಳ ಹಿಂದೆ ತೆಂಗಿನ ಕಾಯನ್ನು ಕುರಿತ ಕ್ಷುಲ್ಲಕ ತಮಾಷೆ ಮಾತೊಂದು ಸಿಂಹಾಸನದ ಜ್ಯೇಷ್ಠಾಧಿಕಾರದ

ಹಕ್ಕನ್ನು ಸಂಶಯಾಸ್ಪದಗೊಳಿಸಿ, ಮೊಘಲರ ಮತ್ತು ಮರಾಠರ ಶಸ್ತ್ರಗಳಿಗಿಂತ ವಿನಾಶಕಾರಿಯಾಗಿ ಪರಿಣಮಿಸಿತು.

ಹದಿನಾಲ್ಕನೆಯ ಶತಮಾನದ ಕಡೆಯ ಪಾದದಲ್ಲಿ, ರಾಣಾ ಲಖ (1373-98) ಮೇವಾರವನ್ನು ಚಿತ್ತೂರಿನ ಸಿಂಹಾಸನದಿಂದ ಆಳುತ್ತಿದ್ದ. ಅವನ ಹಿರಿಯ ಮಗ ಮತ್ತು ಉತ್ತರಾಧಿಕಾರಿ ಚೊಂದಜಿಯ ಮದುವೆ ಮಾರ್ವಾರದ ರಾಜ ರಾಣಮಲ್‌ನ ಮಗಳೊಡನೆ ನಿಶ್ಚಯವಾಯಿತು. ಒಂದು ಶುಭದಿವಸ ಮಾರ್ವಾರದ ರಾಯಭಾರಿ ವಿಧಿವಿಹಿತ ತೆಂಗಿನಕಾಯೊಡನೆ ಮೇವಾರದ ದರ್ಬಾರಿಗೆ ಬಂದ. ವಯಸ್ಸಾಗಿದ್ದು, ನಿವೃತ್ತಿಯ ಹೊಸ್ತಿಲಲ್ಲಿದ್ದ ರಾಣಾ ಲಖ ಅವನನ್ನು ಸೌಜನ್ಯದಿಂದ ಸ್ವಾಗತಿಸಿದ. ಚೊಂದಜಿ ಬರುವುದು ಕೆಲವು ನಿಮಿಷಗಳಷ್ಟು ತಡವಾಯಿತು. ಅವನು ಬೇಗ ಬಂದು ನಿಶ್ಚಿತಾರ್ಥದ ಸಂಕೇತವಾದ ತೆಂಗಿನಕಾಯನ್ನು ಸ್ವೀಕರಿಸುವನೆಂದು ರಾಣಾ ಲಖ ನುಡಿದ. ಚೊಂದಜಿ ಬಂದಾಗ, ರಾಣ ತನ್ನ ಭಾರಿ ಮೀಸೆಯನ್ನು ತಿರುವುತ್ತ ತಮಾಷೆಗೆ ಹೇಳಿದ: "ಇಂಥ ಆಟಿಕೆಗಳನ್ನು ನನ್ನಂಥ ಮುದುಕನಿಗೆ ನೀವು ಕಳುಹಿಸುವುದಿಲ್ಲವೆಂದು ಭಾವಿಸುತ್ತೇನೆ". ಈ ಚಮತ್ಕಾರೋಕ್ತಿಗೆ ಎಲ್ಲರೂ ಚಪ್ಪಾಳೆ ತಟ್ಟಿದರು; ರಾಣಾ ಅದನ್ನು ದರ್ಬಾರಿನಲ್ಲಿ ಅನೇಕ ಸಲ ಪುನರಾವರ್ತಿಸಿದ. ಚಾತುರ್ಯಕ್ಕೆ ಸೂಕ್ಷ್ಮವು ಬಲಿಯಾದುದರಿಂದ ಚೊಂದಜಿಗೆ ತುಂಬ ನೋವಾಯಿತು. ಅವನು ನಿಶ್ಚಿತಾರ್ಥದ ಸಂಕೇತವಾದ ತೆಂಗಿನಕಾಯನ್ನು ನಿರಾಕರಿಸಿದ. ಮಾರ್ವಾರದ ರಾಜನಿಗೆ ಭಾರಿ ಅವಮಾನವಾಗದಂತೆ ತೆಂಗಿನಕಾಯನ್ನು ಮರಳಿಸುವುದು ಶಕ್ಯವಿಲ್ಲದ್ದರಿಂದ, ಮುದಿ ರಾಜ ತನ್ನ ಮಗನ ಹಟಮಾರಿತನದಿಂದ ಕೆರಳಿ, ಅದನ್ನು ತಾನೆ ಪರಿಗ್ರಹಿಸುವುದಕ್ಕೆ ಒಪ್ಪಿದ; ಮಾರ್ವಾರದ ರಾಜಕುಮಾರಿಯೊಡನೆ ರಾಣನ ಮದುವೆಯಿಂದ ಮಗ ಹುಟ್ಟಿದರೆ, ಚೊಂದಜಿ ಮೇವಾರದ ಸಿಂಹಾಸನದ ಆಜನ್ಮಸಿದ್ಧ ಹಕ್ಕನ್ನು ಬಿಟ್ಟುಕೊಡಬೇಕೆಂಬುದು ಷರತ್ತು. ತನ್ನ ತಂದೆಯ ಬಯಕೆಯನ್ನು ಈಡೇರಿಸುವುದಾಗಿ ಚೊಂದಜಿ ಪ್ರತಿಜ್ಞೆ ಮಾಡಿದ. ಈ ಮದುವೆಯ ಫಲವೇ ಮೊಕುಲ್‌ಜಿ; ಅವನ ವಂಶಜರು ಶತಮಾನಗಳ ಕಾಲ ಮೇವಾರವನ್ನಾಳಿದ್ದಾರೆ. ಮೇವಾರದ ಈಗಿನ ರಾಣ ಮೊಕುಲ್‌ಜಿಯ ನೇರ ವಂಶಸ್ಥ. ಚೊಂದಜಿಯ ವಂಶಸ್ಥರು ಮೇವಾರದ ಮಹಾರಾಣನ ಕೈಕೆಳಗೆ ಕೇವಲ ಜಾಗೀರ್‌ದಾರರಾಗಿದ್ದಾರೆ.

*ತಿಲಕ*

ಮುಂದಿನ ಅತ್ಯಂತ ಮುಖ್ಯ ವಿಧಿಯೆಂದರೆ ತಿಲಕ. ಒಂದು ಶುಭದಿವಸ ವಧುವಿನ ಕುಟುಂಬದ ಪ್ರತಿನಿಧಿಗಳು ವರನ ಮನೆಗೆ ಬಂದು 'ತಿಲಕ್' ವಿಧಿಯನ್ನು ನೆರವೇರಿಸುತ್ತಾರೆ. ಅವರು ವರನ ಹಣೆಗೆ ಕುಂಕುಮ ಹಚ್ಚುತ್ತಾರೆ ಮತ್ತು ನಗದು, ಬಟ್ಟೆಗಳು ಹಾಗೂ ಸಿಹಿತಿಂಡಿಗಳನ್ನು ವಧುವಿನ ತಂದೆಯ ಉಡುಗೊರೆಗಳನ್ನಾಗಿ ಅರ್ಪಿಸುತ್ತಾರೆ. ವರನ ಸಂಬಂಧಿಗಳು ಮತ್ತು ಸ್ನೇಹಿತರು ಈ ವಿಧಿಯನ್ನು ನೋಡಲು ಸೇರುತ್ತಾರೆ. ಅನಂತರ, ಅವರಿಗೆ ಸಂದರ್ಭದ ನೆನಪಾಗಿ ಭಾರಿ ಔತಣ ಕೊಡಲಾಗುತ್ತದೆ.

ಕೆಲವು ಜಾತಿ ಮತ್ತು ಕೋಮುಗಳಲ್ಲಿ ತಿಲಕ ವಿಧಿಯ ಪ್ರೇಕ್ಷಕರಿಗೆ ಸಣ್ಣ ಪ್ರಮಾಣದಲ್ಲಿ ಅಫೀಮನ್ನು ವಿತರಿಸಲಾಗುತ್ತದೆ. ಒಪ್ಪಂದ ಮಾಡಿಕೊಳ್ಳುವ ಪಕ್ಷಗಳ ನಡುವೆ ಯಾವುದೋ ಅನಿರೀಕ್ಷಿತ ಘರ್ಷಣೆಯಿಂದಾಗಿ ಮದುವೆಯ ವಿಧಿ ನೆರವೇರದಿದ್ದಾಗ, ಅಫೀಮು ತೆಗೆದುಕೊಂಡವರು ಸಾಕ್ಷ್ಯ ನೀಡಬೇಕೆಂದು ನಿರೀಕ್ಷಿಸಲಾಗುತ್ತದೆ.

ಮಧ್ಯಯುಗದಲ್ಲಿ ಕೂಡ, ಒಂದು ಪ್ರಮುಖ ವಿವಾಹಪೂರ್ವಕ ವಿಧಿಯಾಗಿ ತಿಲಕ ಅಥವಾ ನಿಶ್ಚಿತಾರ್ಥದ ಉಡುಗೊರೆಗಳನ್ನು ಅಂತಿಮ ಜೋಡಿ ನಿಶ್ಚಯದ ಸಂಕೇತವಾಗಿ ವರನ ಮನೆಗೆ ವಧುವಿನ ತಂದೆಯಿಂದ ನಿಯೋಜಿತರಾದ ಯಾರಾದರೊಬ್ಬರ ಮೂಲಕ ಕಳುಹಿಸಲಾಗುತ್ತಿತ್ತು.

*ತಿಲಕ*ದ ಮಟ್ಟ ಸಂಬಂಧಪಟ್ಟ ವ್ಯಕ್ತಿಗಳ ಸಂಪತ್ತು, ಅಂತಸ್ತುಗಳಿಗೆ ತಕ್ಕಂತೆ ವ್ಯತ್ಯಸ್ತವಾಗುತ್ತದೆ. ಕ್ರಿ.ಶ. 1776ರಲ್ಲಿ ಜೋಧ್‌ಪುರದ ಕುವರ್ ತೇಜ್‌ಸಿಂಹನಿಗೆ ಮಾಧೋ ಸಿಂಹ ಕಳುಹಿಸಿದ ಕಾಣಿಕೆಗಳಲ್ಲಿ ಇವು ಸೇರಿದ್ದುವು:

> ಪ್ರತಿಯೊಂದೂ ಬೆಳ್ಳಿ ಅಥವಾ ಚಿನ್ನದ ಹಾಳೆಗಳನ್ನು ಹೊದಿಸಿದ್ದ ಎರಡು ತೆಂಗಿನಕಾಯಿ, ಹಾಗೆಯೇ ಬೆಳ್ಳಿ ಅಥವಾ ಚಿನ್ನದ ಹಾಳೆಗಳನ್ನು ಹೊದಿಸಿದ 10 ಅಡಕೆ, 200 ಹೆಚ್ಚುವರಿ ತೆಂಗಿನಕಾಯಿ, 5 ಸೇರು *ಗುರ್*, 5 ಸೇರು ಖರ್ಜೂರ, 5 ಸೇರು ಸಕ್ಕರೆ, 5 ಸೇರು ಪಿಸ್ತಾ ಬೀಜ, 8 ಸೇರು ಬಾದಾಮಿ, 9 ಸೇರು ಅರಗು ಮತ್ತು ಕೆಲವು ವೀಳಯದೆಲೆ; ಇವುಗಳ ಜೊತೆಗೆ ಅಕ್ಕಿಯ ಬದಲು, ಹಣೆಯಲ್ಲಿ ಕುಂಕುಮದ ತಿಲಕದ ಗುರುತಿನ ಮೇಲ್ಗಡೆ ಧರಿಸಲು 21 ಮುತ್ತುಗಳು. ವರನಿಗೆ ಮತ್ತು ಅವನ ಬಂಧುಗಳಿಗೆ 63 ವೇಷಭೂಷಣಚಯ–ಚಿನ್ನದೆಳೆಯ ರುಮಾಲುಗಳು, ಧೋತಿಗಳು, *ಬಲಬಂಧಿ ಗೋಷ್ಪೇಚ್*‌ಗಳು ಮತ್ತು ವಿವಿಧ ವಿನ್ಯಾಸಗಳ ಬಟ್ಟೆಗಳು, ರತ್ನಖಚಿತ ಆಭರಣಗಳು, ಮಖಮಲ್ಲು ಮತ್ತು ರತ್ನಖಚಿತ ಸಜ್ಜನ್ನುಳ್ಳ 15 ಕುದುರೆಗಳು ಹಾಗೂ ಒಂದು ಸಾವಿರ ರೂಪಾಯಿ ನಗದು.

ವಿ.ಸಂ. 1833ರ ಮಾಘ್ ಮಾಸದ ಕೃಷ್ಣಪಕ್ಷದ ಸಪ್ತಮಿಯ ಎಂದರೆ 11ಫೆಬ್ರವರಿ 1776ರ ದಸ್ತಿ ದಾಖಲೆಗಳು ಕುವರ್ ತೇಜಸಿಂಹನ ತಿಲಕ ವಿಧಿಯನ್ನು ಹೀಗೆ ಬಣ್ಣಿಸುತ್ತವೆ:

> ವರನನ್ನು (ತೇಜ್‌ಸಿಂಹ) ಅನಂತರ ಒಂದು ವೇದಿಕೆಯ ಮೇಲೆ ಕುಳ್ಳಿರಿಸಿ, *ತಿಲಕ*ವನ್ನು ನೆರವೇರಿಸಲಾಯಿತು; ಪುರೋಹಿತ ಅವನ ಹಣೆಗೆ ಅರಿಸಿನವನ್ನು ಮುತ್ತುಗಳೊಡನೆ ಹಚ್ಚಿದ. ಅವನಿಗೆ ತೆಂಗಿನಕಾಯಿ, ವೀಳಯದೆಲೆಗಳನ್ನು ಅರ್ಪಿಸಲಾಯಿತು. ಆಮೇಲೆ ಆ ವಸ್ತುಗಳನ್ನು ಅಂತಿಮ ಸಮರ್ಪಣೆಗಾಗಿ ವರನ ತಂದೆಯಲ್ಲಿಗೆ ಒಯ್ಯಲಾಯಿತು. *ತಿಲಕ* ಉತ್ಸವದ ನಿರ್ವಾಹಕನಾಗಿದ್ದ ವ್ಯಕ್ತಿಗೆ ಉತ್ತಮ ಉಡುಗೊರೆಗಳನ್ನೂ ನಗದು 100ರೂ. ಗಳನ್ನೂ ಅನೇಕ ಸಿಹಿತಿಂಡಿಗಳ ಬುಟ್ಟಿಗಳನ್ನೂ ಇತ್ತು ಬೀಳ್ಕೊಡಲಾಯಿತು.

### *ತೋರಣ ಬಂಧನ (ಸ್ವಾಗತ)*

ವರ ಮದುವೆ ಮೆರವಣಿಗೆಯಲ್ಲಿ ಆಗಮಿಸಿದಾಗ, ಈ ವರ್ಣರಂಜಿತ ವಿಧಿಯನ್ನು

ವಧೂಗೃಹದಲ್ಲಿ ಆಚರಿಸಲಾಗುತ್ತದೆ. ಅವನು ಕೈಯಲ್ಲಿ ಕತ್ತಿಹಿಡಿದು ಕುದುರೆಯೇರಿ ಬರುತ್ತಾನೆ; ಕುದುರೆಯ ಮೇಲೆ ಕುಳಿತೇ ತೋರಣವನ್ನು–ಮನೆಯ ಮುಖ್ಯ ದ್ವಾರದಲ್ಲಿ ತೂಗುಹಾಕಿರುವ ಒಂದು ಮರದ ಕಿರೀಟ–ಕತ್ತಿಯಿಂದ ಏಳು ಸಲ ಮುಟ್ಟುತ್ತಾನೆ. ವಧುವಿನ ತಾಯಿ ವರನನ್ನು ಸ್ವಾಗತಿಸಿ, ಮೊಸರು ಮತ್ತು ಸಾಸಿವೆಯನ್ನು ಅವನ ಹಣೆಗೆ ಲೇಪಿಸುತ್ತಾಳೆ. ರಾಜಾಸ್ಥಾನದಲ್ಲಿ ಹಾಲು ತಾಯ ಚಿಹ್ನೆ; ಮೊಸರು ಅತ್ತೆಯ ಚಿಹ್ನೆ. ತಾಯಿ ತನ್ನಿಂದ ಪಡೆದ ಹಾಲನ್ನು ಮಗನಿಗೆ ಯಾವಾಗಲೂ ಜ್ಞಾಪಿಸುತ್ತಾಳೆ; ಹಾಗೆಯೆ ಅತ್ತೆ ತಾನಿತ್ತ ಮೊಸರನ್ನು.

ಅತ್ತೆ ವರನನ್ನು ಮೊಸರಿನಿಂದ ಸ್ವಾಗತಿಸಿದರೆ, ವಧು ಅವನಿಗೆ ಸಿಹಿತಿಂಡಿಗಳ ಹಾರದಿಂದ ಹೊಡೆಯುತ್ತಾಳೆ. ಮಧ್ಯಕಾಲದಲ್ಲಿ, ವರ ಮನೆಗೆ ಬಂದಾಗ, ವಧು ಅವನ ಮೇಲೆ ಕತ್ತಿಯಿಂದ ಆಕ್ರಮಣ ಮಾಡುತ್ತಿದ್ದಳು; ಅವನು ಬದುಕಿದರೆ, ಅವನು ಅವಳನ್ನು ವರಿಸುವ ಅವಕಾಶವಿತ್ತು. ಆದರೆ ಆಧುನಿಕ ಕಾಲದಲ್ಲಿ ವರಗಳಿಗೆ ಯುದ್ಧದಲ್ಲಿ ತರಬೇತಿಯಿಲ್ಲವಾದ್ದರಿಂದ ವಧುಗಳು ಅವರನ್ನು ಖಡ್ಗದಿಂದ ಹೊಡೆಯುವುದಿಲ್ಲ; ಅತ್ಯುತ್ತಮ ಸಿಹಿತಿಂಡಿಗಳ ಹಾರಗಳಿಂದ ಹೊಡೆಯುತ್ತಾರೆ.

*ಸಪ್ತಪದಿ (ವಿವಾಹ)*

ಪ್ರಮುಖ ವಿವಾಹವಿಧಿ, ಸಾವಿರಾರು ವರ್ಷಗಳ ಹಿಂದೆ ವೈದಿಕಯುಗದಲ್ಲಿ ಹೇಗೊ ಹಾಗೆ ಯಥಾವತ್ತಾಗಿ ನೆರವೇರುತ್ತದೆ. ಸುಂದರವಾಗಿ ಅಲಂಕೃತವಾದ ಒಂದು ಮೇಲ್ಕಟ್ಟಿನ ಕೆಳಗೆ ಹವನ ನಡೆಯುತ್ತದೆ; ವರ ವಧುವಿನ ಕೈಹಿಡಿದು, ದೇವರ ಹೆಸರಿನಲ್ಲಿ ವಿವಾಹ ಪ್ರತಿಜ್ಞೆ ಮಾಡುತ್ತಾನೆ. ಆಮೇಲೆ ವಧೂವರರು ಅಗ್ನಿಗೆ ಏಳುಸಲ ಪ್ರದಕ್ಷಿಣೆ ಹಾಕುತ್ತಾರೆ *(ಸಪ್ತಪದಿ)*. ಮೊದಲ ಮೂರು ಸುತ್ತುಗಳಲ್ಲಿ ವಧು ವರನನ್ನು ಮುನ್ನಡೆಸುತ್ತಾಳೆ; ಕಡೆಯ ನಾಲ್ಕು ಸುತ್ತುಗಳಲ್ಲಿ ವರ ವಧುವನ್ನು ಮುನ್ನಡೆಸುತ್ತಾನೆ. ಈ ಮದುವೆ ಸುತ್ತುಗಳ ಅವಧಿಯಲ್ಲಿ, ಪುರೋಹಿತ ವೇದಮಂತ್ರಗಳನ್ನುಚ್ಚರಿಸುತ್ತಾನೆ. ಮೊದಲ ಮೂರು ಸುತ್ತುಗಳಲ್ಲಿ ವಧು ಅವಳ ಸ್ವಂತ ಕುಟುಂಬಕ್ಕೆ ಸೇರಿರುತ್ತಾಳೆ; ಆದರೆ ನಾಲ್ಕನೆಯ ಸುತ್ತಿನಲ್ಲಿ ವರನ ಹೆಂಡತಿಯಾಗಿ ಬಿಡುತ್ತಾಳೆ. ಈ ಸಂದರ್ಭದಲ್ಲಿ ಸಾಮಾನ್ಯವಾಗಿ ಹಾಡಲಾಗುವ ಹಾಡು ಈ ವರ್ಗಾವಣೆಗೆ ಸಂಬಂಧಿಸಿದೆ:

ಮೊದಲ ಸುತ್ತಿನಲ್ಲಿ ಅವಳು ತನ್ನ ತಂದೆಯ ಮಗಳು,
ಎರಡನೆಯ ಸುತ್ತಿನಲ್ಲಿ ಅವಳು ಚಿಮಾಳ ಸೋದರಸೊಸೆ,
ಮೂರನೆಯ ಸುತ್ತಿನಲ್ಲಿ ಅವಳು ತನ್ನ ಸೋದರಮಾವನ ಸೋದರಸೊಸೆ,
ನಾಲ್ಕನೆಯ ಸುತ್ತಿನಲ್ಲಿ, ಅವಳು ಮತ್ತಾರಿಗೋ ಸೇರುತ್ತಾಳೆ.

*ಗೌನ*

ಹುಡುಗಿ ಮೈನೆರೆಯುವುದಕ್ಕೆ ಮುನ್ನ ಮದುವೆಯಾದರೆ, ಅವಳು ತನ್ನ ಕುಟುಂಬದೊಡನೆ ಉಳಿಯುತ್ತಾಳೆ. ಅವಳು ಮೈನೆರೆದ ನಂತರ, ಅವಳನ್ನು

ಕರೆದೊಯ್ಯಲು ವರನನ್ನು ಆಮಂತ್ರಿಸಲಾಗುತ್ತದೆ. ವರ ಬಂಧುಮಿತ್ರರ ತಂಡದೊಡನೆ ಆಗಮಿಸುತ್ತಾನೆ; ಅವನಿಗೆ ಭಾರಿ ಸತ್ಕಾರ ಮತ್ತು ಉಡುಗೊರೆಗಳು ಸಲ್ಲುತ್ತವೆ; ಕುಟುಂಬದ ಮತ್ತು ಸ್ಥಳದ ಸ್ತ್ರೀಯರು ಅವನನ್ನು ಮತ್ತು ಅವನ ತಂಡವನ್ನು ಸ್ವಾಗತಿಸಲು, ವಧುವಿನ ಮನೆಯಲ್ಲಿ ಸೇರಿ, ಹಾಡುಗಳನ್ನು ಹಾಡುತ್ತಾರೆ. ಬಂಧು ಮಿತ್ರರಿಗೆ ಸಿಹಿ ಹಂಚಲಾಗುತ್ತದೆ. ಬಾಲ್ಯವಿವಾಹಗಳು ಈಗಲೂ ಜನಪ್ರಿಯ ವಾಗಿರುವ ಗ್ರಾಮೀಣ ಪ್ರದೇಶಗಳಲ್ಲಿ ಈ ಪದ್ಧತಿ ಬಹುಸಾಮಾನ್ಯ. ಆದರೆ ನಗರಪ್ರದೇಶಗಳಲ್ಲಿ *ಗೌನ* ವಿರಳ.

## ವರದಕ್ಷಿಣೆ

ಉತ್ತರಭಾರತದ ಉಳಿದೆಡೆಗಳಂತೆ ರಾಜಾಸ್ಥಾನದಲ್ಲಿ ಮದುವೆಯೊಂದು ಬಹು ದುಬಾರಿ ವ್ಯವಹಾರ; ವರದಕ್ಷಿಣೆ ಪದ್ಧತಿ ಇದಕ್ಕೆ ಬಹುಮಟ್ಟಿಗೆ ಕಾರಣ. ಹುಡುಗಿಯ ತಂದೆತಾಯಿಗಳ ಮೇಲೆ ವರದಕ್ಷಿಣೆ ಒಮ್ಮೊಮ್ಮೆ ಹೊರಲಾಗದ ಹೊರೆಯಾಗುತ್ತದೆ; ಅವರು ತಮ್ಮ ಮಗಳ ಮದುವೆ ಮಾಡಲು ದೊಡ್ಡ ಮೊತ್ತವನ್ನು ತೆರಬೇಕಾಗುತ್ತದೆ.

ಈ ಪದ್ಧತಿ ಮಧ್ಯಯುಗದಲ್ಲಿ ಹೇಗೊ ಹಾಗೆ ಇಂದು ಕ್ರೂರ ಮತ್ತು ದಮನಕಾರಿ. ಹುಡುಗಿಯ ತಂದೆತಾಯಿಗಳು ಅಕ್ಷರಶಃ ಹಾಳಾಗುತ್ತಾರೆ; ಏಕೆಂದರೆ ಅವರು ಸಾಲಿಗರಿಂದ ಹಣವನ್ನು ದುಬಾರಿ ಬಡ್ಡಿಗೆ ಸಾಲ ತೆಗೆದುಕೊಳ್ಳಬೇಕಾಗುತ್ತದೆ ಮತ್ತು ಬಡ್ಡಿಸಹಿತ ಸಾಲವನ್ನು ಮರುಪಾವತಿ ಮಾಡುವುದಕ್ಕಾಗಿ ತಮ್ಮ ಆಸ್ತಿಯನ್ನು ಮಾರಬೇಕಾಗುತ್ತದೆ.

ಮಧ್ಯಯುಗದಲ್ಲಿ, ಈ ಕೆಟ್ಟ ಪದ್ಧತಿಯಿಂದಾಗಿ, ಅನೇಕರು ತಮ್ಮ ಹೆಣ್ಣುಮಗುವನ್ನು ಹುಟ್ಟಿದ ಕೂಡಲೆ ಕೊಂದುಹಾಕುತ್ತಿದ್ದರು. ಜೇಮ್ಸ್ ಟಾಡ್ ಹೇಳುತ್ತಾನೆ: "ಧರ್ಮ ಎಲ್ಲಿಯೂ ಈ ಬರ್ಬರತೆಯನ್ನು ಅಧಿಕೃತಗೊಳಿಸದಿದ್ದರೂ, ರಜಪೂತರಲ್ಲಿ ಮದುವೆಯನ್ನು ನಿಯಂತ್ರಿಸುವ ನಿಯಮಗಳು ಶಿಶು ಹತ್ಯೆಗೆ ಬಲವಾದ ಒತ್ತಾಸೆ ಕೊಡುತ್ತಿದ್ದುವು. ಇವುಗಳಲ್ಲಿ ದುಬಾರಿ ವರದಕ್ಷಿಣೆ ಪಾವತಿ ಸೇರುತ್ತಿತ್ತು. ಅದನ್ನು ಕೊಡುವುದು ಹುಡುಗಿಯ ತಾಯ್ತಂದೆಗಳಿಗೆ ಸಾಮಾನ್ಯವಾಗಿ ಸಾಧ್ಯವಿರಲಿಲ್ಲ. ಆದ್ದರಿಂದ, ಅವರು ತಮ್ಮ ಹೆಣ್ಣುಸಂತಾನವನ್ನು ಹುಟ್ಟಿದ ಕೂಡಲೆ ಕೊಲ್ಲುವುದನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದರು".

ಜೈಪುರದ ಖ್ಯಾತ ಮಹಾರಾಜ ಜೈಸಿಂಹ ಪ್ರತಿಯೊಂದು ರಜಪೂತ ರಾಜ್ಯದ ದೊರೆಗೆ ಕಟ್ಟಳೆಯೊಂದನ್ನು ವಿಧಿಸಿದ; ಅವರ ಹಿಡುವಳಿದಾರರ ಸಭೆಯ ಮುಂದೆ ಅದನ್ನು ಮಂಡಿಸಲಾಯಿತು. ಈ ಕಟ್ಟಳೆಯಲ್ಲಿ ಅವನು ದಹೇಜ್ ಅಥವಾ ವರದಕ್ಷಿಣೆಯನ್ನೂ ಇತರ ಮದುವೆ ಖರ್ಚನ್ನೂ ನಿಯಂತ್ರಿಸಿದ; ಅದು ಹಿಡುವಳಿ ದಾರನ ಆಸ್ತಿಯ ಒಂದು ವರ್ಷದ ಆದಾಯಕ್ಕೆ ಸೀಮಿತವಾಗಿರಬೇಕಿತ್ತು. ಆದರೆ ಈ ಯೋಜನೆಯನ್ನು ಸಲುಂಬ್ರ (ಮೇವಾರ)ದ ಜೊಂಡವತ್‌ನ ಗರ್ವ ವಿಫಲ ಗೊಳಿಸಿತು; ಅವನು ತನ್ನ ರಾಜಾಧಿರಾಜ ಮೇವಾರದ ಮಹಾರಾಣ ವ್ಯಯಿಸ ಬಹುದಾದ ಮೊತ್ತಕ್ಕಿಂತ ಬಹುಮಿಗಿಲಾದ ಮೊತ್ತವನ್ನು ತನ್ನ ಮಗಳ ಮದುವೆಗೆ

ವ್ಯಯಿಸಿದ. ತನ್ನ ಹೆಸರನ್ನು ಚಾರಣರೂ ವಂಶವೃಕ್ಷ ರಚಕರೂ ಅಮರ ಗೊಳಿಸಬೇಕೆಂದು ಬಯಸಿದ ಅವನು ಪೃಥ್ವೀರಾಜನೊಡನೆ ನಡೆದ ಮಗಳ ಮದುವೆಗೆ ತನ್ನ ಬೊಕ್ಕಸವನ್ನು ಬರಿದು ಮಾಡಿದ.

## ವಿಚ್ಛೇದನ ಮತ್ತು ಪುನರ್ವಿವಾಹ

ವಿಚ್ಛೇದನದ ವಿಷಯದಲ್ಲಿ, ದೇಶದಲ್ಲೆ ಅತ್ಯಂತ ಮುಂದುವರಿದ ರಾಜ್ಯವೆಂದು ರಾಜಾಸ್ಥಾನ ಹೇಳಿಕೊಳ್ಳಬಲ್ಲುದು. ಇತರ ರಾಜ್ಯಗಳಲ್ಲಿ ವಿವಾಹಶಾಸನ ಜಾರಿಗೆ ಬಂದ ಮೇಲಷ್ಟೆ ವಿಚ್ಛೇದನದ ಪರಿಕಲ್ಪನೆ ಅಂಗೀಕೃತವಾಗಿದ್ದರೆ, ಮತ್ತು ಇಂದಿಗೆ ಕೂಡ, ಕಾನೂನಿನಲ್ಲಿ ಅವಕಾಶವಿದ್ದರೂ, ಮದುವೆ ಯಾವುದೇ ಪರಿಸ್ಥಿತಿಯಲ್ಲಿ ರದ್ದಾಗ ತಕ್ಕದ್ದಲ್ಲ ಎಂದು ಪರಿಗಣಿತವಾಗಿದ್ದರೆ, ರಾಜಾಸ್ಥಾನಕ್ಕೆ ಅದರದೇ ಆದ ವಿಚ್ಛೇದನೆ ಪರಂಪರೆಯುಂಟು. ಅದು ಮಧ್ಯಯುಗದಷ್ಟು ಹಿಂದಕ್ಕೆ ಹೋಗುತ್ತದೆ.

ಈ ರಾಜ್ಯದಲ್ಲಿ ಮುಂದಿನ ಸಂದರ್ಭಗಳಲ್ಲಿ ವಿಚ್ಛೇದನಕ್ಕೆ ಅನುಮತಿಯಿತ್ತು: ಸರಿಯಾದ ಹೊಂದಾಣಿಕೆಯಿಲ್ಲದಿರುವುದು, ಪರಸ್ಪರ ದ್ವೇಷ, ಮಾನಸಿಕ ಮತ್ತು ದೈಹಿಕ ಅಸಮಾನತೆ, ಕೆಟ್ಟ ನಡತೆ, ಅಪರಾಧಕ್ಕಾಗಿ ಶಿಕ್ಷೆಗೊಂಡಿರುವುದು, ಕುಡಿತದ ಚಟ, ಷಂಡತ್ವ ಮತ್ತು ಮತಿಭ್ರಮಣೆ. ಕೆಳಜಾತಿಗಳಲ್ಲಿ ಮತ್ತು ರಜಪೂತರಲ್ಲಿ ಕೂಡ ವಿಚ್ಛೇದನ ಸಾಕಷ್ಟು ಸಾಧಾರಣವಾಗಿತ್ತು. ಆದರೆ ಬ್ರಾಹ್ಮಣ ಮತ್ತು ವೈಶ್ಯ ಸಮಾಜಗಳಲ್ಲಿ ಅದಕ್ಕೆ ಅನುಮತಿಯಿರಲಿಲ್ಲ.

ಉದಾಹರಣೆಗೆ, ಕೋತದಲ್ಲಿ, ಹದಿನೆಂಟನೆಯ ಶತಮಾನದ ದಾಖಲೆಗಳಿಂದ ವ್ಯಕ್ತವಾಗುವಂತೆ ಕೆಳಜಾತಿಗಳಲ್ಲಿ ವಿಚ್ಛೇದನ ಸಾಮಾನ್ಯವಾಗಿತ್ತು. ಮದುವೆ ಯಾಗುವಾಗ ಸ್ತ್ರೀಯರು ತಮ್ಮೊಡನೆ ತಂದ ಆಸ್ತಿಯನ್ನು ಹಿಂದಿರುಗಿಸಿ, ಸರ್ಕಾರಕ್ಕೆ ತೆರಿಗೆ ಕಟ್ಟಿದಾಗ ವಿಚ್ಛೇದನಕ್ಕೆ ಕಾನೂನು ಅನುಮತಿಸುತ್ತಿತ್ತು.

## *ನತ (ಪುನರ್ವಿವಾಹ)*

ವಿಚ್ಛೇದನದ ನಂತರ, ಮರುಮದುವೆ ಮಾಡಿಕೊಳ್ಳಬಹುದಿತ್ತು. ಆದರೂ ಕೆಲವು ಜಾತಿಗಳಲ್ಲಿ ಅದರಲ್ಲೂ ರಜಪೂತರು, ಜಾಟರು, ಗುಜರರು, ಮೀನರು ಮತ್ತು ಭಿಲ್ಲರಲ್ಲಿ, ನತ ಪದ್ಧತಿ ಅಸ್ತಿತ್ವದಲ್ಲಿದೆ. ಈ ಪದ್ಧತಿಯ ಪ್ರಕಾರ, ಮಹಿಳೆಯೊಬ್ಬಳು ತನ್ನ ಗಂಡನನ್ನು ಬಿಟ್ಟು, ಮದುವೆಯ ಸಂಪ್ರದಾಯಗಳಿಲ್ಲದೆ ತನಗಿಷ್ಟ ಬಂದ ಮತ್ತೊಬ್ಬ ಗಂಡಸಿನೊಡನೆ ಬದುಕಬಹುದು. ಈ ಪದ್ಧತಿ ಗ್ರಾಮಾಂತರ ಪ್ರದೇಶ ಗಳಲ್ಲಿ ಬಹಳ ಜನಪ್ರಿಯವಾಗಿದೆ; ಏಕೆಂದರೆ ಅದಕ್ಕೆ ಯಾವುದೇ ಖರ್ಚು ಬೀಳು ವುದಿಲ್ಲ. ಇದು ಮದುವೆಯ ಅಬ್ಬರ ಆಡಂಬರಗಳಿಲ್ಲದೆ, ಪರಸ್ಪರ ಒಪ್ಪಿಗೆ ಯಿಂದಾಗುವ ಮದುವೆ. ವಿಧವೆಯೊಬ್ಬಳು ಇಷ್ಟಪಟ್ಟ ಗಂಡಸಿನೊಡನೆ ಮದುವೆಯ ಸಾಂಪ್ರದಾಯಿಕ ವಿಧಿಯಿಲ್ಲದೆ ಬಾಳಬಹುದು. ರಾಜಾಸ್ಥಾನದಲ್ಲಿ ಇದು ನತ ಎಂದು ಹೆಸರಾಗಿದೆ.

## ಸಾವು

### *ಅಂತ್ಯಕ್ರಿಯೆಗಳು*

ರಾಜಾಸ್ಥಾನದಲ್ಲಿನ ಅಂತ್ಯಕ್ರಿಯೆಗಳು ಬಹುತೇಕ ದೇಶದ ಇತರ ರಾಜ್ಯಗಳಲ್ಲಿರುವಂತೆಯೇ ಇವೆ. ಮುಖ್ಯ ವಿಧಿಗಳು ಮೂರು: *ಅಂತ್ಯೇಷ್ಟಿ*, *ತಿಯ* ಮತ್ತು *ಮೌಸರ್*.

### *ಅಂತ್ಯೇಷ್ಟಿ*

ವ್ಯಕ್ತಿಯೊಬ್ಬ ಸತ್ತಾಗ, ಅವನನ್ನು ಅಥವಾ ಅವಳನ್ನು ಶ್ಮಶಾನಕ್ಕೆ ಮೆರವಣಿಗೆಯಲ್ಲಿ ಒಯ್ಯಲಾಗುತ್ತದೆ. ಸತ್ತ ವ್ಯಕ್ತಿಗೆ ತುಂಬ ವಯಸ್ಸಾಗಿದ್ದರೆ, ವಾದ್ಯವೃಂದವೊಂದು ಮೆರವಣಿಗೆಯ ಮುಂದಿರುತ್ತದೆ. ಹಿರಿಯ ಮಗ, ಅಥವಾ ಹತ್ತಿರದ ಸಂಬಂಧಿಯೊಬ್ಬ, ಚಿತೆಗೆ ಬೆಂಕಿ ಹಚ್ಚುತ್ತಾನೆ. ಅನಂತರ ದುಃಖಿತರು ಅಂತ್ಯಕ್ರಿಯೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರ ಸಂಕೇತವಾಗಿ ಬೆಂಕಿಗೆ ಕಟ್ಟಿಗೆ ಹೊರೆಗಳನ್ನೆಸೆಯುತ್ತಾರೆ.

ಶ್ರೀಮಂತ ವ್ಯಕ್ತಿಯೊಬ್ಬ ಸತ್ತಾಗ, ಮನೆಯಿಂದ ಶ್ಮಶಾನದವರೆಗೆ ದಾರಿಯುದ್ದಕ್ಕೂ ನಾಣ್ಯಗಳನ್ನು ಚೆಲ್ಲಲಾಗುತ್ತದೆ. ತಿರುಕರು ಮತ್ತು ಬಡವರು ಅವುಗಳನ್ನೆತ್ತಿ ಕೊಳ್ಳುತ್ತಾರೆ. ಇದನ್ನು *ಬಖೇರ್* ಎಂದು ಕರೆಯುತ್ತಾರೆ. ಇದು ಮುಖ್ಯವಾಗಿ ರಾಜಾಸ್ಥಾನಿ ಪದ್ಧತಿ.

ನಷ್ಟಕ್ಕೀಡಾದ ಕುಟುಂಬ ಹನ್ನೆರಡು ದಿವಸ ಶೋಕವನ್ನಾಚರಿಸುತ್ತದೆ. ಅಳುವ ವೃತ್ತಿನಿರತರು ಸತ್ತವನ ಮನೆಯ ಮುಂದೆ ಪ್ರತಿ ನಿತ್ಯ ಅಳುತ್ತಾರೆ. ರಾಜಾಸ್ಥಾನದಲ್ಲಿ, ಅಳುವುದನ್ನೆ ವೃತ್ತಿಮಾಡಿಕೊಂಡವರ ಒಂದು ವರ್ಗವಿದ್ದು, ಸಾವುಂಟಾದ ಕಡೆಗಳಿಗೆಲ್ಲ ಅವರನ್ನು ಅಳಲು ಕರೆಯಿಸುವುದು ಸಾಧ್ಯ.

### *ತಿಯ*

ಸಾವಿನ ಮೂರನೆಯ ದಿವಸ, ಬಂಧುಗಳು ಶ್ಮಶಾನಕ್ಕೆ ಹೋಗಿ, ಬೂದಿಯನ್ನು ಸಂಗ್ರಹಿಸುತ್ತಾರೆ; ಆಮೇಲೆ ಅದನ್ನು ಪುಷ್ಕರ ಸರೋವರದಲ್ಲಿ ಅಥವಾ ಗಂಗೆಯಲ್ಲಿ ವಿಸರ್ಜಿಸುತ್ತಾರೆ. ಆ ದಿವಸ, ಬಂಧುಮಿತ್ರರು ಸತ್ತವನ ಮನೆಯಲ್ಲಿ ಸೇರಿ ಹವನವನ್ನಾಚರಿಸುತ್ತಾರೆ; ಕುಲಪುರೋಹಿತ ವೇದಸೂಕ್ತಗಳನ್ನು ಪಠಿಸುತ್ತಾನೆ.

### *ಮೌಸರ್ (ತಿಥಿ ಭೋಜನ)*

ಹನ್ನೆರಡನೆಯ ದಿವಸ ಭಾರಿ ಔತಣವೊಂದನ್ನು ಮೃತರ ಗೌರವಾರ್ಥ ಕೊಡಲಾಗುತ್ತದೆ. ನೂರಾರು ಜನರನ್ನು ಆಹ್ವಾನಿಸಲಾಗುತ್ತದೆ; ಇದರಿಂದ ಕುಟುಂಬಕ್ಕೆ ಸಾಕಷ್ಟು ಖರ್ಚು ಬರುತ್ತದೆ. ಕೆಲವೊಮ್ಮೆ ಬಡವರು ಸಾಲ ಮಾಡಬೇಕಾಗುತ್ತದೆ; ಹೊಲ, ಮನೆಗಳನ್ನು ಮಾರದೆ ದುಬಾರಿ ಸಾಲವನ್ನು ತೀರಿಸಲಾಗುವುದಿಲ್ಲ.

ಈಗ ಆಧುನಿಕ ವಿಚಾರಗಳು ರಾಜಾಸ್ಥಾನವನ್ನು ತಲುಪಿರುವುದರಿಂದ, ಯುವಕರು ಈ ತಿಥಿ ಭೋಜನವನ್ನು ಕೆಲವೊಮ್ಮೆ ನಿರಾಕರಿಸುತ್ತಾರೆ; ಅದು ವ್ಯರ್ಥವೆಂದು ಅವರ ಭಾವನೆ. ಆದ್ದರಿಂದ, ತಾವು ಸತ್ತಮೇಲೆ ತಮ್ಮ ಮಕ್ಕಳು ಮತ್ತು ಬಂಧುಗಳು ತಮ್ಮ ತಿಥಿಯೂಟ ಹಾಕಿಸುವುದಿಲ್ಲವೆಂದು ಅಂಜಿಕೆಯಿಂದ ಕೆಲವರು ವೃದ್ಧರು ಪೂರ್ವಭಾವಿಯಾಗಿಯೆ ಅದನ್ನು ಏರ್ಪಡಿಸುತ್ತಾರೆ!

ಆದರೂ, ರಾಜ್ಯಸರ್ಕಾರ ತಿಥಿಭೋಜನವನ್ನು ಬಹಿಷ್ಕರಿಸಿದೆ; ಅದು ಬಡವರ ಪಾಲಿಗೆ ವರದಕ್ಷಿಣೆಯಂತೆಯೆ ಶಾಪವೆಂದು ಪರಿಗಣಿತವಾಗಿರುವುದೆ ಇದಕ್ಕೆ ಕಾರಣ.

ಮಧ್ಯಯುಗದಲ್ಲಿ ಕೂಡ ತಿಥಿಭೋಜನಗಳು ದುಬಾರಿಯಾಗಿರುತ್ತಿದ್ದುವು. 1758ರಲ್ಲಿ ಸತ್ತ ಕೋತದ ಅಜಿತ್‌ಸಿಂಹ ಮಹಾರಾವ್‌ನ ಗೌರವಾರ್ಥ ರೂ. 62,944ನ್ನು ವೆಚ್ಚ ಮಾಡಲಾಯಿತು. ಜೈಪುರದ ಮಹಾರಾಜ ಮಾಧೋಸಿಂಹ 1922ರಲ್ಲಿ ಸತ್ತಾಗ, ಇಡೀ ಜೈಪುರ ನಗರಕ್ಕೆ ಔತಣ ಕೊಡಲಾಯಿತು. ಕಡೆಯ ಪಕ್ಷ 50,000 ಜನರನ್ನು ಆಮಂತ್ರಿಸಲಾಗಿತ್ತು. ಜೈಪುರದ ಮೂಲಕ ಹಾದುಹೋಗುವ ಎಲ್ಲ ರೈಲುಗಳನ್ನೂ ನಿಲ್ದಾಣದಲ್ಲಿ ಮೂರು ದಿವಸ ನಿಲ್ಲಿಸಿ, ಎಲ್ಲ ಪ್ರಯಾಣಿಕರಿಗೂ ಪ್ಲಾಟ್‌ಫಾರಂ ಮೇಲೆ ಉಣಬಡಿಸಲಾಯಿತು. ಆ ದಿನಗಳನ್ನು ಕಳೆದುಕೊಂಡ ಜೈಪುರದ ಜನ ರಾಜರ ತಿಥಿಭೋಜನಗಳ ಗತವೈಭವದ ದಿನಗಳನ್ನು ಖಿನ್ನತೆಯಿಂದ ನೆನೆಯುತ್ತಾರೆ.

# ಜಾತ್ರೆಗಳು ಮತ್ತು ಹಬ್ಬಗಳು

ತಮ್ಮ ಇತಿಹಾಸ, ಪರಂಪರೆ, ಧರ್ಮಗಳ ಬಗ್ಗೆ ಹೆಮ್ಮೆಯನ್ನುಳ್ಳ ಮತ್ತು ಸಾಂಪ್ರದಾಯಿಕ ದೃಷ್ಟಿಯನ್ನುಳ್ಳ ರಾಜಾಸ್ಥಾನದ ಜನರ ಪಾಲಿಗೆ ವರ್ಷದುದ್ದಕ್ಕೂ ಜಾತ್ರೆಗಳ ಮತ್ತು ಹಬ್ಬಗಳ ಕೊನೆಯಿಲ್ಲದ ಚಕ್ರವುಂಟು. **ಸಾತ್ ಬಾರ್, ನವ್ ತ್ಯೋಹರ್** ಎಂಬುದೊಂದು ಗಾದೆ: ವಾರದ ಏಳು ದಿವಸಗಳಲ್ಲಿ ಒಂಬತ್ತು ಹಬ್ಬಗಳಿರುತ್ತವೆ.

ರಾಜಾಸ್ಥಾನದ ಜಾತ್ರೆಗಳು ಮತ್ತು ಹಬ್ಬಗಳು ಬಹುಶಃ ಇಡೀ ಭಾರತದಲ್ಲಿ ಅತ್ಯಂತ ವರ್ಣರಂಜಿತ ಮತ್ತು ನಯನ ಮನೋಹರವಾಗಿದ್ದು, ಜನಜೀವನವನ್ನು ಅದರ ಎಲ್ಲ ವಿಪುಲತೆ ವೈವಿಧ್ಯಗಳಲ್ಲಿ ಪ್ರತಿಬಿಂಬಿಸುತ್ತವೆ; ಎಲ್ಲ ಹಬ್ಬಗಳ ಮತ್ತು ಜಾತ್ರೆಗಳ ಮೂಲ ಧರ್ಮದಲ್ಲಿ ಕಂಡು ಬರುತ್ತದೆ. ಆದರೆ ಇಂಥ ಅನೇಕ ಸಂದರ್ಭಗಳು ಇತರ ವಿವಿಧ ಸಂಗತಿಗಳಿಂದಾಗಿ–ಸಾಮಾಜಿಕ ಮತ್ತು ಆರ್ಥಿಕ–ಹೆಚ್ಚು ಪರಿಚಿತವಾಗಿವೆ. ದನಗಳ ಕೆಲವು ಅತ್ಯುತ್ತಮ ತಳಿಗಳನ್ನುಳ್ಳ ರಾಜಾಸ್ಥಾನ ತನ್ನ ದನಗಳ ಜಾತ್ರೆಗಳಿಗೆ ಪ್ರಸಿದ್ಧವಾಗಿದೆ. ಅವು ಮನುಷ್ಯನ ಮತ್ತು ಪ್ರಾಣಿಗಳ ಅನ್ಯೋನ್ಯಾವಲಂಬನವನ್ನೂ ಅವರ ನಿಕಟ ಸಂಬಂಧವನ್ನೂ ಬಿಂಬಿಸುತ್ತವೆ.

ರಾಜಾಸ್ಥಾನದ ಕೆಲವು ಭಾಗಗಳಲ್ಲಿ ದನಗಳಿಂದ ಬರುವ ಆದಾಯ ಕೃಷಿಯ ಆದಾಯಕ್ಕೆ ಹೆಚ್ಚಲ್ಲವಾದರೆ ಬಹುತೇಕ ಸಮಾನ ಎಂದು ಹೇಳಿದರೆ ಉತ್ಪ್ರೇಕ್ಷೆಯಲ್ಲ. ತಮ್ಮ ದನಕರುಗಳ ಬಗ್ಗೆ ರಾಜಾಸ್ಥಾನಿಗಳಿಗಿರುವ ಪ್ರೀತಿ, ಆದರ, ಗೌರವಗಳು ಬಹಳಷ್ಟು ಸೂಕ್ತಿ, ಕತೆ ಮತ್ತು ಹಾಡುಗಳಲ್ಲಿ ಅಭಿವ್ಯಕ್ತವಾಗಿವೆ. ಹಾಲು ಕೊಡುವ ಹಸು ಮಾತೆಯೂ ಹೌದು, ಆನಂದ ಅಭ್ಯುದಯಗಳ ದಾತೆಯೂ ಹೌದು; ಹೋರಿಯಾದರೊ 'ಸೂರ್ಯನಂತೆ ಹಸುಗಳ ಸಂತಾನವನ್ನು ವರ್ಧಿಸುವ ಹೆಮ್ಮೆಯ ಪ್ರಜನಕ'. ಕೃಷಿಕ ತನ್ನ ಎತ್ತುಗಳನ್ನು ಪ್ರೀತಿಯಿಂದ ಸೋದರರೆಂದು ಕರೆದು, ಪ್ರೋತ್ಸಾಹಿಸುತ್ತಾನೆ; ಕಂದುಬಣ್ಣದ ಎಮ್ಮೆ ಅಥವಾ ಹಸುವನ್ನು ಕೂಡ ತಾಯೆಂದು ಕರೆಯಲಾಗುತ್ತದೆ. ಮೇಕೆಯೊಬ್ಬಳು ಸೋದರಿ; ಏನನ್ನು ಬೇಕಾದರೂ ತಿಂದು ಬದುಕಬಲ್ಲವಳು – 'ಅತ್ಯಂತ ಅಗ್ಗವಾದವಳು ಮತ್ತು ಬರದಲ್ಲಿ ಕೂಡ ಹಾಲು ಕೊಡುವವಳು'. ಕುದುರೆ ಗೌರವಾನ್ವಿತ ತಂದೆ, ಯುದ್ಧವಿಜೇತ ಗಂಡು; ಹೆಣ್ಣು

ಒಂಟೆಗಳಾದರೂ 'ಹಸಿವು, ತೃಷೆಗಳ ನಿರೋಧಕ' ಗಳು.

ದನಗಳನ್ನು ಕುರಿತ ಈ ಬಗೆಯ ಆದರ ಮತ್ತು ಅರ್ಥ ವ್ಯವಸ್ಥೆಯಲ್ಲಿ ಅವುಗಳ ಪ್ರಾಮುಖ್ಯ ಪುಷ್ಕರದ ಕಾರ್ತಿಕ್ ಜಾತ್ರೆಯನ್ನೂ ಪ್ರಬತ್ ಸರ್, ನಾಗೌರ್‌ಗಳ ತೇಜಜಿ ಜಾತ್ರೆಯನ್ನೂ–ಅವು ಮೂಲತಃ ಧಾರ್ಮಿಕ–ರಾಜ್ಯದ ಅತ್ಯಂತ ದೊಡ್ಡ ಜಾತ್ರೆಗಳನ್ನಾಗಿಸಿವೆ. ಆಹಾರ, ಮೇವು, ನೀರು, ವೈದ್ಯಕೀಯ ಶುಶ್ರೂಷೆಗಳಿಗಾಗಿ ಅಧಿಕಾರಿಗಳು ವ್ಯಾಪಕ ವ್ಯವಸ್ಥೆ ಮಾಡುತ್ತಾರೆ.

ಮನುಷ್ಯ ಸ್ವಭಾವತಃ ಹಬ್ಬ, ಮೇಳ ಮತ್ತು ಸಾಮೂಹಿಕ ಉತ್ಸವಗಳನ್ನು ಇಷ್ಟಪಡುವವನು. ಹೀಗಾಗಿ, ಹಬ್ಬಗಳು ಜಾತ್ರೆಗಳಲ್ಲಿ ಪರ್ಯವಸಾನಗೊಳ್ಳುತ್ತವೆ. ಕೆಲವು ಜಾತ್ರೆಗಳು ಮತ್ತು ಹಬ್ಬಗಳು ಮೂಲತಃ ಪೌರಾಣಿಕವಾಗಿದ್ದು ದೇವ, ದೇವಿಯರನ್ನು ಕುರಿತ ಐತಿಹ್ಯಗಳನ್ನಾಧರಿಸಿವೆ; ಉಳಿದವು ಅತಿಮಾನುಷ ಶಕ್ತಿಗಳನ್ನುಳ್ಳ ಮತ್ತು ಜನತೆಯ ಗೌರವ, ಪೂಜೆಗಳಿಗೆ ಪಾತ್ರರಾದ ಕೀರ್ತಿಶಾಲಿಗಳ ಅಥವಾ ವೀರರ ನೆನಪಿಗಾಗಿ ನಡೆಯುತ್ತವೆ.

## ಧಾರ್ಮಿಕ ಜಾತ್ರೆಗಳು

### *ಪುಷ್ಕರ ಜಾತ್ರೆ*

ಧಾರ್ಮಿಕ ವಿಧಿಗಳ ಆಚರಣೆಗಾಗಿ ಅಥವಾ ದೇವ ದೇವಿಯರ ಪೂಜಾರ್ಥವಾಗಿ ನಡೆಯುವ ಜಾತ್ರೆಗಳು ರಾಜಾಸ್ಥಾನದ ಎಲ್ಲ ಭಾಗಗಳಲ್ಲೂ ಸಾಕಷ್ಟಿವೆ. ಪುಷ್ಕರದಲ್ಲಿ ನಡೆಯುವ ಕಾರ್ತಿಕ್ ಜಾತ್ರೆ–ಮುಖ್ಯವಾಗಿ ಹಿಂದೂಗಳು ಪವಿತ್ರತಮವೆಂದು ಪರಿಗಣಿಸುವ ಸರೋವರದಲ್ಲಿ ಮೀಯುವ ಜಾತ್ರೆ– ಪ್ರಾಯಃ ಇವುಗಳಲ್ಲಿ ಅತ್ಯಂತ ದೊಡ್ಡದು. ಅದೊಂದು *ಲಖಿ ಮೇಳ;* ಒಂದು ಲಕ್ಷಕ್ಕಿಂತ ಹೆಚ್ಚು ಮಂದಿಯನ್ನು ಆಕರ್ಷಿಸುವಂಥದು.

ಪುಷ್ಕರ ಅಜ್ಮೀರ್‌ಗೆ ವಾಯುವ್ಯದಲ್ಲಿ ಹನ್ನೊಂದು ಕಿಲೋಮೀಟರ್ ದೂರದ ಮನಮೋಹಕ ಕಣಿವೆಯೊಂದರಲ್ಲಿದೆ. ಭಾರತದಲ್ಲಿ ಬ್ರಹ್ಮನಿಗೆ ಮೀಸಲಾದ ಎರಡು ದೇವಾಲಯಗಳಲ್ಲಿ ಒಂದು ಸೇರಿದಂತೆ ಹಲವಾರು ದೇವಾಲಯಗಳು ಅಲ್ಲಿವೆ. ಕಾರ್ತಿಕ ಮಾಸದಲ್ಲಿ ಅಲ್ಲಿ ಜಾತ್ರೆ ನಡೆಯುತ್ತದೆ; ಅದು ಧಾರ್ಮಿಕ ದೃಷ್ಟಿಯಿಂದ ಬಹಳ ಮಹತ್ವದ ತಿಂಗಳು. ಹಿಂದೂ ಪವಿತ್ರ ಗ್ರಂಥಗಳಲ್ಲಿ ಉಕ್ತವಾದ ಐದು ಪ್ರಮುಖ ಯಾತ್ರಾ ಸ್ಥಳಗಳಲ್ಲಿ ಪುಷ್ಕರವೊಂದು.

ಪುರಾಣದ ಪ್ರಕಾರ, ಪುಷ್ಕರ ಈಗಿರುವ ಪ್ರದೇಶ ಒಮ್ಮೆ ವಜ್ರನಾಭನೆಂಬ ರಾಕ್ಷಸನಿಂದ ಭಯಗ್ರಸ್ತವಾಗಿತ್ತು; ಅವನು ಬ್ರಹ್ಮನ ಮಕ್ಕಳನ್ನು ಕೊಂದ. ಇದನ್ನು ಕೇಳಿ, ದೇವರು ಪ್ರತ್ಯಕ್ಷನಾಗಿ ಅಸುರನನ್ನು ಒಂದು ತಾವರೆ ಹೂವಿನಿಂದ ಕೊಂದ. ಹೂವಿನ ದಳಗಳು ಮೂರು ಸ್ಥಳಗಳಲ್ಲಿ ಉದುರಿ, ಅಲ್ಲಿ ಪುಷ್ಕರವೂ ಸೇರಿದಂತೆ ಮೂರು ಸರೋವರಗಳು ಉದ್ಭವಿಸಿದುವು. ಆದಾದ ಸ್ವಲ್ಪ ಕಾಲದಲ್ಲೇ ಬ್ರಹ್ಮ ಯಜ್ಞವೊಂದನ್ನು ಆಚರಿಸಲು ನಿರ್ಧರಿಸಿ, ಎಲ್ಲ ದೇವತೆಗಳನ್ನೂ ಋಷಿಗಳನ್ನೂ

ಆಮಂತ್ರಿಸಿದ. ಕಾರ್ತಿಕ ಮಾಸದಲ್ಲಿ ಯಜ್ಞ ನಡೆಯಿತು.

ಐವತ್ತೆರಡು ಘಟ್ಟಗಳು ಸುತ್ತುವರಿದ ಪವಿತ್ರ ಸರೋವರದಲ್ಲಿ ಮುಳುಗು ಹಾಕಿ ತಮ್ಮ ಪಾಪಗಳನ್ನು ತೊಳೆದುಕೊಳ್ಳಲು ಸಾವಿರಾರು ಮಂದಿ ಯಾತ್ರಿಕರು ಬರುತ್ತಾರೆ. ಅಲ್ಲಿನ ಸ್ನಾನ ಮರಣಾನಂತರ ಸ್ವರ್ಗ ಪ್ರವೇಶವನ್ನು ಖಚಿತಪಡಿಸುವ ಉದ್ದೇಶವುಳ್ಳದ್ದು. ವರಾಹ ಘಟ್ಟದಲ್ಲಿನ ಸ್ನಾನಕ್ಕೆ ವಿಶೇಷ ಪಾವಿತ್ರ್ಯವುಂಟೆನ್ನಲಾಗಿದೆ; ಏಕೆಂದರೆ, ವಿಷ್ಣು ವರಾಹ ರೂಪದಲ್ಲಿ ಕಾಣಿಸಿಕೊಂಡದ್ದು ಅಲ್ಲಿಯೆ.

ಕಾರ್ತಿಕ ಜಾತ್ರೆಯ ಸಮಯದಲ್ಲಿಯೆ ದನಗಳ ಜಾತ್ರೆಯೊಂದು ಪುಷ್ಕರದಲ್ಲಿ ನಡೆಯುತ್ತದೆ. ಚಾರಣರು ಮತ್ತು ಗಾಯಕರು ಬಹುಸಂಖ್ಯೆಯಲ್ಲಿ ಹಾಜರಿದ್ದು, ಲಾವಣಿಗಳನ್ನೂ ಶೌರ್ಯಸಾಹಸಗಳ ಸಾಂಪ್ರದಾಯಿಕ ಕಥನಗಳನ್ನೂ ಹಾಡುತ್ತಾರೆ.

ಪುಷ್ಕರ ಜಾತ್ರೆ ವರ್ಣರಂಜಿತ ಜನಸಮೂಹಗಳಿಂದ, ಕಾವಿ ಬಟ್ಟೆ ತೊಟ್ಟು ಭಸ್ಮ ಧರಿಸಿದ ಸಾಧುಗಳಿಂದ ಮತ್ತು ಸಾವಿರಾರು ಎತ್ತು, ಹಸು, ಮೇಕೆ, ಕುರಿ ಮತ್ತು ಅಲಂಕೃತವಾದ ಒಂಟೆಗಳಿಂದ ಕೂಡಿ ಆಕರ್ಷಕ, ಜೀವಂತ ದೃಶ್ಯವಾಗಿರುತ್ತದೆ.

### *ಖ್ವಾಜಾ ಮೊಯಿನುದ್ದೀನ್ ಚಿಷ್ಟಿಯ ಉರುಸ್*

ಮುಸ್ಲಿಮರ ಪಾಲಿಗೆ ಅಜ್ಮೀರ್‌ನ ಖ್ವಾಜಾ ಮೊಯಿನುದ್ದೀನ್ ಚಿಷ್ಟಿಯ ಉರುಸ್ ಒಂದು ಭಾರಿ ಆಕರ್ಷಣೆ. ಇಲ್ಲಿ ಎರಡು ಲಕ್ಷಕ್ಕೂ ಹೆಚ್ಚು ಮಂದಿ ಮುಸ್ಲಿಮರು ನೆರೆದು, ಸಂತನ ಸ್ಮೃತಿಗೆ ಅವನ 'ದರ್ಗಾ' ದಲ್ಲಿ ಗೌರವ ಸಲ್ಲಿಸುತ್ತಾರೆ. ದರ್ಗಾದ ಸುತ್ತಮುತ್ತಲ ಸ್ಥಳಗಳು ಈ ಸಂದರ್ಭದಲ್ಲಿ ಉಲ್ಲಾಸದ ದೃಶ್ಯವನ್ನು ಪ್ರದರ್ಶಿಸುತ್ತವೆ. ಸ್ತ್ರೀಪುರುಷರು ಹೊಸ ಬಟ್ಟೆಗಳನ್ನು ತೊಡುತ್ತಾರೆ, ಮಕ್ಕಳು ಖುಷಿಪಡುತ್ತಾರೆ. ಅನೇಕ ಭಕ್ತರು ಫತಿಹ ವಿಧಿಯನ್ನು ನೆರವೇರಿಸಿದ ಬಳಿಕ ಗರೀಬರಿಗೆ ನಿಯಜ್ ಎಂಬ ಭೋಜನವನ್ನು ಏರ್ಪಡಿಸುತ್ತಾರೆ. ಶ್ರೀಮಂತ ಭಕ್ತರು ಖವ್ವಾಲಿ ಮತ್ತು ಮಿಲದ್ ಷರಿಫ್‌ದ ಪಠಣಕ್ಕೆ ವ್ಯವಸ್ಥೆ ಮಾಡುತ್ತಾರೆ.

ಉರುಸ್‌ನ ಮೂಲದ ಬಗ್ಗೆ ಏನನ್ನೂ ಖಚಿತವಾಗಿ ಹೇಳುವುದು ಸಾಧ್ಯವಿಲ್ಲ; ಆದರೆ ಮುಘಲ್ ಚಕ್ರವರ್ತಿ ಅಕ್ಬರ್ ಸಂತನಿಗೆ ಗೌರವ ಸಲ್ಲಿಸಲು ಕಾಲ್ನಡಗೆಯಲ್ಲಿ ಬಂದು, ಪುತ್ರ ಸಂತಾನ ಪಡೆದ ಬಳಿಕ ದರ್ಗಾ ಪ್ರಾಮುಖ್ಯಕ್ಕೆ ಬಂತು. ಮುಂದೆ ಜಹಾಂಗೀರ್ ಕೂಡ ಸಮಾಧಿಗೆ ಗೌರವ ಸಲ್ಲಿಸಿ, ಅಲ್ಲೊಂದು ಮಸೀದಿಯನ್ನು ಕಟ್ಟಿಸಿದ. ಜನಪ್ರಿಯವಾದ ಸಮಾಧಿ ಮುಘಲ್ ಚಕ್ರವರ್ತಿಗಳು ತೋರಿದ ಆಸಕ್ತಿಯಿಂದಾಗಿ ಮತ್ತಷ್ಟು ಪ್ರಸಿದ್ಧವಾಯಿತು; ಭಕ್ತರ ಸಂಖ್ಯೆ ಹೆಚ್ಚುತ್ತ ಹೋಯಿತು. ಅನೇಕ ಮುಸ್ಲಿಮೇತರರು ಕೂಡ ಜಾತ್ರೆಯಲ್ಲಿ ಭಾಗವಹಿಸುತ್ತಾರೆ ಮತ್ತು ಯಾತ್ರಿಕರು ಭಾಗಶಃ ಪಾಕಿಸ್ತಾನದಿಂದ, ಅಂತೆಯೆ ಪಶ್ಚಿಮ ಏಷ್ಯ ಹಾಗೂ ಆಗ್ನೇಯ ಏಷ್ಯದ ಇತರ ಮುಸ್ಲಿಂ ದೇಶಗಳಿಂದ ಬರುತ್ತಾರೆ.

ಖ್ವಾಜಾ ಮೊಯಿನುದ್ದೀನ್ ಚಿಷ್ಟಿ ಇರಾನಿನ ಸಂಜಾರ್‌ದಲ್ಲಿ 1142ರಲ್ಲಿ ಜನಿಸಿದ; ಅವನು ತಂದೆಯ ಕಡೆಯಿಂದ ಪ್ರವಾದಿಯ ಅಳಿಯನಾದ ಹಜ್ರತ್ ಅಲಿಯ ನೇರ ವಂಶಸ್ಥ. ಪಶ್ಚಿಮ ಏಷ್ಯ ಸಮಸ್ಯೆಗಳಲ್ಲಿ ತಳಮಳಿಸುತ್ತಿದ್ದ ಕಾಲದಲ್ಲಿ ಅವನು

ಹುಟ್ಟಿದ. ತನ್ನ ಬಾಲ್ಯದಲ್ಲಿ ಟಾರ್ಟಾರ್ ಆಕ್ರಮಣಕಾರರು ನಡೆಸಿದ ಸಾಮೂಹಿಕ ಕಗ್ಗೊಲೆಗಳ ಘೋರ ದೃಶ್ಯಗಳನ್ನು ಕಂಡ. ಬೆಳೆದ ಮೇಲೆ, ಚಿಶ್ತಿಯ ಪಂಗಡದ ಸೂಫಿ ಪಂಥಕ್ಕೆ ಸೇರಿದ ಅನುಭಾವಿ ಸಂತ ಖ್ವಾಜಾ ಉಸ್ಮಾನ್ ಹರೂನಿಯ ಶಿಷ್ಯನಾದ. ಹುಡುಗನಾಗಿದ್ದಾಗ ಅವನು ಇಡೀ ಕೊರಾನನ್ನು ಬಾಯಿಪಾಠ ಮಾಡಿದ್ದನಂತೆ. ಅವನು ದೇಶದಿಂದ ದೇಶಕ್ಕೆ ಸಂಚರಿಸುತ್ತ, ಐವತ್ತೆರಡನೆಯ ವಯಸ್ಸಿನಲ್ಲಿ ಭಾರತಕ್ಕೆ ಬಂದು, ಅಜ್ಮೀರ್‌ದಲ್ಲಿ ನೆಲಸಿ, 1238ರಲ್ಲಿ ತೀರಿಕೊಂಡ.

ಖ್ವಾಜಾನನ್ನು ದರ್ಗಾದಲ್ಲಿ ಸಮಾಧಿ ಮಾಡಿರುವ ಪವಿತ್ರ ಸ್ಥಳದಲ್ಲಿ ಯಾತ್ರಿಕರು ವಿಪುಲ ನೈವೇದ್ಯವನ್ನರ್ಪಿಸುತ್ತಾರೆ. ಖ್ವಾಜಾನಲ್ಲಿ ಪವಾಡ ಶಕ್ತಿಗಳಿದ್ದು, ಅವನು ಗಂಡು ಸಂತಾನವನ್ನು ಕರುಣಿಸಬಲ್ಲ, ವ್ಯಾಧಿಗಳನ್ನು ಗುಣಪಡಿಸಬಲ್ಲ, ಭೂತ ಪ್ರೇತಗಳನ್ನು ನಿವಾರಿಸಬಲ್ಲ ಮತ್ತು ಒಳ್ಳೆಯ ಅದೃಷ್ಟವನ್ನು ತರಬಲ್ಲ ಎಂದು ನಂಬಲಾಗಿದೆ.

ಈ ಸಮಾಧಿ ಭವನ ನಗರದ ಹೃದಯದಲ್ಲಿ ಒಂದು ರತ್ನದಂತೆ ನೆಲೆಗೊಂಡಿದ್ದು, ಭಾರತದ ಆಕರ್ಷಣೆಗಳಲ್ಲಿ ಒಂದಾಗಿದೆ. ಯಾವುದೇ ದೃಷ್ಟಿಕೋನದಿಂದ–ಪ್ರಾಕ್ತನ ಶಾಸ್ತ್ರೀಯ ಅಥವಾ ಶಾಸ್ತ್ರೀಯ– ನೋಡಿದರೂ, ದರ್ಗಾ ವಿಶಿಷ್ಟವಾಗಿದೆ. ಮುಖ್ಯ ಪೂಜಾಮಂದಿರದಲ್ಲಿ ಅಮೃತ ಶಿಲೆಯ ನೆಲಗಟ್ಟು ಹಾಗೂ ಚಿನ್ನದ ಗೋಪುರವನ್ನುಳ್ಳ ಸುಂದರ ಗೋರಿಯುಂಟು. ಗೋರಿ ರತ್ನ ಖಚಿತವಾದ ಬಿಳಿಯ ಅಮೃತಶಿಲೆಯದು. ಅದನ್ನು ಚಿನ್ನ, ಬೆಳ್ಳಿ ಸರಿಗೆಯಿಂದ ಕಸೂತಿ ಹಾಕಿದ ಮಖಮಲ್ಲಿನಿಂದ ಮುಚ್ಚಲಾಗಿದೆ. ಬೆಳ್ಳಿಯ ಪರದೆ ಆವರಿಸಿದ ಗೋರಿಯ ಸುತ್ತ ಬೆಳ್ಳಿಯ ಕಂಬಿಯಿದೆ. ಗೋರಿಯ ಚಾವಣಿ ಕಸೂತಿ ಹಾಕಿದ ಮಖಮಲ್ಲಿನಿಂದ ಅಲಂಕೃತವಾಗಿದೆ. ಭಕ್ತರು ಅರ್ಪಿಸಿದ ಗುಲಾಬಿ, ಜಾಜಿಗಳ, ಶ್ರೀಗಂಧದ, ಪರಿಮಳ ದ್ರವ್ಯಗಳ ಮತ್ತು ಧೂಪದ ಸುವಾಸನೆ ಗಾಳಿಯನ್ನು ವ್ಯಾಪಿಸುತ್ತದೆ. 'ಬೇಗಮಿ ದಲಿನ್' ಎಂಬ ಸುಂದರ ಮುಖಮಂಟಪ ಮುಖ್ಯ ದ್ವಾರದ ಮೇಲಿದೆ. ಅದನ್ನು ಷಹಜಹಾನನ ಮಗಳು, ರಾಜಪುತ್ರಿ ಜಹನಾರ ಕಟ್ಟಿಸಿದಳು. ಈ ತೊಟ್ಟಿಯ ಗೋಡೆಗಳು, ಕಂಬಗಳು ಮತ್ತು ಚಾವಣಿ ಸುವರ್ಣಭೂಷಿತವಾಗಿವೆ.

ಇತರ ಆಕರ್ಷಣೆಗಳಲ್ಲಿ ಒಂದೆಂದರೆ, ಸುಮಾರು 22.5 ಮೀಟರ್ ಎತ್ತರದ ಬುಲಂದ್ ದರ್ವಾಜ. ಉತ್ತರ ದ್ವಾರದ ತುದಿಯಲ್ಲಿ, ಅಕ್ಬರನ ಕಾಣಿಕೆಯಾದ ಎರಡು ಭಾರಿ ನಗಾರಿಗಳಿವೆ. ಈ ನಗಾರಿಗಳನ್ನು ನಿರ್ದಿಷ್ಟ ಗಂಟೆಗಳಲ್ಲಿ ಇತರ ಸಂಗೀತ ವಾದ್ಯಗಳೊಡನೆ– ನಫಿರಿ ಮತ್ತು ಷಹನಾಯಿ–ಬಾರಿಸಲಾಗುತ್ತದೆ. ಅಕ್ಬರ್ ಕಟ್ಟಿಸಿದ ಅಕ್ಬರಿ ಮಸೀದಿ ಮತ್ತು ಮೆಹಫಿಲ್ ಖಾನಾ (ಸಭಾಂಗಣ) ಗಳನ್ನು ಉರುಸುಗಳ ಅವಧಿಯಲ್ಲಿ ಕವ್ವಾಲಿಗಳಿಗಾಗಿ ಬಳಸಲಾಗುತ್ತದೆ. ಬುಲಂದ್ ದರ್ವಾಜಾದ ಎರಡೂ ಪಕ್ಕಗಳಲ್ಲಿ ಎರಡು ದೇಗ್ (ಕಡಾಯಿ)ಗಳನ್ನು ಕಲ್ಲುಕಟ್ಟಿ ಭದ್ರಪಡಿಸಲಾಗಿದೆ. ಅವುಗಳಲ್ಲಿ ದೊಡ್ಡದರ ಸುತ್ತಳತೆ ಮೂರು ಮೀಟರಿಗೂ ಮಿಗಿಲಿದ್ದು, ಅದು 37 ಕ್ವಿಂಟಾಲ್‌ಗಳಷ್ಟು ಖೀರು ಹಿಡಿಸಬಲ್ಲದು. ಸಣ್ಣದರ ಅಳತೆ 30 ಕ್ವಿಂಟಾಲ್. ದೊಡ್ಡ ಕಡಾಯಿಯಲ್ಲಿ ಸಕ್ಕರೆ, ತುಪ್ಪ ಮತ್ತು ಒಣ ಹಣ್ಣುಗಳಿಂದ ಖೀರನ್ನು ತಯಾರಿಸುವ

ಖರ್ಚು ಸುಮಾರು 8,000 ರೂ. ಆದರೆ, ಸಣ್ಣದರ ಖರ್ಚು 5,000 ರೂ. ದೊಡ್ಡ ಕಡಾಯಿಯನ್ನು ಅಕ್ಬರ್, ಸಣ್ಣದನ್ನು ಜಹಾಂಗೀರ್ ಸಮರ್ಪಿಸಿದರು. ಉರುಸ್ ಕಾಲದಲ್ಲಿ ಅನ್ನ ಬೇಯಿಸಲಾಗುತ್ತದೆ; ಅದನ್ನು 'ದರ್ಗಾ' ದ ಸೇವಕರು ತೆಗೆದುಕೊಳ್ಳಬಹುದು. ಈ ಪದ್ಧತಿ ಅಕ್ಬರನಿಂದ ಮೊದಲಾಯಿತು: ತುಬುರ್ರುಕ್ (ಪ್ರಸಾದ) ವಿನಿಯೋಗದ ಬಗೆಗೆ ಜನರಲ್ಲಿ ಜಗಳ ತಪ್ಪಿಸಿ, ಅಪವ್ಯಯವನ್ನು ತಡೆಗಟ್ಟಿ, 'ದರ್ಗಾ' ದ ಸೇವಕರು ಮಾತ್ರ ಪ್ರಸಾದದಲ್ಲಿ ಪಾಲ್ಗೊಳ್ಳುವಂತೆ ಮಾಡುವುದು ಅದರ ಉದ್ದೇಶ. ವಿಶೇಷ ಸಾಮಾನು ಚೀಲವೊಂದನ್ನು ಹಿಡಿದು ಶ್ರದ್ಧಾಳು ಭಕ್ತರು ಸುಡುವಿಕೆಯ ಮತ್ತು ಉಸಿರುಗಟ್ಟುವಿಕೆಯ ಅಪಾಯವನ್ನೆದುರಿಸುತ್ತ ಕಡಾಯಿಗಳೊಳಕ್ಕೆ ದುಮುಕುತ್ತಾರೆ. ಸುತ್ತ ನಿಲ್ಲುವ ಇತರರು ಪವಿತ್ರಾಹಾರವನ್ನು ತೊಟ್ಟಿಕ್ಕಿಸುತ್ತ ಹೊರಬರುವವರನ್ನು ಎಳೆಯುತ್ತಾರೆ ಮತ್ತು ನೆಕ್ಕುತ್ತಾರೆ. ಉಳಿದವರು ಅದನ್ನು ನೆಲದ ಮೇಲಿಂದೆತ್ತಿಕೊಳ್ಳುತ್ತಾರೆ.

'ಖವ್ವಾಲಿ'ಗಳು ನಡೆಯುವಾಗ, ಅನೇಕ ಪ್ರೇಕ್ಷಕರು ಕಂಪಿಸುತ್ತ, ತಮ್ಮ ಮೈಗಳನ್ನು ತ್ವರಿತವಾಗಿ ಆಡಿಸುತ್ತ, 'ಖವ್ವಾಲ'ರೊಡನೆ 'ಖವ್ವಾಲಿ'ಗಳ ಪಲ್ಲವಿಯನ್ನು ಪುನರಾವರ್ತಿಸುತ್ತ ಸಮಾಧಿಗತರಾಗುತ್ತಾರೆ. ಈ ಅವಸ್ಥೆಯನ್ನು *ಹಲ್* ಎಂದು ಕರೆಯುತ್ತಾರೆ; ಕೆಲವೊಮ್ಮೆ ಹಲವಾರು ಮಂದಿ ಅದರಿಂದ ಪ್ರಭಾವಿತರಾಗುತ್ತಾರೆ. ಕೆಲವು ವರ್ಷಗಳ ಹಿಂದೆ, ಸುಮಾರು 2,000 ಮಂದಿ ಖವ್ವಾಲಿಯೊಂದರ ನಿರೂಪಣೆಯ ವೇಳೆಯಲ್ಲಿ ತುದಿಗಾಲ ಮೇಲೆ ನಿಂತರು. ಸುಮಾರು ಹದಿನೈದು ನಿಮಿಷಗಳ ಕಾಲ ಬಿಗಡಾಯಿಸಿದ ಸನ್ನಿವೇಶ ನಿಧಾನವಾಗಿ 'ಖವ್ವಾಲ್' ಗಳನ್ನು ಹಿಂದೆಗೆದುಕೊಳ್ಳುವುದರ ಮೂಲಕ ತಿಳಿಯಾಯಿತು.

ಗರ್ಭಗುಡಿ ನಿತ್ಯವೂ ಭಕ್ತರಿಗೆ ತೆರೆದಿರುತ್ತದೆ. ಅವರು ಹೂವು, ಪನ್ನೀರು, ಪರಿಮಳ ದ್ರವ್ಯ, ವಸ್ತ್ರ, ನಗದುಗಳನ್ನು ಸಮರ್ಪಿಸುತ್ತಾರೆ. ಭಕ್ತರು ತಮ್ಮ ಕಾಣಿಕೆಗಳೊಡನೆ ಗೋರಿಯನ್ನು ಪ್ರವೇಶಿಸುತ್ತಾರೆ. ಅವರನ್ನು *ಖದಿಮ್*‌ರು ಸ್ವಾಗತಿಸಿ, ಪ್ರತಿಯಾಗಿ ಅವರಿಗೆ ಕೆಲವು ಹೂಗಳನ್ನು ಕೊಡುತ್ತಾರೆ. ಭಕ್ತರು ವಸ್ತ್ರವನ್ನೂ ಉತ್ತರೀಯಗಳನ್ನೂ ಕಣ್ಣಿಗೊತ್ತಿಕೊಂಡು, ತಮ್ಮ ಪಾಪಗಳನ್ನು ಕ್ಷಮಿಸುವಂತೆ, ವ್ಯಾಧಿಗಳನ್ನು ಗುಣಪಡಿಸುವಂತೆ ಅಥವಾ ಪುತ್ರ ಸಂತಾನ ಕರುಣಿಸುವಂತೆ ಖ್ವಾಜಾನನ್ನು ಬೇಡುತ್ತಾರೆ. ಪ್ರತಿಯೊಬ್ಬರೂ ಸಾಧ್ಯವಾದಷ್ಟು ದೀರ್ಘಕಾಲ ಅಲ್ಲಿರಬಯಸುತ್ತಾರೆ, ಹೊರಗಿನಿಂದ ಬರುವ ಭಕ್ತರ ಪ್ರವಾಹ ತಮ್ಮನ್ನು ಕೊಚ್ಚಿ ಹೊರ ಹಾಕುವತನಕ.

ಗರ್ಭಗುಡಿಯ ಮುಂದೆಯೆ 'ಖವ್ವಾಲ' ರು ಖ್ವಾಜಾಗೆ ಗಟ್ಟಿಯಾಗಿ ತಮ್ಮ ಭಕ್ತಿಯನ್ನರ್ಪಿಸುತ್ತ ಕುಳಿತಿರುತ್ತಾರೆ. ಜನ ಆಗಾಗ ಹಾಡಿನ ಲಯಕ್ಕೆ ತಲೆದೂಗುತ್ತಾರೆ ಮತ್ತು ಕಡೆಯ ಶಬ್ದಗಳನ್ನು ಪಠಿಸುತ್ತಾರೆ ಹಾಗೂ ಆಗಾಗ ಗಮನಾರ್ಹ ಪದ್ಯಗಳಿಗೆ ನಗದು ಬಹುಮಾನ ಕೊಡುತ್ತಾರೆ.

ಅನೇಕ ಫಕೀರರನ್ನು ಖ್ವಾಜಾನ ಹೆಸರಿನಲ್ಲಿ ಭಿಕ್ಷೆ ಬೇಡುವುದನ್ನು ಕಾಣಬಹುದು. ತೊಟ್ಟಿಗಳಲ್ಲಿ ನೀರು ತುಂಬಿಸುವುದಾಗಿ ಭಿಕ್ಷುಗಳಿಗೆ ದುಡ್ಡು ಕೊಡಲಾಗುತ್ತದೆ. ತಮ್ಮ

ಪೋಷಕರ ಹೆಸರು, ವಿಳಾಸಗಳನ್ನು ಗುರುತು ಹಾಕಿಕೊಂಡು, ಅವರಿಗೆ ದಸ್ತರ್ (ವಿಧಿವತ್ತಾದ ರುಮಾಲು) ಮತ್ತು ತಬುರ್ರುಕ್‌ಗಳನ್ನು ಕೊಡುತ್ತ ಅವರನ್ನು 'ದರ್ಗಾ' ದ ಸುತ್ತ ಕರೆದೊಯ್ಯುವ 'ಮುಜವಿರ್' ಗಳಿರುತ್ತಾರೆ. ದುಷ್ಟಶಕ್ತಿಗಳ ಬಾಧೆಯಿಂದ ನರಳುತ್ತ, ನಡುಗುತ್ತ, ಕೈಕಾಲುಗಳನ್ನು ಭಯಂಕರವಾಗಿ ಒದರುವ ಮಂದಿಯನ್ನೂ ಕಾಣಬಹುದು. *ರಜಬ್*‌ನ ಆರನೆಯ ದಿವಸ *ಕ್ವುಲ್* (ಸರ್ವಸಮಾಪ್ತಿ) ದೊಡನೆ 'ಉರುಸ್' ಕೊನೆಗೊಳ್ಳುತ್ತದೆ. ಪವಿತ್ರ ಕುರಾನ್‌ನಿಂದ ಪಠಣ ಮತ್ತು 'ಖವ್ವಾಲಿ' ಗಾಯನ ಅದರ ವೈಶಿಷ್ಟ್ಯ. ಮಧ್ಯಾಹ್ನ 1 ಗಂಟೆಯ ಹೊತ್ತಿಗೆ ಸಂಗೀತ ವಾದ್ಯಗಳನ್ನು ನುಡಿಸಲಾಗುತ್ತದೆ. ಮತ್ತು ಪಟಾಕಿ ಸಿಡಿಸಲಾಗುತ್ತದೆ. ಸಜದ–ನಷೀನ್, *ಫಾತಿಹ* ಹಾಗೂ *ಸಲಾಮತಿಯನ್ನು* ವಾಚಿಸುವುದಕ್ಕಾಗಿ ಗೋರಿಯ ಬಳಿಗೆ ಹೋಗುತ್ತಾನೆ. ಸಂಜೆ ಖ್ವಾಜಾನ ಸಾವಿಗಾಗಿ ಶೋಕ ಸಭೆ ನಡೆಯುತ್ತದೆ. ವಿದ್ವಾಂಸರಿಂದ ಧರ್ಮವನ್ನು ಕುರಿತು ಉಪನ್ಯಾಸಗಳು ನಡೆಯುತ್ತವೆ.

*ರಜಬ್*‌ನ ಮೊದಲ ಮತ್ತು ಒಂಬತ್ತನೆಯ ದಿನಗಳ ನಡುವೆ ಬರುವ ಶುಕ್ರವಾರ ಪವಿತ್ರವೆಂದು ಪರಿಗಣಿತವಾಗುತ್ತದೆ. ಎಲ್ಲೆಡೆಗಳಿಂದ ಜನ ನಮಾಜು ಮಾಡಲು ಬರುತ್ತಾರೆ. ಅನೇಕರು *ಕ್ವುಲ್* ವಿಧಿಗಿಂತ ಶುಕ್ರವಾರದ ಪ್ರಾರ್ಥನೆಗೆ ಹೆಚ್ಚು ಮಹತ್ವ ಕೊಡುತ್ತಾರೆ. ಒಂದು 'ಮುಷೈರ' ಕೂಡ ನಡೆಯುತ್ತದೆ; ದೇಶದ ಮೂಲೆ ಮೂಲೆಗಳಿಂದ ಬಂದ ಕವಿಗಳು ಅದರಲ್ಲಿ ಭಾಗವಹಿಸಿ, ಖ್ವಾಜಾನ ಗೌರವಾರ್ಥ ಕವನ ವಾಚನ ಮಾಡುತ್ತಾರೆ.

### *ಶ್ರೀ ಮಹಾವೀರ್‌ಜಿ ಜಾತ್ರೆ*

ಜೈನರ ಅತ್ಯಂತ ದೊಡ್ಡ ಮೇಳ, ಸವಾಯಿ ಮಧೋಪುರ ಜಿಲ್ಲೆಯ ಹಿಂದೌನ್ ತಹಶೀಲ್‌ನಲ್ಲಿ ಗಂಭೀರಾ ನದಿಯ ದಡಗಳ ಮೇಲೆ ಚಂದನಗಾಂವ್ ಗ್ರಾಮದಲ್ಲಿ ನಡೆಯುತ್ತದೆ. ಅದು ಜೈನರ ಇಪ್ಪತ್ತನಾಲ್ಕನೆಯ ತೀರ್ಥಂಕರನಾದ ಶ್ರೀ ಮಹಾವೀರ ಸ್ವಾಮಿಯ (ಕ್ರಿ. ಪೂ. ಆರನೆಯ ಶತಮಾನ) ಸ್ಮರಣಾರ್ಥ ಜರುಗುತ್ತದೆ. ಚಂದ ಗಾಂವ್ ಜೈನರ ಪವಿತ್ರತಮ ಸ್ಥಳಗಳಲ್ಲೊಂದಾಗಿದ್ದು, ವರ್ಷದುದ್ದಕ್ಕೂ ಯಾತ್ರಿಕ ರನ್ನು ಸೆಳೆಯುತ್ತದೆ.

ಐತಿಹ್ಯದ ಪ್ರಕಾರ, ಕಿರ್ಪದಾಸ್ ಎಂಬ ಮೋಚಿ, ಈಗ ಅವನ ಹೆಸರಿಡಲಾಗಿರುವ ಒಂದು ದಿಬ್ಬದ ಮೇಲೆ ದನ ಮೇಯಿಸುತ್ತಿದ್ದನಂತೆ. ಅವನ ಹಸುಗಳಲ್ಲೊಂದು ಕೆಲವು ದಿವಸ ಹಾಲು ಕೊಡಲಿಲ್ಲ. ಕಾರಣ ಕಂಡುಹಿಡಿಯುವುದಕ್ಕಾಗಿ ಅವನದನ್ನು ಹಿಂಬಾಲಿಸಿದ. ದಿಬ್ಬದ ಮೇಲೆ ಒಂದೆಡೆ ಅದು ಹಾಲು ಸುರಿಸುತ್ತಿದ್ದುದನ್ನು ಕಂಡು ಅವನು ಬೆರಗಾದ. ಅವನು ಅಲ್ಲಿ ಅಗೆದಾಗ, ಒಂದು ಕಂದು ಬಣ್ಣದ ವಿಗ್ರಹ ಸಿಕ್ಕಿತು. ಜನ ಅದನ್ನು ನೋಡಲು ಎಲ್ಲೆಡೆಗಳಿಂದ ಬಂದು ಮುತ್ತಿಕೊಂಡರು. ಕಿರ್ಪದಾಸ್ ಪ್ರತಿಮೆಯನ್ನೊಂದು ಗುಡಿಸಲಿನಲ್ಲಿ ಪ್ರತಿಷ್ಠಾಪಿಸಿದ. ಆದರೆ ಅದು ಹಲವಾರು ಭಕ್ತರನ್ನು ಆಕರ್ಷಿಸಿದರೂ, ಅದನ್ನು ಯಾರೂ ಗುರುತಿಸಲಾಗಲಿಲ್ಲ.

ಕಡೆಗೆ ಬಸ್ವದ ಅಮುರ್‌ಚಂದ್ ಬಿಲಾಲ್ ಎಂಬ ಒಬ್ಬ ಜೈನ ಆ ಪ್ರತಿಮೆಯನ್ನು ಮಹಾವೀರಜಿಯದೆಂದು ಗುರುತಿಸಿದ. ದೇವಾಲಯವೊಂದರ ನಿರ್ಮಾಣಕ್ಕಾಗಿ ಅವನು ಬಹಳ ಹಣ ಕೊಟ್ಟ. ಜಯಪುರದ ಜೈನರು ಪ್ರತಿಮೆಯನ್ನು ತಮ್ಮ ನಗರದ ದೇವಾಲಯವೊಂದರಲ್ಲಿ ಪ್ರತಿಷ್ಠಾಪಿಸಬಯಸಿದರು. ವಿಗ್ರಹವನ್ನು ಬಹುಕಷ್ಟದಿಂದ ರಥದಲ್ಲಿರಿಸಲಾಯಿತು. ಆದರೆ ಅವರು ಎಷ್ಟೇ ಪ್ರಯತ್ನಪಟ್ಟರೂ ರಥ ಚಲಿಸಲಿಲ್ಲ ವಂತೆ. 1782ರಲ್ಲಿ ಜಯಪುರದ ಮಹಾರಾಜ ನೌರಂಗಾಬಾದ್ ಅಥವಾ ಅಲಂಗಿರ್ ಪುರದಲ್ಲಿ ವಿಗ್ರಹಕ್ಕಾಗಿ ದೇವಾಲಯವೊಂದಕ್ಕೆ ಜಮೀನು ದತ್ತಿ ನೀಡಿದ. ದೇಗುಲದಲ್ಲಿ ವಿಗ್ರಹವನ್ನು ಹದಿನೆಂಟನೆಯ ಶತಮಾನದ ಕಡೆಯ ವರ್ಷಗಳಲ್ಲಿ, ಚೈತ್ರಮಾಸದಲ್ಲಿ ಪ್ರತಿಷ್ಠಾಪಿಸಲಾಯಿತು. ಈಗಿನ ದೇವಾಲಯವನ್ನು ಹಳೆಯ ದೇವಾಲಯವಿದ್ದ ಜಾಗದಲ್ಲೇ ಕಟ್ಟಲಾಯಿತು. ವಾರ್ಷಿಕ ರಥಯಾತ್ರೆಯ ಉತ್ಸವದಲ್ಲಿ, ಕಿರ್ಪದಾಸನ ವಂಶಸ್ಥನೊಬ್ಬ ತಳ್ಳದಿದ್ದರೆ ರಥ ಚಲಿಸುವುದೇ ಇಲ್ಲವೆಂದು ನಂಬಲಾಗಿದೆ.

ಈ ಜಾತ್ರೆಗೆ ಜೈನರು ಮಾತ್ರವಲ್ಲ, ಮೀನರು ಮತ್ತು ಗುಜರರು ಕೂಡ ಬರುತ್ತಾರೆ. ಅವರ ಹಾಡುಗಳು ಮತ್ತು ಕುಣಿತಗಳು ಜಾತ್ರೆಗೆ ಬಣ್ಣ, ಬೆಡಗುಗಳನ್ನು ಕೊಡುತ್ತವೆ. ದೇಗುಲದ ವೈಶಿಷ್ಟ್ಯವೆಂದರೆ, ಜನ ಪಾದರಕ್ಷೆ ಹಾಕಿಕೊಂಡೆ ಪ್ರವೇಶಿಸಲು ಅವಕಾಶವಿರುವುದು. ದೇವಾಲಯ ಎಲ್ಲ ಜಾತಿ, ಕೋಮುಗಳಿಗೆ ತೆರೆದಿರುತ್ತದೆ.

### *ಕೈಲಾ ದೇವಿ ಜಾತ್ರೆ*

ಕೈಲಾದೇವಿ ಜಾತ್ರೆ ರಾಜಾಸ್ಥಾನದ ಪ್ರಮುಖ ಜಾತ್ರೆಗಳಲ್ಲೊಂದು. ಅದು, ಸವಾಯಿ ಮಧೋಪುರ್ ಜಿಲ್ಲೆಯ ಕರೌಲಿ ಉಪವಿಭಾಗದ ಕೈಲಾದಲ್ಲಿ ಚೈತ್ರ ಕೃಷ್ಣ 12ರಿಂದ ಚೈತ್ರ ಶುಕ್ಲ 12ರವರೆಗೆ ನಡೆಯುತ್ತದೆ. ಕೈಲಾ ಮತ್ತು ಭವಾನಿ ಅಭಿನ್ನ ಎನ್ನಲಾಗಿದೆ; ಅವಳ ಪ್ರತಿಮೆಯನ್ನು ಕ್ರಿ.ಶ. 1114 ರಲ್ಲಿ ಬಹು ಸುಂದರವಾದ ಪರಿಸರದಲ್ಲಿ ಬಂಡೆಯೊಂದರ ತುದಿಯಲ್ಲಿ ನಿಂತ ದೇವಾಲಯವೊಂದರಲ್ಲಿ ಪ್ರತಿಷ್ಠಾಪಿಸಲಾಯಿತೆಂದು ಹೇಳಲಾಗಿದೆ.

ಕಾಲಿ ಸಿಲ್ ನದಿಯ ದಡಗಳ ಮೇಲೆ ವಾಸಿಸುತ್ತಿದ್ದ ಕೇದಾರ್‌ಗಿರಿ ಎಂಬ ಸಾಧುವಿನ ಹೆಸರಿನಿಂದ ಗ್ರಾಮವನ್ನು ಕಾಲಿಯ ಎಂದು ಕರೆಯಲಾಯಿತು. ಕಾಲಿಯ ಮಾತಾ ದೇವಾಲಯದಲ್ಲಿ ಎರಡು ವಿಗ್ರಹಗಳು ಅಕ್ಕಪಕ್ಕದಲ್ಲಿವೆ. ಬಲಗಡೆ ಕೈಲಾದೇವಿಯ ಪ್ರತಿಮೆಯಿದೆ; ಸಾಮಾನ್ಯವಾಗಿ ಅವಳನ್ನು ಲಕ್ಷ್ಮಿ ಎಂದು ಕರೆಯಲಾಗುತ್ತದೆ; ಎಡಗಡೆ ಚಾಮುಂಡಾ ವಿಗ್ರಹವಿದೆ. ಮೂಲ ದೇವಾಲಯವೊಂದು 'ಕುಟ್ಟ' ವಾಗಿತ್ತು.

ಕಿಂಚಿಗಳ ಪತನದ ನಂತರ, ಆ ಪ್ರದೇಶವನ್ನು ಯಾದವರು ವಶಪಡಿಸಿಕೊಂಡು, ಕರೌಲಿಯಲ್ಲಿ ನೆಲೆಗೊಂಡರು. ಈ ದೊರೆಗಳಿಗೆ ದೇವಿಯ ಪವಾಡ ಶಕ್ತಿಗಳ ಅರಿವಾಯಿತು; ಅವರು ಈ ಕಾರಣಕ್ಕಾಗಿ ಮಾತ್ರವಲ್ಲದೆ, ಆ ಪ್ರದೇಶದ ಜನರ ಬೆಂಬಲ ಗಳಿಸಲು ಅವಳನ್ನು ಪೂಜಿಸತೊಡಗಿದರು. ಮಹಾರಾಜ ಗೋಪಾಲ ಸಿಂಘ್





1. ಮರಳು ದಿಬ್ಬಗಳು ಮತ್ತ ಮರುಭೂಮಿಯ ಹಡಗು

2. ನೀರಿಗಾಗಿ ಅಲೆದಾಟ



3. ಬುಡಕಟ್ಟು ಜನಾಂಗದ ದಂಪತಿಗಳು





4. ಕಾಡಿನಲ್ಲಿ ವಾಸಿಸುವ ಬಿಲ್ಲುಗಾರ

5. ಗಂಗೌರ್ ಹಬ್ಬ





6. ತೇರ ತಾಲಿ ನೃತ್ಯ

7 ಲಂಗರು ಹಾಡುಗಾರರು.





8. ಒಂದು ಸಮೂಹ ನೃತ್ಯ

9. ಮದರಂಗಿ ಹಚ್ಚಿದ ಕೈಗಳು



10. ತೀಜ್ ಹಬ್ಬ



11. ಆಭರಣಗಳನ್ನು ಹಾಕಿಕೊಂಡು ರಾಜಸ್ಥಾನಿ ಮಹಿಳೆ ಗೋಧಿ ಕುಟ್ಟುತ್ತಿರುವುದು.



12. ಆಭರಣದ ಖಯಾಲಿ

ಚಿನ್ನದ ಶಿಖರದ ಗೋಪುರವನ್ನುಳ್ಳ ದೊಡ್ಡ ದೇವಾಲಯವೊಂದನ್ನು ಕಟ್ಟಿಸಿದ. ಇಲ್ಲಿ ಇತರ ಅನೇಕ ಕಟ್ಟಡಗಳ ನಿರ್ಮಾಣವಾದದ್ದು, ಮತ್ತು ತನ್ನ ಪಾವಿತ್ರ್ಯ ಹಾಗೂ ದೃಶ್ಯರಮ್ಯತೆಗಾಗಿ ಈ ಪ್ರದೇಶ ವ್ಯಾಪಕ ಜನಪ್ರಿಯತೆ ಗಳಿಸಿಕೊಂಡದ್ದು ಮಹಾರಾಜ ಭನ್ವರ್ ಪಾಲನ ಕಾಲದಲ್ಲಿ. ಜಾತ್ರೆ ಎರಡು ವಾರಗಳ ಕಾಲ ನಡೆಯುತ್ತದೆ. ಆ ಅವಧಿಯಲ್ಲಿ ದೇವಿಯನ್ನು ಪ್ರಸನ್ನಳಾಗಿಸುವುದಕ್ಕಾಗಿ ದೇವಾಲಯದ ಹೊರಗೆ ಪ್ರಾಣಗಳನ್ನು ಬಲಿಕೊಡಲಾಗುತ್ತದೆ.

ಸುತ್ತಮುತ್ತಣ ಪ್ರದೇಶಗಳಿಂದ ವ್ಯಾಪಾರಿಗಳು ಜಾತ್ರೆಗೆ ಬಂದು, ತುರುಸಿನ ವಹಿವಾಟು ನಡೆಸುತ್ತಾರೆ. ರಜಪೂತರು, ಮೀನರು ಮತ್ತು ಇತರ ಕೆಲವು ಪರಿಶಿಷ್ಟ ಜಾತಿಗಳ ಸದಸ್ಯರು ಕೈಲಾದೇವಿಯ ಪ್ರಮುಖ ಭಕ್ತರಲ್ಲಿ ಸೇರಿರುತ್ತಾರೆ.

## ಶೀತ್ಲಮಾತಾ ಜಾತ್ರೆ

ಸಿಡುಬಿನ ದೇವಿಯ ಗೌರವಾರ್ಥ ಶೀತ್ಲಮಾತಾ ಜಾತ್ರೆ ಶೀತ್ಲ ಅಷ್ಟಮಿ ದಿನದಂದು ಎಲ್ಲ ಗ್ರಾಮ, ನಗರಗಳಲ್ಲಿ ನಡೆಯುತ್ತದೆ.

ಅತ್ಯಂತ ದೊಡ್ಡ ಜಾತ್ರೆ ಜೈಪುರ ಜಿಲ್ಲೆಯ ದೂಂಗ್ರಿ ಗ್ರಾಮದಲ್ಲಿ ಪ್ರತಿವರ್ಷ ಮಾರ್ಚ್–ಏಪ್ರಿಲ್‌ನಲ್ಲಿ ನಡೆಯುತ್ತದೆ. ಈ ಹಳ್ಳಿಗೆ ದೇವಿಯ ಹೆಸರಿಡಲಾಗಿದೆ. ದೂಂಗ್ರಿ ಎಂದು ಸ್ಥಳೀಯವಾಗಿ ಕರೆಯಲಾಗುವ ಒಂದು ಗುಡ್ಡದ ಮೇಲೆ ಮಾತೆಯ ದೇವಾಲಯವಿದೆ. ಈಗಿನ ದೇವಾಲಯ ಜಯಪುರದ ಮಹಾರಾಜ ಮಾಧವಸಿಂಹನಿಂದ ನಿರ್ಮಿತವಾಯಿತೆಂದು ಹೇಳಲಾಗಿದೆ. ಜಾತ್ರೆಗೆ ಒಂದು ಲಕ್ಷ ಅಥವಾ ಅದಕ್ಕಿಂತ ಹೆಚ್ಚು ಜನ ಬರುತ್ತಾರೆ.

ಶೀತ್ಲ ಮಾತೆಯನ್ನು ರಾಜಾಸ್ಥಾನದ ಬಹುತೇಕ ಎಲ್ಲ ಸಮಾಜಗಳೂ ಪೂಜಿಸುತ್ತವೆ. ಆಕೆ ಪೌರಾಣಿಕ ದೇವಿಯರಲ್ಲಿ ಒಬ್ಬಳಾಗಿದ್ದು, ಆಗಾಗ ಉಗ್ರರೂಪ ತಳೆಯುತ್ತಾಳೆ.

ದೇಶಾದ್ಯಂತ ಶೀತ್ಲಮಾತೆಯನ್ನು ಪೂಜಿಸಿ, ಗೌರವಿಸಲಾಗುತ್ತದೆ. ಆದರೆ ಆಕೆಯನ್ನು ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತದೆ. ಉತ್ತರ ಪ್ರದೇಶದಲ್ಲಿ ಆಕೆ ಮಾತಾ ಅಥವಾ ಮಹಾತಾಯಿಯೆಂದು, ಪಶ್ಚಿಮ ಭಾರತದಲ್ಲಿ ಮಾಯಿ ಅನಮ ಎಂದು, ರಾಜಾಸ್ಥಾನದಲ್ಲಿ ಸಧ್, ಶೀತ್ಲ ಅಥವಾ ಸೇದಲ್ ಮಾತಾ ಎಂದು ಪ್ರಸಿದ್ಧಳಾಗಿದ್ದಾಳೆ. 'ಶೀತ್ಲ' ಶಬ್ದ 'ಶೀತಲ್' (ಪ್ರಶಾಂತ) ಎಂಬುದರಿಂದ ಬಂದಿದೆ. ಶೀತ್ಲಮಾತೆ ತೀವ್ರ ಜ್ವರಪೀಡಿತನಾದ ರೋಗಿಯನ್ನು ಸಂತೈಸಲು ಸಿಡುಬಿನ ರೂಪದಲ್ಲಿ ಬರುತ್ತಾಳೆಂಬುದು ನಂಬಿಕೆ.

ಜೈಪುರ್ ಜಿಲ್ಲೆಯಲ್ಲಿ ಅತ್ಯಂತ ದೊಡ್ಡದಾದ ಈ ಜಾತ್ರೆಗೆ ಎತ್ತಿನ ಬಂಡಿಗಳ ಜಾತ್ರೆ ಎಂದೂ ಹೆಸರು. ಮಾತೆಯ ಭಕ್ತರು ಅಲಂಕೃತವಾದ ತಮ್ಮ ಎತ್ತಿನಗಾಡಿಗಳಲ್ಲಿ ಎಲ್ಲೆಡೆಗಳಿಂದ ಬರುತ್ತಾರೆ; ಎತ್ತುಗಳ ಕೊರಳುಗಳಿಗೆ ಕಟ್ಟಿದ ಗಂಟೆಗಳ ದನಿ ವಾತಾವರಣವನ್ನು ತುಂಬುತ್ತದೆ. ದೇವಾಲಯದ ಕಿರೀಟ ಧರಿಸಿದ ಗುಡ್ಡದ ಬುಡದಲ್ಲಿ ಈ ಗಾಡಿಗಳ ಮತ್ತು ಅವುಗಳ ವರ್ಣರಂಜಿತ ಒಡೆಯರ ಮೇಳ

ರಾಜಾಸ್ಥಾನದ ಸ್ಮರಣೀಯ ದೃಶ್ಯಗಳಲ್ಲೊಂದು.

***ಕರ್ಣಿಮಾತಾ***

ಬಿಕನೀರ್ ಜಿಲ್ಲೆಯ ನೋಖಾ ತಹಶೀಲಿನ ದೇಶ್ನೋಕ್‌ದಲ್ಲಿರುವ ಕರ್ಣಿ ಮಾತೆಯ ದೇವಾಲಯ ವರ್ಷಕ್ಕೆರಡು ಸಲ ನಡೆಯುವ ಜಾತ್ರೆಯ ಸ್ಥಳ.

ಈ ಎರಡು ಜಾತ್ರೆಗಳೂ ನವರಾತ್ರಿಯಲ್ಲಿ ನಡೆಯುತ್ತವೆ: ಮೊದಲನೆಯದು ಮಾರ್ಚ್-ಏಪ್ರಿಲ್‌ನಲ್ಲಿ, ಸಣ್ಣದಾದ ಎರಡನೆಯದು ಸೆಪ್ಟೆಂಬರ್-ಅಕ್ಟೋಬರ್ ನಲ್ಲಿ. ದೇಶ್ನೋಕ್ ಸ್ವತಃ ಕರ್ಣಿಮಾತೆಯಿಂದ 1419 ರಲ್ಲಿ ಸ್ಥಾಪಿತವಾಯಿತೆಂದು ಹೇಳುತ್ತಾರೆ. ಕರ್ಣಿಮಾತೆ 1387 ರಲ್ಲಿ, ತನ್ನ ತಾಯ ಗರ್ಭಾವಸ್ಥೆಯ ಇಪ್ಪತ್ತೊಂದನೆಯ ತಿಂಗಳಲ್ಲಿ ಹುಟ್ಟಿದಳು. ಅವಳು ಕುಟುಂಬದಲ್ಲಿ ಹುಟ್ಟಿದ ಆರನೆಯ ಹುಡುಗಿಯಾದ್ದರಿಂದ, ಅವಳ ತಂದೆ ತಾಯಿಗಳಿಗೆ ನಿರಾಶೆಯಾಯಿತು. ಹೆರಿಗೆ ಕಾಲದಲ್ಲಿ ಹಾಜರಿದ್ದ ಅವಳ ಚಿಕ್ಕಮ್ಮ ಅವಳಿಗೆ ಹಾನಿ ಮಾಡ ಬಯಸಿದಳು, ಆದರೆ ಅವಳ ತೋಳು ಯಾವುದೋ ನಿಗೂಢಶಕ್ತಿಯಿಂದ ಕೀಲು ತಪ್ಪಿತು. ವಿಚಿತ್ರವಾದ್ದರಿಂದ, ಮಗುವಿಗೆ ಕರ್ಣಿಬಾಯಿ ಎಂದು ಹೆಸರಿಡಲಾಯಿತು. ಅವಳಿಗೆ ಐದು ತುಂಬಿದಾಗ, ಅವಳು ತನ್ನ ಚಿಕ್ಕಮ್ಮನ ತೋಳನ್ನು ಗುಣಪಡಿಸಿದಳು. ಹಾವು ಕಚ್ಚಿದ ತನ್ನ ತಂದೆಯನ್ನೂ ಅವಳು ಗುಣಪಡಿಸಿದಳು. ತನ್ನ ಅತಿಮಾನುಷ ಶಕ್ತಿಗಳಿಂದ ಜನರಿಗೆ ಅವಳು ನೆರವಾದಳು. ಅವರು ಅವಳನ್ನು ಗೌರವಿಸ ತೊಡಗಿದರು. ಅವಳಿಗೆ ಐವತ್ತೊಂದನೆಯ ವಯಸ್ಸಾದಾಗ, ಮುಂದೆ ಬದುಕ ಬಾರದೆಂದು ಅವಳು ನಿರ್ಧರಿಸಿದಳು. ತನ್ನ ಸೋದರಿಯ ಭೇಟಿಗಾಗಿ ಸಿಂದ್‌ಗೆ ಹೋಗುವ ದಾರಿಯಲ್ಲಿ ಅವಳು ಜೈಸಲ್ಮೇರದಲ್ಲಿ ಕುರುಡನಾದ ಬಡಗಿಯೊಬ್ಬನನ್ನು ಸಂಧಿಸಿದಳು. ತನ್ನ ಮರದ ಪ್ರತಿಮೆಯೊಂದನ್ನು ಮಾಡಿ, ನಿದ್ದೆ ಹೋಗುವಾಗ ಅದರ ಮೇಲೆ ತಲೆಯನ್ನಿರಿಸುವಂತೆ ಅವನನ್ನು ಅವಳು ಕೇಳಿಕೊಂಡಳು. ಬಡಗಿ-ಬಾಣ- ಹಾಗೆ ಮಾಡಿದ; ಮರುದಿವಸ ಬೆಳಗ್ಗೆ ಅವನು ದೇಶ್ನೋಕ್‌ದಲ್ಲಿದ್ದ; ಅಲ್ಲಿ ಅವನ ದೃಷ್ಟಿ ಮರಳಿತು. ಕರ್ಣಿಮಾತೆ 1538ರಲ್ಲಿ ಸತ್ತಳೆಂದು ಹೇಳಲಾಗಿದೆ. ಅಲ್ಲಿಂದೀಚೆಗೆ ಅವಳು ದೇವಿಯಾಗಿ ಪೂಜೆಗೊಳ್ಳುತ್ತಿದ್ದಾಳೆ.

ಕರ್ಣಿಮಾತೆಯ ದೇವಾಲಯದಲ್ಲಿ ಅವಳ 75 ಸೆಂ.ಮೀ. ವಿಗ್ರಹವಿದೆ. ಅದು ಜೈಸಲ್ಮೇರದಲ್ಲಿ ಸಿಕ್ಕುವ ಹಳದಿ ಅಮೃತಶಿಲೆಯಿಂದ ನಿರ್ಮಿತವಾಗಿದೆ. ವಿಗ್ರಹದ ಮೇಲೆ ಕಿರೀಟವಿದ್ದು, ಕರ್ಣಿಮಾತೆ ಕುಂಡಲಗಳನ್ನು ಧರಿಸಿದಂತೆ ತೋರಿಸಲಾಗಿದೆ.

ಕರ್ಣಿಮಾತೆಯ ದೇವಾಲಯವನ್ನು ಇಲಿಗಳ ದೇವಾಲಯವೆಂದು ಕರೆಯ ಲಾಗಿದೆ. ಅವು, ಅಲ್ಲಿ ಕಿಕ್ಕಿರಿಯುವ ಭಕ್ತಜನರನ್ನು ಲೆಕ್ಕಿಸದೆ ದೇಗುಲದಲ್ಲಿ ಸ್ವಚ್ಛಂದ ವಾಗಿ ಓಡಿಯಾಡುತ್ತವೆ. ಯಾರಾದರೂ ಇಲಿಯೊಂದರ ಮೇಲೆ ಕಾಲಿಟ್ಟು ಅದನ್ನು ಕೊಂದರೆ, ಪ್ರಾಯಶ್ಚಿತ್ತವಾಗಿ ದೇವಾಲಯಕ್ಕೆ ಬೆಳ್ಳಿ ಇಲಿಯೊಂದನ್ನು ಸಮರ್ಪಿಸ ಬೇಕಾಗುತ್ತದೆ.

## ಕಪಿಲ ಮುನಿ ಜಾತ್ರೆ

ಕಪಿಲ ಮುನಿಯ ಸ್ಮರಣಾರ್ಥ ಪವಿತ್ರವಾದ ಸ್ಥಳ ಬಿಕನೀರ್‌ಗೆ ಹತ್ತಿರವಿರುವ ಕೊಲಯತ್. ಅಲ್ಲಿ ಪ್ರತಿ ವರ್ಷ ಕಾರ್ತಿಕ ಪೂರ್ಣಿಮೆಯಂದು ನಡೆಯುವ ಜಾತ್ರೆಯಲ್ಲಿ ಸು. 60,000 ಜನ ಸೇರುತ್ತಾರೆ. 'ಕೊಳಯತ್' ಶಬ್ದ ಸಂಸ್ಕೃತದ 'ಕಪಿಲಾಯತನ್' ದಿಂದ ನಿಷ್ಪನ್ನವಾಗಿದೆ. ಪ್ರಾಚೀನ ಕಾಲದಿಂದಲೂ ಅದಕ್ಕೆ ಭಾರಿ ಧಾರ್ಮಿಕ ಮಹತ್ವವಿದೆ. ಕೆಲವರು ಪುಷ್ಕರಕ್ಕಿಂತಲೂ ಕೊಲಯತನ್ನು ಹೆಚ್ಚು ಗೌರವದಿಂದ ಕಾಣುತ್ತಾರೆ.

ಕೊಲಯತ್ ಥಾರ್ ಮರುಭೂಮಿಯ ಭಾಗವಾದ ಒಂದು ಪ್ರಸ್ಥಭೂಮಿಯ ಮೇಲಿದೆ. ಇಲ್ಲಿ ಒಂದು ಆಳವಾದ ತಗ್ಗು ಸರೋವರವೊಂದನ್ನು ರೂಪಿಸಿದ್ದು, ಅದರ ನೀರು ಸಿಹಿ ಮತ್ತು ಶುದ್ಧವಾಗಿದೆ. ಸರೋವರಕ್ಕೆ ಐವತ್ತೆರಡು ಘಟ್ಟಗಳಿವೆ; ಅಲ್ಲಿ ಏಕಾಂತದಲ್ಲಿ ಸ್ನಾನ ಮಾಡಬಹುದು. ಮುಖ್ಯ ಘಟ್ಟದಲ್ಲಿ ಕಪಿಲ ಮುನಿಯ ಪ್ರತಿಮೆಯನ್ನು ಸ್ಥಾಪಿಸಲಾಗಿದೆ.

ಸ್ಕಂದ ಪುರಾಣದ ಪ್ರಕಾರ ಮಹರ್ಷಿ ಕರ್ದನ್ ಸೃಷ್ಟಿಕರ್ತ ಬ್ರಹ್ಮನ ಮಗ. ಅವನು ಮಹರ್ಷಿ ಮನುವಿನ ಮಗಳನ್ನು ಮದುವೆಯಾದ; ಅವಳು ಕಪಿಲ ಮುನಿಗೆ ಜನ್ಮವಿತ್ತಳು. ಕಪಿಲ ಮುನಿ ಬಾಲ್ಯದಲ್ಲೇ ಅತ್ಯುನ್ನತ ಪುಣ್ಯವನ್ನಾರ್ಜಿಸಿ, ತಾಯಿಗೆ ಸಂಖ್ಯಾಶಾಸ್ತ್ರವನ್ನು ಬೋಧಿಸಿದ. ಅನಂತರ ಅವನು ಹಿಮಾಲಯಕ್ಕೆ ತೆರಳಿದ. ತನ್ನಂದು ಪ್ರಯಾಣದಲ್ಲಿ ಅವನ ಒಂದು ಓಯಸಿಸನ್ನು ಸಂಧಿಸಿ, ಅದರ ಸುಂದರ ಪರಿಸರಕ್ಕೆ ಮರುಳಾದ. ಅವನ ಆತ್ಮದ ಒಂದು ಭಾಗ ಜಗತ್ತಿಗಾಗಿ ತಪಸ್ಸು ಮಾಡುತ್ತ ಅಲ್ಲೇ ಉಳಿಯಿತು; ಉಳಿದ ಭಾಗ ಹಿಮಾಲಯದ ದಾರಿ ಹಿಡಿಯಿತು. ಆ ಓಯಸಿಸ್‌ಗೆ ಕಪಿಲಸ್ಥಾನವೆಂದು ಅವನ ಹೆಸರಿಡಲಾಯಿತು.

ಆ ಸ್ಥಳ ಬಹು ಪ್ರಸಿದ್ಧವಾಯಿತು. ಅನೇಕ ಭಕ್ತರು ಅಲ್ಲಿ ಸಂದಣಿಸಿದರು. ಆದರೆ ದೇವತೆಗಳು ಅಸೂಯೆಗೊಂಡು, ಅದನ್ನು ಮರಳುಗಾಡಿನಲ್ಲಿ ಬಚ್ಚಿಟ್ಟರು. ಶಿವಪಾರ್ವತಿಯರ ಮಗನಾದ ಸ್ಕಂದದೇವ ಪಾಡುಪಡುವ ಮನುಕುಲದ ಮೇಲೆ ಕನಿಕರಗೊಂಡು, ಆ ಜಾಗವನ್ನು ಮತ್ತೆ ಬೆಳಕಿಗೆ ತಂದ. ಭಕ್ತರ ಪಾಪಗಳನ್ನು ತೊಲಗಿಸುವುದೆಂದು ಭಾವಿಸಲಾದ ಪವಿತ್ರ ಸರೋವರ ಸ್ನಾನಕ್ಕೆ ಬಹಳ ಧಾರ್ಮಿಕ ಮಹತ್ವವನ್ನು ಆರೋಪಿಸಲಾಗಿದೆ.

ಈ ಪ್ರದೇಶಕ್ಕೆ ಸಂಬಂಧಿಸಿದ ಅನೇಕ ಐತಿಹ್ಯಗಳಿವೆ; ಅವು ಪುನರ್ಜನ್ಮಗಳ, ಕೈಕೊಂಡ ಮತ್ತು ಮುರಿಯಲಾದ ವ್ರತಗಳ, ಎಡವಿದ ಮತ್ತು ಉದ್ಧರಿಸಲ್ಪಟ್ಟ ಋಷಿ, ಮುನಿಗಳ ಬಗೆಗೆ ಹೇಳುತ್ತವೆ. ಶತಮಾನಗಳುದ್ದಕ್ಕೂ ಕಪಿಲಮುನಿಯ ಮಧ್ಯಸ್ಥಿಕೆಯಿಂದಾಗಿ ಹಲವಾರು ಪವಾಡಗಳು ನಡೆದಿವೆಯೆಂದು ಹೇಳಲಾಗಿದೆ. ಈ ನಂಬಿಕೆ ಇಂದಿಗೂ ಉಳಿದಿದ್ದು, ಜಾತ್ರೆಯನ್ನು ಮುಂದುವರಿಸುತ್ತಿದೆ.

*ಬಂಗಾಂಗ ಜಾತ್ರೆ*

ಬಂಗಾಂಗ ಜಾತ್ರೆ, ಜೈಪುರ ಜಿಲ್ಲೆಯ ಒಂದು ಚಾರಿತ್ರಿಕ ನಗರವಾದ ಬೈರಾತ್‌ಗೆ ಸು. 11 ಕಿ.ಮೀ. ದೂರದಲ್ಲಿರುವ ಒಂದು ತೊರೆಯ ಬಳಿ ನಡೆಯುತ್ತದೆ. 60,000 ಕ್ಕೂ ಹೆಚ್ಚು ಮಂದಿ ವೈಶಾಖ (ಏಪ್ರಿಲ್ – ಮೇ) ಶುಕ್ಲಪೂರ್ಣಿಮೆಯಂದು ಪವಿತ್ರ ಪ್ರವಾಹದಲ್ಲಿ ಮುಳುಗು ಹಾಕಲು ಬರುತ್ತಾರೆ; ಅದು, ಅರ್ಜುನ ಬಾಣ ಬಿಟ್ಟ ಜಾಗದಲ್ಲಿ ಉಗಮಿಸಿತೆಂದು ಊಹಿಸಲಾಗಿದೆ.

ಬೈರಾತ್ ಪ್ರಾಚೀನ ಕಾಲದಲ್ಲಿ ಒಂದು ಮುಖ್ಯ ನಗರವಾಗಿತ್ತು. ಅದನ್ನು ಮಹಾಭಾರತ ದಿನಗಳ ವಿರಾಟಪುರಿ ಎಂದು ಗುರುತಿಸಲಾಗಿದೆ. ಪಾಂಡವರು, ಹದಿನಾಲ್ಕು ವರ್ಷಗಳ ವನವಾಸದ ಬಳಿಕ, ಹದಿನೈದನೆಯ ವರ್ಷ ಅಜ್ಞಾತವಾಸವನ್ನು ಎಲ್ಲಿ ಕಳೆಯಬೇಕೆಂದು ವೇದವ್ಯಾಸರನ್ನು ಕೇಳಿದರು. ವಿರಾಟರಾಜನ ಆಸ್ಥಾನದಲ್ಲಿ ಅದನ್ನು ಕಳೆಯುವಂತೆ ಅವರಿಗೆ ಅವನು ಸಲಹೆ ಮಾಡಿದ.

ಜಾತ್ರೆಯ ಸ್ಥಳ ಗುಡ್ಡಗಳಿಂದ ಸುತ್ತುವರಿಯಲ್ಪಟ್ಟು, ತಾಳೆ ಮರಗಳ ಸಮೃದ್ಧಿಯನ್ನುಳ್ಳದಾಗಿದೆ. ಜಾತ್ರೆಯ ಮೂಲ ನಿಗೂಢವಾಗಿದೆ. ಜಾತ್ರೆ ಸು. 200 ವರ್ಷಗಳ ಹಿಂದೆ, ರಾಧಾ–ಕೃಷ್ಣ ದೇವಾಲಯ ನಿರ್ಮಾಣವಾದಾಗ ಮೊದಲಾಯಿತು. ದೇವಾಲಯದಲ್ಲಿ ಭೋಜನವಿರುವುದಿಲ್ಲ; ಯಾತ್ರಿಕರು ಸ್ವಂತ ಆಹಾರವನ್ನು ತರುತ್ತಾರೆ. ಹಿಂದೂಗಳ ಜೊತೆಗೆ ಮುಸ್ಲಿಂ ವರ್ತಕರೂ ಜಾತ್ರೆಗೆ ಬರುತ್ತಾರೆ.

ಬಂಗಾಂಗದ ದಡಗಳು ದೇವಾಲಯಗಳಿಂದ ತುಂಬಿಹೋಗಿವೆ. ರಾಧಾ–ಕೃಷ್ಣ ದೇವಾಲಯದ ಜೊತೆಗೆ, ನಂದಕುಂಡದ ಪಕ್ಕದಲ್ಲಿ ಹನುಮಾನ್ ದೇವಾಲಯವಿದೆ. ಮಹಾರಾಜ ರಾಮಸಿಂಹ ಹರ್–ಕಿ–ಪೌರಿಯನ್ನು ಕಟ್ಟಿಸಿದ. ಜಾತ್ರೆ ಮೊದಲಾಗುವುದಕ್ಕೆ ಒಂದು ದಿವಸ ಮುಂಚೆ ಜನ ಸೇರುತ್ತಾರೆ. ಅವರು ಇರುಳು ಭಜನೆ ಮಾಡುತ್ತಾರೆ ಮತ್ತು ಬೆಳಗ್ಗೆ ಮೀಯುತ್ತಾರೆ.

ರಾಧಾ–ಕೃಷ್ಣ ದೇಗುಲ ಎರಡಂತಸ್ತಿನ ಪ್ರಭಾವಶಾಲಿ ಕಟ್ಟಡವಾಗಿದೆ. ಹತ್ತು ಮೆಟ್ಟಲು ಹತ್ತಿದರೆ, ಕೃಷ್ಣ, ರಾಧೆಯರ ಪ್ರಮುಖ ವಿಗ್ರಹಗಳ ಎದುರಿಗಿರುವ ಗರುಡನ ಗರ್ಭಗುಡಿಯುಳ್ಳ ಚೌಕವೊಂದು ಸಿಗುತ್ತದೆ. ನಾಲ್ಕೂ ಕಡೆಗಳಲ್ಲಿ ವರಾಂಡಗಳಿವೆ. ಅವುಗಳಲ್ಲೊಂದರಲ್ಲಿ ಪಾಂಡವರ ಮತ್ತು ಅವರ ಪತ್ನಿ ದ್ರೌಪದಿಯ ವಿಗ್ರಹಗಳಿವೆ. ಬಲ ವರಾಂಡದಲ್ಲಿ ಲಿಂಗಗಳ ಒಂದು ಸಾಲಿದ್ದು, ಅವುಗಳ ಮೇಲೆ ನೀರು ಒಂದೇ ನಾಳದಿಂದ ಹರಿಯುತ್ತದೆ. ಒಂದು ಲಿಂಗದ ಮೇಲೆ ಐದು ಮುಖಗಳನ್ನು ಕೆತ್ತಲಾಗಿದೆ. ಇದು ಏಕಾದಶ ರುದ್ರನ ಪಂಚಮುಖಿ–ಮಹಾದೇವ ಎಂದು ಹೆಸರಾಗಿದ್ದು, ತುಂಬ ಸ್ತುತ್ಯವಾಗಿದೆ.

ಮುಂದೆ ಪಾಂಡವರ ಗುರುತು ಹಿಡಿಯಲಾಯಿತೆಂದು ಹೇಳಲಾಗಿದೆ. ಅರಮನೆಯ ಬಾಣಸಿಗನಾಗಿದ್ದ ಭೀಮನನ್ನು ಅವನ ಅದ್ಭುತ ಶಕ್ತಿಯಿಂದಾಗಿ ಮೊದಲು ಗುರುತು ಹಿಡಿಯಲಾಯಿತು. ಪಾಂಡ ವರು ವಿರಾಟನ ಆಸ್ಥಾನದಿಂದ ಪಲಾಯನ ಮಾಡಿ, ದೇಶದ ಮತ್ತೊಂದು ಭಾಗದಲ್ಲಿ ಪುನಃ ಅವಿತುಕೊಂಡರು;

ಆದರೆ ಆ ಜಾಗಕ್ಕೆ ಅವರ ಭೇಟಿಯು ಫಲವೆಂದರೆ, ಒಣನೆಲಕ್ಕೆ ಅರ್ಜುನನ ಬಾಣ ಪ್ರಯೋಗ ಮತ್ತು ಬಂಗಾಂಗವನ್ನು ಭೂಗರ್ಭದಿಂದ ಹೊರತಂದದ್ದು. ಜಾತ್ರೆಯಲ್ಲಿ ಕಥಿತವಾಗುವುದು ಈ ಸಾಹಸವೇ.

### *ಜಂಭೇಶ್ವರ ಜಾತ್ರೆ*

ಜಂಭೇಶ್ವರ ಜಾತ್ರೆ ಬಿಷ್ಣೋಯಿ ಪಂಥದ ಸ್ಥಾಪಕನಾದ ಜಂಭೇಶ್ವರಿಯ ಗೌರವಾರ್ಥ ನಡೆಯುವಂಥದು. ಪ್ರತಿವರ್ಷ ಎರಡು ಜಾತ್ರೆಗಳು ಬಿಕನೀರ್ ಜಿಲ್ಲೆಯ ಮುಕಂ ಗ್ರಾಮದಲ್ಲಿ ಫಾಲ್ಗುಣ ಬುಡಿ ಅಮಾವಾಶ್ಯೆ ಹಾಗೂ ಅಶ್ವಿನ್ ಬುಡಿ ಅಮಾವಾಸ್ಯೆಯಂದು ನಡೆಯುತ್ತವೆ. 1591 ರಲ್ಲಿ ಪ್ರಾರಂಭವಾದ ಮೊದಲನೆಯ ಜಾತ್ರೆ ಇನ್ನೊಂದಕ್ಕಿಂತ ದೊಡ್ಡದು.

ಗ್ರಾಮದಲ್ಲಿ ಮೊದಲು (1478) ನೆಲಸಿದವನು ಮಾಲಾರಾಂ ಜಾಟ್ ಎಂದು ಹೇಳಲಾಗಿದೆ. ಏಳು ವರ್ಷಗಳ ನಂತರ ಅವನು ಜಂಭೇಶ್ವರಿಯ ಪ್ರಭಾವಕ್ಕೊಳಪಟ್ಟ. ಅವನ ವಂಶಸ್ಥರೆಂದು ಹೇಳಿಕೊಳ್ಳುವ ಇನ್ನೂರು ಕುಟುಂಬಗಳು ಮುಕಂ ಮತ್ತು ಇತರ ಗ್ರಾಮಗಳಲ್ಲಿವೆ. ಬಿಷ್ಣೋಯಿಗಳು ಒಂದು ಪ್ರತ್ಯೇಕ ಪಂಗಡವಾಗಿದ್ದು, ಇತರ ಹಿಂದೂಗಳೊಡನೆ ಸಾಮಾನ್ಯವಾಗಿ ಬೆರೆಯುವುದಿಲ್ಲ. ಅವರು ವಿಷ್ಣುವನ್ನು ಅವನ ಜಂಭಾಜಿ ಅವತಾರದಲ್ಲಿ ಪೂಜಿಸುತ್ತಾರೆ. ಜಂಭ ಒಂದು ಕೆರೆ ಕಟ್ಟಿಸಿ, ಅದರ ಹತ್ತಿರ ಒಂದು ಹಳ್ಳಿಯನ್ನು ನಿರ್ಮಿಸಿದ; ಅದಕ್ಕೆ ಅವನ ಹೆಸರು ಬಂತು. ಕೆರೆಯ ದಡದ ಮೇಲೆ ಅವನು ತನಗಾಗಿ ಸಮಾಧಿಯೊಂದನ್ನು ತೋಡಿ, ತಾನು ಸತ್ತಾಗ ಅದರಲ್ಲಿ ತನ್ನನ್ನು ಹೂಳಬೇಕೆಂದು ಶಿಷ್ಯರಿಗೆ ತಿಳಿಸಿದ. 1537 ರಲ್ಲಿ ಮಾರ್ಗಶಿರದ ಕೃಷ್ಣಪಕ್ಷದ ಒಂಬತ್ತನೆಯ ದಿವಸ ಮರಳುದಿಬ್ಬಗಳ ಮೇಲೆ ಅವನು ಕೊನೆಯುಸಿರೆಳೆದ; ಪೀಪಸರ ಗ್ರಾಮವನ್ನು ಬಿಟ್ಟ ನಂತರ ಅವನು ಅಲ್ಲಿಗೆ ಹೋಗಿದ್ದ. ಅವನು ಸತ್ತೆಡೆಯಲ್ಲಿ ಅವನ ಶಿಷ್ಯರು ಅವನನ್ನು ಹುಗಿದರು; ತನಗಾಗಿ ಅವನು ತೋಡಿದ್ದ ಸಮಾಧಿಯಲ್ಲಲ್ಲ. ಆದರೆ ಅವನ ಸಮಾಧಿಯನ್ನೂ ಒಂದು ದೇವಾಲಯವನ್ನೂ ತಲ್ವಾ ಗ್ರಾಮದಲ್ಲಿ ಈಗಲೂ ಕಾಣಬಹುದು; ಜಂಭಾಜಿ ಅಲ್ಲಿ ನೆಲಸಿದ್ದರಿಂದ ಅದನ್ನು ಮುಕಂ ಎಂದೂ ಕರೆಯಲಾಗುತ್ತದೆ. ಮುಕಂ ದೇವಾಲಯದಲ್ಲಿ ಮುಸ್ಲಿಮರೂ ಗೌರವ ಸಲ್ಲಿಸುತ್ತಾರೆ. ದೇವಾಲಯದ ತಳಹದಿಯನ್ನು 1536 ರಲ್ಲಿ ಹಾಕಲಾಯಿತು; ಜಂಭೇಶ್ವರಿ ಗತಿಸಿದ ಸಮರ್-ಥಾಲ್‌ನ ಮರಳು ದಿಬ್ಬಗಳ ಮೇಲೆ ಅದನ್ನು ಏಳು ವರ್ಷಗಳ ನಂತರ ಪೂರ್ಣಗೊಳಿಸಲಾಯಿತು. ಅದು, ಕಲಾತ್ಮಕ ಉಪ್ಪರಿಗೆ ಮೊಗಸಾಲೆಗಳನ್ನುಳ್ಳ ಎರಡಂತಸ್ತಿನ ಕಟ್ಟಡ. ಸಮಾಧಿ ಮೊದಲ ಅಂತಸ್ತಿನಲ್ಲಿದೆ. ಆದರೆ ನಿಜವಾದ ಸಮಾಧಿ ಮೂವತ್ತು ಮೀಟರ್ ಕೆಳಗಿದೆ.

ವಿಕ್ರಮಾದಿತ್ಯನ ನಗರ ಸಂತ ಸತ್ತ ಮರಳುದಿಬ್ಬದಡಿಯಲ್ಲಿ ತನ್ನ ಚಿನ್ನದ ಸಿಂಹಾಸನಸಹಿತ ಹೂತು ಹೋಗಿದೆಯೆಂದು ಬಿಷ್ಣೋಯಿಗಳು ನಂಬುತ್ತಾರೆ. ಜಂಭೇಶ್ವರಿ ವಿಕ್ರಮಾದಿತ್ಯನ ಮೂವತ್ತೆರಡನೆಯ ವಂಶಜನೆಂದು ಹೇಳಲಾಗಿದೆ. ಐತಿಹ್ಯದ ಪ್ರಕಾರ, ಅವನೊಂದು ಮರದ ಕೆಳಗೆ ಕಂಡು ಬಂದ ಮತ್ತು ತನ್ನ

ಹನ್ನೆರಡನೆಯ ವಯಸ್ಸಿನವರೆಗೆ ಹಸುಗಳನ್ನು ಸಾಕಿದ. ಬಾಲ್ಯದಲ್ಲಿ ಅವನು ಮೂಕನಾಗಿದ್ದನೆಂದು ಭಾವಿಸಲಾಗಿದೆ, ಮಾತು ತಂದುಕೊಟ್ಟ ಸ್ವಂತ ಪವಾಡ ವೊಂದನ್ನು ಅವನು ಮಾಡಿದ. ಮುಂದೆ ಅವನು ಗೋಪಾಲ ವೃತ್ತಿಯನ್ನು ತೊರೆದು, ಒಂದು ಬೆಟ್ಟದ ತುದಿಯಲ್ಲಿ ನೆಲೆಸಿ, ಅಲ್ಲಿ ಬಿಷ್ಣೋಯಿಗಳಿಗೆ ಅವರ ಧರ್ಮದ ಇಪ್ಪತ್ತೊಂಬತ್ತು ವಿಧಿಗಳನ್ನು ನೀಡಿದ. 'ಬಿಷ್ಣೋಯಿ' ಶಬ್ದ 'ಬೀಸ್' (ಇಪ್ಪತ್ತು) ಮತ್ತು 'ನೋಯಿ' (ಒಂಬತ್ತು) – ಇಪ್ಪತ್ತೊಂಬತ್ತು – ಎಂಬ ಶಬ್ದಗಳ ಸಂಯೋಗ. ಜಂಭೇಶ್ವರಿ ಹಾಕಿಕೊಟ್ಟ ಇಪ್ಪತ್ತೊಂಬತ್ತು ಧಾರ್ಮಿಕ ವಿಧಿಗಳ ಅನುಯಾಯಿಗಳನ್ನು ಅದು ಸೂಚಿಸುತ್ತದೆ.

*ಸೀತಾಬರಿ ಜಾತ್ರೆ*

ಸೀತಾಬರಿ ಜಾತ್ರೆ ಸಾವಿರಾರು ಜನರನ್ನು ಆಕರ್ಷಿಸುತ್ತದೆ; ಅವರು ಗಂಗೆಯಷ್ಟು ಪವಿತ್ರವೆನಿಸಿದ ಸೀತಾಕುಂಡ, ಲಕ್ಷ್ಮಣಕುಂಡ ಹಾಗೂ ಸುರಜ್ ಕುಂಡಗಳಲ್ಲಿ ಮೀಯುತ್ತಾರೆ.

ಸೀತಾಬರಿ ಕೋಟಾ ಜಿಲ್ಲೆಯ ಸಹಾಬಾದ್ ತಹಶೀಲಿನ ಕೆಲ್ವರ ಗ್ರಾಮದ ಬಳಿಯ ಒಂದು ಸ್ಥಳ. ಜಾತ್ರೆ ವೈಶಾಖ ಸುದಿ ಪೂನಂದಿಂದ ಜೇಠ್ ಬದಿ ಅಮಾವಾಸ್ಯೆಯ ತನಕ ನಡೆಯುತ್ತದೆ. ಸುಂದರವಾದ ಅರಣ್ಯವೊಂದರಲ್ಲಿದೆ, ಸೀತಾಬರಿ. ಐತಿಹ್ಯದ ಪ್ರಕಾರ, ಸೀತೆ ಲಂಕೆಯಿಂದ ಮರಳಿದ ಬಳಿಕ ಅವಳ ಶೀಲವನ್ನು ಜನ ಶಂಕಿಸಿದಾಗ ರಾಮನ ಆಜ್ಞೆಯಂತೆ ಲಕ್ಷ್ಮಣ ಅವಳನ್ನು ಬಿಟ್ಟು ಬಂದ ಜಾಗವದು. ಅಲ್ಲಿ ನೈಸರ್ಗಿಕ ಚಿಲುಮೆಗಳಿಂದ ತುಂಬಿಕೊಳ್ಳುವ ನಾಲ್ಕು ಕೆರೆಗಳಿವೆ. ಅವುಗಳ ನೀರು ಜನರ ವಿವಿಧ ವ್ಯಾಧಿಗಳನ್ನು, ಅದರಲ್ಲೂ ಮಾನಸಿಕ ವ್ಯಾಧಿಗಳನ್ನು ಗುಣಪಡಿಸುತ್ತದೆಂದು ಹೇಳಲಾಗಿದೆ. ಈ ಕುಂಡಗಳ ನೀರು ಬೇಸಗೆಯಲ್ಲಿ ತಣ್ಣಗೂ ಚಳಿಗಾಲದಲ್ಲಿ ಬೆಚ್ಚಗೂ ಇರುತ್ತದೆ, ಎಂದೂ ಬತ್ತುವುದಿಲ್ಲ. ಅದನ್ನು ಬಂಗಾಂಗ ಎಂಬ ತೊರೆಗೆ ಹರಿಸಿ, ನೀರಾವರಿಗಾಗಿ ಬಳಸಲಾಗುತ್ತದೆ.

ದೇವಾಲಯದ ಪೌರೋಹಿತ್ಯ ಆನುವಂಶಿಕವಾದುದು; ಕುಂಡಕ್ಕೆ ಸೇರಿದ ಹಲವಾರು ಪುರೋಹಿತರಿದ್ದಾರೆ. ನಾಲ್ಕನೆಯ ಕುಂಡವಾದ ಭರತ್‌ಕುಂಡದಲ್ಲಿ ನೈವೇದ್ಯಗಳನ್ನರ್ಪಿಸುವುದಿಲ್ಲ; ಹಾಗೆ ಮಾಡುವುದು ಅಮಂಗಳಕರವೆಂದು ಪರಿಗಣಿಸಲಾಗಿದೆ.

*ಗಲಿಯಕೋಟ್ ಉರುಸ್*

ಗಲಿಯಕೋಟ್‌ದಲ್ಲಿ ನಡೆಯುವ ಉರುಸ್ ದೇಶಾದ್ಯಂತ ದಾವೂದಿ ಬೊಹ್ರಾ ಗಳನ್ನು ಆಕರ್ಷಿಸುತ್ತದೆ.

ಗಲಿಯಕೋಟ್ ಒಂದು ಸಣ್ಣ ಹಳ್ಳಿ; ಹನ್ನೆರಡನೆಯ ಶತಮಾನದ ಮುಖಂಡ ನೊಬ್ಬನಿಂದ ಆ ಹೆಸರು ಬಂದಿದೆ. ಅದು ಸುಂದರವಾದ ದುಂಗರ್‌ಪುರ್ ಜಿಲ್ಲೆಯ ಸಗ್ವರ ತಹಶೀಲಿನ ಒಳಭಾಗದಲ್ಲಿರುವ ಮಹೀ ನದಿಯ ದಡಗಳ ಮೇಲಿದೆ.

ಬೊಹ್ರಾಗಳ ಗೌರವಾನ್ವಿತ ಸಂತನಾದ ಸೈಯೆದಿ ಫಕ್ರುದ್ದೀನನ ಸಮಾಧಿಯ ಸ್ಥಳವದು.

ಈಗ ಹಾಳಾಗಿರುವ ಕೋಟೆಯೊಂದರ ಒಳಗಡೆ ಗ್ರಾಮ ಒಂದು ಕಾಲದಲ್ಲಿತ್ತು. ಅದರ ಹತ್ತಿರದಲ್ಲಿ ಸಂತನ ದೇಗುಲವಿದೆ. ಸಮಾಧಿಭವನಕ್ಕೆ ಹದಿನಾರು ಮೀಟರ್ ಎತ್ತರದ ಮತ್ತು ಆರು ಮೀಟರ್ ಅಗಲವಿರುವ ಸುಂದರವಾದ ಗೋಪುರವಿದೆ. ದೇವಾಲಯದ ಪಕ್ಕದಲ್ಲಿ, ಮಹಿಳೆಯರು ಪ್ರಾರ್ಥನೆ ಸಲ್ಲಿಸಬಹುದಾದ ಮಸೀದಿಯೊಂದಿದೆ. ದರ್ಗಾದ ಸುತ್ತ ಹಲವಾರು ಗೋರಿಗಳಿವೆ; ಅವುಗಳಲ್ಲೊಂದರಲ್ಲಿ ಸಂತನ ಮಗನಾದ ಭಾಯಿ ಸಾಹಿಬ್‌ನನ್ನು ಸಮಾಧಿ ಮಾಡಲಾಗಿದೆ.

ಸೈಯೆದಿ ಫಕ್ರುದ್ದೀನ್ 1094 ರಿಂದ 1134ರವರೆಗೆ ಗುಜರಾತನ್ನಾಳಿದ ಪ್ರಸಿದ್ಧ ಸಿಧ್‌ರಾಜ್ ಜಯ್‌ಸಿಂಹನ ವಜೀರನಾದ ತರ್ಮಲ್‌ನ ಮಗ. ತರ್ಮಲ್‌ನನ್ನು ಫತಾಮಿ ವಂಶದ ಇಮಾಂ-ಎ-ಮುಸ್ತನ್ಸೀರ್‌ನ ಮಿಷನರಿಗಳು ಇಸ್ಲಾಂಗೆ ಪರಿವರ್ತಿಸಿದರು. ಆ ವಂಶ ಆಗ ಕೈರೋವನ್ನು ರಾಜಧಾನಿ ಮಾಡಿಕೊಂಡು ಪಶ್ಚಿಮ ಏಷ್ಯ ಹಾಗೂ ಉತ್ತರ ಆಫ್ರಿಕಗಳ ಒಂದು ವಿಸ್ತಾರ ಪ್ರಾಂತ್ಯವನ್ನಾಳುತ್ತಿತ್ತು. ಸೈಯೆದಿ ಫಕ್ರುದ್ದೀನ್ ತನ್ನ ಅಲೆದಾಟದಲ್ಲಿ ಗಲಿಯಕೋಟ್ ಗ್ರಾಮಕ್ಕೆ ಬಂದು, ಅಲ್ಲಿಯೆ ತೀರಿಕೊಂಡು ಸಮಾಧಿಗೊಂಡ. ಅವನು ಅನೇಕ ಪವಾಡಗಳನ್ನೆಸಗಿದ; ಭಾರತದಿಂದ ಮತ್ತು ವಿದೇಶಗಳಿಂದ ಯಾತ್ರಿಕರು ಅವನ ಪೂಜಾಮಂದಿರಕ್ಕೆ ಬಂದು, ಅವನ ಅನುಗ್ರಹವನ್ನು ಯಾಚಿಸುತ್ತಾರೆ.

ಅವನ ಉರುಸ್, ಮುಸ್ಲಿಮರು ಅನುಸರಿಸುವ ಹಿಜ್ರ ಕ್ಯಾಲೆಂಡರಿನಿಂದ ಭಿನ್ನವಾಗುವ ಈಜಿಪ್ಷಿಯನ್ ಕ್ಯಾಲೆಂಡರಿಗನುಗುಣವಾಗಿ ಮೊಹರಂನ ಇಪ್ಪತ್ತೇಳನೆಯ ದಿವಸ ನಡೆಯುತ್ತದೆ.

### *ಜೀನ್‌ಮಾತಾ ಮತ್ತು ಅನ್ನಕೂಟ್ ಜಾತ್ರೆಗಳು*

ಇತರ ಧಾರ್ಮಿಕ ಜಾತ್ರೆಗಳಲ್ಲಿ ಜೀನ್‌ಮಾತಾ ಜಾತ್ರೆ ಹಾಗೂ ಅನ್ನಕೂಟ ಜಾತ್ರೆ ಸೇರಿವೆ. ಮೊದಲನೆಯದು ಸಿಕಾರ್ ಜಿಲ್ಲೆಯ ಗೊರಿಯನ್ ರೈಲು ನಿಲ್ದಾಣಕ್ಕೆ ಕೆಲವು ಕಿಲೋಮೀಟರ್ ದೂರದಲ್ಲಿರುವ ಜೀನ್‌ಮಾತಾ ದೇವಾಲಯದಲ್ಲಿ, ನವರಾತ್ರಿ ಕಾಲದಲ್ಲಿ ನಡೆಯುತ್ತದೆ. ಕಾಳಿಯನ್ನು ಮುಖ್ಯ ದೇವತೆಯನ್ನಾಗಿ ಆರಾಧಿಸುವ ರಜಪೂತರು ಮತ್ತು ಮೀನರು ದೇವಾಲಯದಲ್ಲಿ ಕಿಕ್ಕಿರಿದು, ಆಡು ಕೋಣಗಳನ್ನು ಬಲಿ ಕೊಟ್ಟು, ಮದ್ಯ ಮಾಂಸಗಳನ್ನರ್ಪಿಸುತ್ತಾರೆ. ಮೀನರು ದೃಶ್ಯಕ್ಕೆ ವರ್ಣ ಮತ್ತು ಸಂಗೀತವನ್ನೀಯುತ್ತಾರೆ.

ಅನ್ನಕೂಟ ಜಾತ್ರೆ ಉದಯಪುರ್ ಜಿಲ್ಲೆಯಲ್ಲಿ ವೈಷ್ಣವರ ಬಲ್ಲಭ್ ಪಂಗಡದ ಮುಖ್ಯ ಪೀಠವಾದ ನಾಥದ್ವಾರದಲ್ಲಿ ನಡೆಯುತ್ತದೆ. ದೀಪಾವಳಿಯ ನಂತರದ ಅನ್ನಕೂಟ ದಿವಸದಂದು, ವಿಶ್ವೇಶ್ವರನ ಹಸಿವನ್ನು ತಣಿಸುವುದಕ್ಕಾಗಿ ಅನ್ನದ ಪರ್ವತವೊಂದನ್ನು ರಚಿಸಲಾಗುತ್ತದೆ. ಈ ಪ್ರಸಿದ್ಧ ದೇವಾಲಯದ ಅಂಗಣದಲ್ಲಿ

ಅನ್ನದ ದೊಡ್ಡ ರಾಶಿಯನ್ನು ಸಿದ್ಧಗೊಳಿಸಲಾಗುತ್ತದೆ; ಅದನ್ನು ಕಲಿಯ ಬಾಬನ ಪ್ರಸಾದವೆಂದು ಭಿಲ್ಲರು ಕಸಿದುಕೊಳ್ಳುತ್ತಾರೆ. ದೇವಾಲಯದ ಬಾಗಿಲು ತೆಗೆದಕೂಡಲೆ, ಹಾಡುವ ಮತ್ತು ಕುಣಿಯುವ ಭಿಲ್ಲರ ಗುಂಪುಗಳು ದೇವಾಲಯಕ್ಕೆ ನುಗ್ಗಿ, ಈ ರಾಶಿಯನ್ನು ಬರಿದು ಮಾಡುತ್ತವೆ. ಅನ್ನ ಅನೇಕ ವ್ಯಾಧಿಗಳನ್ನು ಗುಣಪಡಿಸುತ್ತದೆಂದು ಅವರು ನಂಬುವುದರಿಂದ ಅದನ್ನು ಔಷಧವಾಗಿ ಇಟ್ಟುಕೊಳ್ಳುತ್ತಾರೆ. ಈ ಪವಿತ್ರ ಕೊಡುಗೆಯ ಪೊಟ್ಟಣಗಳನ್ನು ಬಂಧುಮಿತ್ರರಿಗೆ ಕಳುಹಿಸಲಾಗುತ್ತದೆ.

ರಾಜಾಸ್ಥಾನದಲ್ಲಿ ನೂರಾರು ಪವಿತ್ರ ಸ್ಥಳಗಳೂ, ಮೀಯುವ ಕೆರೆಗಳೂ ಇದ್ದು, ಅಲ್ಲಿ ನಿರ್ದಿಷ್ಟ ದಿನಗಳಂದು ಜಾತ್ರೆಗಳು ನಡೆಯುತ್ತವೆ. ಸಂಕ್ಷಿಪ್ತ ಸಮೀಕ್ಷೆಯೊಂದರಲ್ಲಿ ಅವುಗಳನ್ನೆಲ್ಲ ಪಟ್ಟಿ ಹಾಕುವುದು ಸಾಧ್ಯವಿಲ್ಲ; ಅತ್ಯಂತ ಮುಖ್ಯವಾದುವನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

### *ಆದಿವಾಸಿ ಜಾತ್ರೆಗಳು*

ಬುಡಕಟ್ಟು ಜನ ರಾಜಾಸ್ಥಾನದ ಸಾಮಾಜಿಕ ವಿನ್ಯಾಸದ ಒಂದು ಮುಖ್ಯ ಮತ್ತು ಅವಿಭಾಜ್ಯ ಅಂಗವಾಗಿದ್ದಾರೆ; ಅಷ್ಟೇಕೆ, ತಮ್ಮ ಬಡತನದ ನಡುವೆಯೂ ಅವರು ಅತ್ಯಂತ ವರ್ಣರಂಜಿತ ಮತ್ತು ಉತ್ಸವಪ್ರಿಯ ಜನ. ಕೆಲವು ಜಾತ್ರೆಗಳು ಮುಖ್ಯವಾಗಿ ಅವರವು; ಅವು ತಮ್ಮ ದೃಶ್ಯ ಹಾಗೂ ವರ್ಣಸಮೃದ್ಧಿಗಾಗಿ, ಅವರ ಹಾಡುಗಳ ಲಯಕ್ಕಾಗಿ ಹಾಗೂ ನೃತ್ಯಗಳ ಉನ್ಮಾದಕ್ಕಾಗಿ ಹೆಸರಾಗಿವೆ.

ಆದಿವಾಸಿ ಜಾತ್ರೆಗಳಲ್ಲಿ ಅತ್ಯಂತ ಮುಖ್ಯವಾದುದು ದಕ್ಷಿಣ ರಾಜಾಸ್ಥಾನದ ದುಂಗರ್‌ಪುರ್ ಜಿಲ್ಲೆಯ ಅಸ್ಪುರ್ ತಹಶೀಲಿನ ಬನೇಶ್ವರದಲ್ಲಿ ನಡೆಯುತ್ತದೆ. ಜಾತ್ರೆಯ ಸ್ಥಳ, ಸೋಮ ಮತ್ತು ಮಹಿ ನದಿಗಳ ಸಂಗಮದಿಂದಾದ ಸಣ್ಣ ನದೀ ಮುಖಜ ಭೂಮಿ. 'ಬನೇಶ್ವರ್' ಶಬ್ದ ಆ ಪ್ರದೇಶದ ಶಿವಲಿಂಗದಿಂದ ನಿಷ್ಪನ್ನವಾಗಿದೆ. ಜಾತ್ರೆಗೆ ಸೋಮದ ಮೂಲಕ ಹಾದುಹೋಗಬೇಕು. ಮುಖಜ ಭೂಮಿಗೆ ವಗದ್‌ನಲ್ಲಿ ವನ್ (ವಿರಳ ಜನಸಂಖ್ಯೆಯ ಪ್ರದೇಶ) ಎಂದು ಹೆಸರು. ಈ ವನೇಶ್ವರ್ ಅಥವಾ ಬನೇಶ್ವರ್ ಎಂದರೆ, ಮುಖಜಭೂಮಿಯ ಒಡೆಯ ಎಂದರ್ಥ.

ಈ ಪ್ರದೇಶದ ಲಿಂಗ ಸ್ವಯಂಭೂ ಎನ್ನಲಾಗಿದೆ. ಅದು ಸಣ್ಣದಾಗಿದ್ದು, ಅದರ ತುದಿ ಐದು ಭಾಗಗಳಾಗಿ ಒಡೆದಿದೆ. ಒಂದು ಹಸು ಅಲ್ಲಿಗೆ ಪ್ರತಿ ದಿವಸ ಬರುತ್ತಿತ್ತೆಂದೂ ಹಾಲು ಅದರ ಕೆಚ್ಚಲಿನಿಂದ ಲಿಂಗದ ಮೇಲೆ ಬೀಳುತ್ತಿತ್ತೆಂದೂ ಹೇಳಲಾಗಿದೆ. ಒಂದು ದಿವಸ ಅದರ ಮಾಲೀಕ ಅದನ್ನು ಹಿಂಬಾಲಿಸಿದ; ಓಡಿ ಹೋಗುವ ಪ್ರಯತ್ನದಲ್ಲಿ ಅದರ ಗೊರಸು ಲಿಂಗಕ್ಕೆ ತಾಗಿ ಅದನ್ನು ಐದು ತುಣುಕುಗಳನ್ನಾಗಿ ಒಡೆದುಹಾಕಿತು. ಲಿಂಗ ಭಗ್ನವಾಗಿದ್ದರೂ, ಈಗಲೂ ಪೂಜೆಗೊಳ್ಳುತ್ತಿರುವುದು ಅಸಾಮಾನ್ಯ; ಏಕೆಂದರೆ ಭಗ್ನಪ್ರತಿಮೆ ಎಂದೂ ಪೂಜಾವಸ್ತುವಾಗದು.

ಈಗಿನ ದೇವಾಲಯ ದುಂಗರ್‌ಪುರದ ಮಹಾರಾವಲ್ ಅಸ್ಕರನ್‌ನಿಂದ 1453ರಲ್ಲಿ

ನಿರ್ಮಿತವಾಯಿತು. ಬನೇಶ್ವರ ದೇವಾಲಯದ ಹತ್ತಿರ ವಿಷ್ಣು ದೇವಾಲಯವಿದೆ; ಅದು ವಿಷ್ಣುವಿನ ಅವತಾರವೆನಿಸಿದ, ಆ ಪ್ರದೇಶದ ಅತ್ಯಂತ ಗೌರವಾನ್ವಿತ ಸಂತನಾದ ಮಾವ್‌ಜಿಯ ಸೊಸೆ ಜಾನ್‌ಕುನ್ವರಿಯಿಂದ 1793ರಲ್ಲಿ ನಿರ್ಮಿತವಾಯಿತು. ಮಾವ್‌ಜಿ ಚೋಪ್ರಗಳೆಂಬ ಐದು ಗ್ರಂಥಗಳನ್ನು ಬರೆದಿರುವನೆಂದು ಹೇಳಲಾಗಿದೆ. ಅವನು ಅನೇಕ ಕಣಿಗಳನ್ನೂ ನುಡಿದ. ಮೂಲಗ್ರಂಥವನ್ನು ದೇವಾಲಯದ ಗೋಸ್ವಾಮಿ ದೀಪಾವಳಿ ಸಂದರ್ಭದಲ್ಲಿ ಪ್ರತಿವರ್ಷ ಓದುತ್ತಾನೆ.

ಮಾವ್‌ಜಿಯ ಅಶ್ವಾರೂಢ ದೇವಾಲಯು ಈಗಲೂ ಪೂಜೆಯ ಪ್ರಮುಖ ಪ್ರತಿಮೆಯಾಗಿದೆ. ಮಾವ್‌ಜಿಯ ನಂತರ ಅವನ ಮಗ ಪಟ್ಟಕ್ಕೆ ಬಂದ. ಅವನು ನಪುಂಸಕನಾಗಿದ್ದು, ಅವನಿಗೆ ಸಂತಾನವಿರಲಿಲ್ಲವೆಂದು ಹೇಳಲಾಗಿದೆ. ಮಾವ್‌ಜಿಯ ಇಬ್ಬರು ಶಿಷ್ಯರು ಆ ಪ್ರದೇಶದ ಮೂರನೆಯ ದೇವಾಲಯವನ್ನು–ಲಕ್ಷ್ಮೀ ನಾರಾಯಣ ದೇವಾಲಯವನ್ನು–ಕಟ್ಟಿಸಿದರು.

ಇಲ್ಲಿ ಬುಡಕಟ್ಟು ಜಾತ್ರೆ ಮಾಘ ಶುಕ್ಲ ಏಕಾದಶಿಯಿಂದ ಮಾಘಶುಕ್ಲ ಪೂರ್ಣಿಮೆ ಯುವರೆಗೆ (ಫೆಬ್ರವರಿಯಿಂದ ಮಾರ್ಚ್‌ವರೆಗೆ) ನಡೆಯುತ್ತದೆ. ಬಹುಪಾಲು ಭಕ್ತರು ಭಿಲ್ಲರು; ಪ್ರತಿಮೆಯನ್ನು ಮುಟ್ಟಲು ಪುರೋಹಿತನಿಗಷ್ಟೆ ಅವಕಾಶ. ಹಿಂದೆ ಜಾತ್ರೆಯನ್ನು ರಾಜಸತ್ತೆ ವ್ಯವಸ್ಥೆಗೊಳಿಸುತ್ತಿತ್ತು. ಈಗ ಪಂಚಾಯತ್ ನಡೆಸುತ್ತಿದೆ.

ಈ ಸಂದರ್ಭದಲ್ಲಿ ತಲೆಯೆತ್ತುವ ವರ್ಣರಂಜಿತ ಮಾರುಕಟ್ಟೆಯ ಜೊತೆಗೆ, ಪ್ರತಿರಾತ್ರಿಯೂ ಭಿಲ್ಲರು ಉತ್ಸವಾಗ್ನಿಯ ಸುತ್ತ ಹಾಡುತ್ತಾರೆ. ಹಾಡುಗಳಲ್ಲೊಂದು ಭೋಯಿರಾ ಮತ್ತು ಭಿಂಡಾರಿಗಳನ್ನೂ ಒಬ್ಬನ ಆಡುಗಳು ಮತ್ತೊಬ್ಬನವನ್ನು ಹುಲ್ಲುಗಾವಲಿನಲ್ಲಿ ಹೇಗೆ ಅಡ್ಡ ಹಾದುವೆಂಬುದನ್ನೂ ಕುರಿತು ಹೇಳುತ್ತದೆ. ಆಮೇಲೆ ನಡೆದ ಕಾಳಗದಲ್ಲಿ ಭಿಂಡಾರಿ ಮುಖಂಡ ಭೋಯಿರಾ ಮುಖಂಡನಿಂದ ಹತನಾದ. ಮತ್ತೊಂದು ಹಾಡು ಹನ್ನೆರಡು ಮಂದಿ ಹೆಂಡಿರಿದ್ದ ನಂಜಿ ದಾಮೋನನ್ನು ಕುರಿತದ್ದು. ಒಕ್ಕಣ್ಣ ಜೋಡಿ ಕನ್ನಡಕವನ್ನು, ಕುಂಟ ಕಾಲ್ಗೆಜ್ಜೆಯನ್ನು, ಮೂಗಿಲ್ಲ ದವನು ಮೂಗುಬೊಟ್ಟನ್ನು, ತೋಳಿಲ್ಲದವನು ಬಳೆಯನ್ನು–ಇತ್ಯಾದಿಯಾಗಿ ಕೇಳಿದರು. ಈ ಹಾಡು ಜಾತ್ರೆಗೆ ಹಾಸ್ಯದ ಸ್ಪರ್ಶವನ್ನೀಯುತ್ತದೆ.

ಎಲ್ಲ ಆದಿವಾಸಿಗಳಂತೆ, ಮೀನರು ಸಾಮಾಜಿಕ ಕೂಟಗಳನ್ನು ಇಷ್ಟಪಡುತ್ತಾರೆ ಮತ್ತು ಹಾಡು ಕುಣಿತಗಳನ್ನು ಸವಿಯುತ್ತಾರೆ. ಮಹಾವೀರ್‌ಜಿ, ಕೈಲಾದೇವಿ, ಶೀತ್ಲಮಾತಾ, ಬದ್ವಾಸನ್ ಮತ್ತು ಸವಾಯಿ ಮಧೋಪುರ್ ಜಿಲ್ಲೆಯ ಚೌತಕ–ಬರ್ವರಗಳ ಪ್ರಸಿದ್ಧ ದೇವಾಲಯಗಳಲ್ಲಿ ನಡೆಯುವ ಜಾತ್ರೆಗಳು ಸಾವಿರಾರು ಮಂದಿ ಮೀನರನ್ನು ಆಕರ್ಷಿಸುತ್ತವೆ ಮತ್ತು ಗಂಡಸರೂ ಹೆಂಗಸರೂ ಗುಂಪುಗಳಲ್ಲಿ ನರ್ತಿಸುತ್ತಾರೆ. ಅವರ ಹಾಡುಗಳು ಆಗಾಗ ಸ್ವಲ್ಪಮಟ್ಟಿಗೆ ಅಸಭ್ಯವಾಗುತ್ತವೆ; ಅಂತೆಯೆ ಅವರ ಕುಣಿತಗಳು.

ಜೈಪುರ್‌ದಲ್ಲಿನ ತೀಜ್ ಮತ್ತು ಗಂಗೌರ್ ಜಾತ್ರೆಗಳು ಮೀನ ಗಂಡಸರು, ಹೆಂಗಸರು, ಮಕ್ಕಳಿಂದ ವರ್ಣರಂಜಿತವೂ ಉಲ್ಲಾಸಭರಿತವೂ ಆಗುತ್ತದೆ; ಈ ಸಂದರ್ಭಗಳಲ್ಲಿ ಅವರು ನಗರದ ಮಾರುಕಟ್ಟೆಗಳಲ್ಲಿ ತುಂಬಿಕೊಳ್ಳುತ್ತಾರೆ.

ರೊಮ್ಯಾಂಟಿಕ್ ಜನಾಂಗವಾದ ಗರಸಿಯರು ಕೂಡ ತಮ್ಮ ಜಾತ್ರೆಗಳಲ್ಲಿ ಸಾಮೂಹಿಕ ನೃತ್ಯ ಮಾಡುತ್ತಾರೆ; ಈ ಜಾತ್ರೆಗಳು ಪ್ರಣಯಿಗಳು ಸಂಧಿಸುವ ನೆಲೆಗಳೂ ಹೌದು. ಒಮ್ಮೊಮ್ಮೆ ಯುವಪ್ರೇಮಿ ತನ್ನ ಪ್ರೇಯಸಿಯೊಡನೆ ಓಡಿಹೋಗುತ್ತಾನೆ; ಅದು ಅಂತಿಮವಾಗಿ ಸಾಂಪ್ರದಾಯಿಕ ವಿವಾಹದಲ್ಲಿ ಪರ್ಯವಸಾನಗೊಳ್ಳುತ್ತದೆ. ಈ ಜನರಲ್ಲಿ ಈ ಬಗೆಯ ಮದುವೆ ಜನಪ್ರಿಯ; ಏಕೆಂದರೆ ಅದು ರೊಮ್ಯಾಂಟಿಕ್, ಮಿತವ್ಯಯಕಾರಿ ಎರಡೂ ಹೌದು.

ಗರಾಸಿಯರು ಹೋಳಿ, ಗಂಗೌರ್ ಅಥವಾ ಗವ್ ಹಬ್ಬಗಳನ್ನು ಅತ್ಯುತ್ಸಾಹದಿಂದ ಚರಿಸುತ್ತಾರೆ; ಅವರ ಸಮೂಹನೃತ್ಯಗಳು ಇರುಳೆಲ್ಲ ನಡೆಯುತ್ತವೆ. ಪಲಿ ಜಿಲ್ಲೆಯ ಬಲಿ ತಹಶೀಲಿನ ಅರಾವಳಿ ಬೆಟ್ಟಗಳ ಮೇಲಿರುವ ಒಂದು ಗ್ರಾಮವಾದ ಭಿಮಾನದಲ್ಲಿ ನಡೆಯುವ ಗವ್ ಜಾತ್ರೆ ಗರಾಸಿಯ ಗಂಡುಹೆಣ್ಣುಗಳನ್ನು ಆಕರ್ಷಿಸುತ್ತದೆ; ಅವರಿಲ್ಲಿ ತಮ್ಮ ಅತ್ಯುತ್ತಮ ವಸ್ತ್ರಾಭರಣಗಳ ಸಹಿತ ಸೇರುತ್ತಾರೆ ಮತ್ತು ಹುಣ್ಣಿಮೆಯಿರುಳು ಹಾಡುತ್ತಾರೆ ಮತ್ತು ಕುಣಿಯುತ್ತಾರೆ.

*ವೀರ–ಪೂಜೆಯ ಜಾತ್ರೆ*

ವೀರಪೂಜೆ ರಾಜಾಸ್ಥಾನಿಗಳಲ್ಲೊಂದು ಪರಂಪರೆಯಾಗಿದೆ; ಅವರ ಮುಖ್ಯವಾದ ಜಾತ್ರೆಗಳಲ್ಲಿ ಕೆಲವು ಅವರ ವೀರರ ಗೌರವಾರ್ಥವಾಗಿ ನಡೆಯುವುದು ಅಚ್ಚರಿಯಲ್ಲ. ರಾಮ್‌ದೇವ್ಜೀಜಿ, ಗೋಗಾಜಿ ಮತ್ತು ತೇಜಜಿಯ ಗೌರವಾರ್ಥ ನಡೆಯುವ ಜಾತ್ರೆಗಳಲ್ಲಿ ಜನತೆಯ ಗಾಢವಾದ ಆಧ್ಯಾತ್ಮಿಕ ಪ್ರವೃತ್ತಿ ಹಾಗೂ ಅವರ ಬದುಕು ಮತ್ತು ಸಂಸ್ಕೃತಿ ಅಭಿವ್ಯಕ್ತವಾಗುತ್ತವೆ.

ಈ ಜಾತ್ರೆಗಳಲ್ಲಿ ಅತ್ಯಂತ ದೊಡ್ಡದೆಂದರೆ ರಾಮ್‌ದೇವ್‌ರ ಜಾತ್ರೆ; ಅದು ಹದಿನೈದನೆಯ ಶತಮಾನದ ಸಂತ ಶ್ರೀ ರಾಮ್‌ದೇವ್‌ಜಿಯ ಗೌರವಾರ್ಥ ಪ್ರತಿವರ್ಷ ಆಗಸ್ಟ್–ಸೆಪ್ಟೆಂಬರ್‌ನಲ್ಲಿ ಹತ್ತು ದಿನಗಳ ಕಾಲ ನಡೆಯುತ್ತದೆ. ರಾಮ್‌ದೇವ್‌ರ ಜೈಸಲ್ಮೇರ್ ಉಪವಿಭಾಗದ ಮುಖ್ಯಸ್ಥಳವಾದ ಪೊಕರಾನ್‌ದಿಂದ ಸುಮಾರು 13 ಕಿ.ಮೀ. ದೂರದಲ್ಲಿದೆ.

ರಾಮ್‌ದೇವ್‌ಜಿ ಸುಮಾರು 1458ರಲ್ಲಿ ಆ ಹಳ್ಳಿಯಲ್ಲಿ ಹುಟ್ಟಿದ. ಅವನೊಬ್ಬ ತೊಮರ ರಜಪೂತ. ಹಿಂದೂಗಳು ಅವನನ್ನು ಭಗವಾನ್ ಕೃಷ್ಣನ ಅವತಾರವೆಂದು ಪರಿಗಣಿಸುತ್ತಾರೆ; ಮುಸ್ಲಿಮರು ಅವನನ್ನು ರಾಮ್‌ಷಹ ಪೀರ್ ಎಂದು ಗೌರವಿಸುತ್ತಾರೆ.

ಹನ್ನೆರಡನೆಯ ಶತಮಾನದಲ್ಲಿ ದೊರೆ ಅನಂಗಪಾಲ ಯಾತ್ರೆಯೊಂದನ್ನು ಕೈಗೊಳ್ಳಲು ನಿರ್ಧರಿಸಿದನೆಂದು ಹೇಳಲಾಗಿದೆ. ಅವನಿಗೆ ಪುತ್ರಸಂತಾನವಿಲ್ಲದ್ದರಿಂದ, ರಾಜ್ಯದ ಆಡಳಿತವನ್ನು ತನ್ನ ಮಗಳ ಮಗನಾದ ಪೃಥ್ವಿರಾಜ್ ಚೌಹಾನ್‌ಗೆ ವಹಿಸಿದ. ಆದರೆ ದೊರೆ ಯಾತ್ರೆಯಿಂದ ಮರಳಿದಾಗ, ಪೃಥ್ವೀರಾಜ ಅವನಿಗೆ ರಾಜ್ಯವನ್ನು ಮರಳಿಸಲು ನಿರಾಕರಿಸಿದ. ಆಗ ದೊರೆ ಮತ್ತು ಅವನ ವಂಶಸ್ಥರು, ಈಗ ಶಿವ ತಹಶೀಲು ಎನಿಸಿಕೊಂಡಿರುವ ಜೈಸಲ್ಮೇರಿನ ಭಾಗದಲ್ಲಿ ನೆಲೆಸಿದರು.

ಅನಂಗಪಾಲನ ವಂಶಸ್ಥರಲ್ಲಿ ಒಬ್ಬನಾದ ಅಜಮಲ್ ದ್ವಾರಕಾಧೀಶನ ಮಹಾಭಕ್ತ; ಆದರೆ ಅವನಿಗೆ ಮಕ್ಕಳಿರಲಿಲ್ಲ. ಅವನ ಭಕ್ತಿಗೆ ಮೆಚ್ಚಿ ದ್ವಾರಕಾಧೀಶ ಅವನ ಮಗನಾಗಿ ಜನಿಸಬಯಸಿದ. ಮಗುವಿಗೆ ರಾಮ್‌ದೇವ್ ಎಂದು ಹೆಸರಿಡಲಾಯಿತು.

ರಾಮ್‌ದೇವ್ ಒಬ್ಬ ಸಂತನಾಗಿ ಬೇಗ ಪ್ರಸಿದ್ಧನಾದ; ಅವನನ್ನು ಪರೀಕ್ಷಿಸಲು ಐವರು ಪೀರರು ಮೆಕ್ಕಾದಿಂದ ಬಂದರು. ರಾಮ್‌ದೇವ್‌ಜಿ ಅವರಿಗೆ ಉಣಿಸು, ಹಾಲುಗಳನ್ನಿತ್ತ; ಆದರೆ ಅವರದನ್ನು ನಿರಾಕರಿಸಿದರು, ತಮ್ಮ ಊಟದ ಪಾತ್ರೆಗಳನ್ನು ಬಿಟ್ಟು ಬಂದಿರುವುದಾಗಿ ತಿಳಿಸಿದರು; ಅವುಗಳನ್ನವನು ತನ್ನ ಪವಾಡ ಶಕ್ತಿಯ ಮೂಲಕ ಮೆಕ್ಕಾದಿಂದ ತರಿಸಿದ. ಪೀರರು ಪ್ರಭಾವಿತರಾಗಿ, ಅವನಿಗೆ ಗೌರವ ಸಲ್ಲಿಸಿದರು.

ರಾಮ್‌ದೇವ್‌ಜಿ ನೆಹಲ್ದೆ ಎಂಬ ಹುಡುಗಿಯನ್ನು ವರಿಸಿದ. ಒಂದು ದಿವಸ ಬುಟ್ಟಿಯೊಂದರಲ್ಲಿ ಹುಡುಗಿಯೊಬ್ಬಳನ್ನು ಅವನು ಕಂಡ; ಅವಳು ಅವನ ಮಹೋನ್ನತ ಅನುಯಾಯಿಗಳಲ್ಲಿ ಒಬ್ಬಳಾಗಿ ಬೆಳೆದು, ತನ್ನ ಸಾಕುತಂದೆಗೆ ಮುನ್ನವೆ ಸಮಾಧಿಗೊಂಡಳು.

ದಲಿತರ ಉದ್ಧಾರಕ್ಕಾಗಿ ತನ್ನ ಜೀವನವನ್ನು ಮುಡಿಪಾಗಿರಿಸಿದ ಸಂತನೆಂದು ರಾಮ್‌ದೇವ್‌ಜಿ ಪರಿಗಣಿತನಾಗಿದ್ದಾನೆ. ಅವನು ಸ್ವತಃ ಸಜೀವವಾಗಿ ಸಮಾಧಿಗಿಳಿದ; ಮೃತರಾದ ತಮ್ಮವರನ್ನು ಅವನ ಅನುಯಾಯಿಗಳು ಸಮಾಧಿಮಾಡುವುದಕ್ಕೆ ಇದೇ ಕಾರಣ. ರಾಮ್‌ದೇವ್‌ಜಿಯ ಗೋರಿಯ ಸುತ್ತ ಬಿಕನೀರಿನ ಮಹಾರಾಜ ಗಂಗಾಸಿಂಹ 1931ರಲ್ಲಿ ಭವ್ಯ ದೇವಾಲಯವೊಂದನ್ನು ನಿರ್ಮಿಸಿದ. ವಸ್ತ್ರ ಹೊದಿಸಿದ ಮರದ ಕುದುರೆಬೊಂಬೆಗಳು ಆ ದೇವಾಲಯದ ಅತ್ಯಂತ ಜನಪ್ರಿಯ ಸಮರ್ಪಣೆಗಳಲ್ಲಿ ಸೇರಿವೆ. ಇದಕ್ಕೆ ಕಾರಣವೆಂದರೆ, ತನ್ನ ಸತತ ಒಡನಾಡಿಯಾಗಿದ್ದ ತನ್ನ ಕುದುರೆಯನ್ನು ರಾಮ್‌ದೇವ್‌ಜಿ ಬಹಳ ಪ್ರೀತಿಸುತ್ತಿದ್ದುದು.

ರಾಮ್‌ದೇವ್‌ರ ಜಾತ್ರೆಗೆ ಮಾರ್ವಾರ್, ಜೋಧ್‌ಪುರ್, ಬಿಕನೀರ್ ಮತ್ತು ಫುಲೇರ ಜಂಕ್ಷನ್ನುಗಳಿಂದ ಜನಭರ್ತಿ ರೈಲುಗಳು ತೆರಳುತ್ತವೆ. ರಾಮ್‌ದೇವ್‌ಜಿಯನ್ನು ಎಲ್ಲ ಜಾತಿ, ಜನಾಂಗಗಳೂ ಗೌರವಿಸುತ್ತವೆ; ಆದರೆ ದಲಿತರೆನಿಸಿಕೊಂಡವರು ಅವನ ನಿಷ್ಠಾವಂತ ಭಕ್ತರು. ಅವರು ರಾಜಾಸ್ಥಾನದಿಂದ ಮಾತ್ರವಲ್ಲದೆ ಗುಜರಾತ್, ಮಹಾರಾಷ್ಟ್ರಗಳಿಂದಲೂ ಬರುತ್ತಾರೆ.

ಇನ್ನೊಂದು ಜಾತ್ರೆ, ರಾಜಾಸ್ಥಾನದ ವೀರರ ಸ್ಮಾರಕಾರ್ಥ ವೀರಪುರಿ ಜಾತ್ರೆ ಮಂಡೋರ್‌ದಲ್ಲಿ ನಡೆಯುತ್ತದೆ. ಆ ಸ್ಥಳ ಜೋಧ್‌ಪುರಕ್ಕೆ ಸುಮಾರು ಹತ್ತು ಕಿ.ಮೀ. ದೂರದಲ್ಲಿದೆ. ಶ್ರಾವಣದ ಉಪಾಂತ ಸೋಮವಾರದಂದು ಜಾತ್ರೆ ನಡೆಯುತ್ತದೆ. ಅದು ಹದಿನೇಳನೆಯ ಶತಮಾನದಲ್ಲಿ ಮೊದಲಾಯಿತೆಂದು ನಂಬಲಾಗಿದೆ. ಅದರ ಉಗಮದ ಬಗ್ಗೆ ಎರಡು ಐತಿಹ್ಯಗಳಿವೆ. ಒಂದರ ಪ್ರಕಾರ, ಹದಿನೇಳನೆಯ ಶತಮಾನದಲ್ಲಿ ಮಂಡೋರನ್ನಾಳಿದ ಜಸವಂತ್ ಸಿಂಹನನ್ನು ಔರಂಗಜೇಬ ದಂಗೆಯೊಂದನ್ನಡಗಿಸುವುದಕ್ಕಾಗಿ ಅಹಮದ್‌ನಗರಕ್ಕೆ ಕಳುಹಿಸಿದ. ಶತ್ರುಗಳ ಸಂಖ್ಯೆ ಹೆಚ್ಚಾಗಿದ್ದುದರಿಂದ, ಜಸವಂತ್‌ಸಿಂಹ ತನ್ನ ನಾಡಿನ ಪ್ರಾಚೀನ

ವೀರರನ್ನು ನೆರವಿಗಾಗಿ ಪ್ರಾರ್ಥಿಸಿ, ಯುದ್ಧದಲ್ಲಿ ಜಯ ಗಳಿಸಲು ಸಮರ್ಥನಾದ. ಹಿಂದಿರುಗಿದ ಬಳಿಕ ಅವನು ಮಂದೋರ್‌ದಲ್ಲಿ ವೀರರ ಮೊಗಸಾಲೆಯೊಂದನ್ನು ನಿರ್ಮಿಸಿದ. ಪ್ರತಿವರ್ಷ ಶ್ರಾವಣದ ಕಡೆಯ ಸೋಮವಾರ ಅವನು ವೀರರಿಗೆ ಗೌರವ ಸಲ್ಲಿಸಲು ಮೊಗಸಾಲೆಗೆ ಹೋಗುತ್ತಿದ್ದ. ಶ್ರೀಮಂತರ ಮತ್ತಿತರರ ದೊಡ್ಡ ಮೆರವಣಿಗೆಯೊಂದು ಆ ಸಂದರ್ಭದಲ್ಲಿ ಅವನನ್ನು ಹಿಂಬಾಲಿಸುತ್ತಿತ್ತು; ಆದರೆ ಈ ಪದ್ಧತಿಯನ್ನು ಅವನ ಉತ್ತರಾಧಿಕಾರಿಗಳು ನಿಲ್ಲಿಸಿಬಿಟ್ಟರು.

ಜಾತ್ರೆಯ ಉಗಮಕ್ಕೆ ಸಂಬಂಧಿಸಿದ ಎರಡನೆಯ ಐತಿಹ್ಯ ಸೋದರಪೂಜೆಯನ್ನು ಕುರಿತದ್ದು. ಮೊಘಲರ ಕಾಲದಲ್ಲಿ, ಒಬ್ಬ ರಜಪೂತ ಯುವಕ ಸೈನ್ಯವನ್ನು ಸೇರುವುದಕ್ಕಾಗಿ ತನ್ನ ಅವಿವಾಹಿತ ಸೋದರಿಯನ್ನು ಒಂಟಿಯಾಗಿ ಬಿಟ್ಟು ಹೋಗಬೇಕಾಯಿತು. ಸೋದರಿ ತನ್ನ ಸೋದರನ ಹಣೆಗೆ ತಿಲಕವನ್ನು ಹಚ್ಚಿ, ಭಾರವಾದ ಹೃದಯದಿಂದ ಅವನನ್ನು ಬೀಳ್ಕೊಟ್ಟಳು. ಅವನು ಜಯಶಾಲಿಯಾಗಿ ಯುದ್ಧದಿಂದ ಹಿಂದಿರುಗಿದ; ಅಲ್ಲಿಂದ ಮುಂದಕ್ಕೆ ಆ ಪ್ರದೇಶದ ಸೋದರಿಯರು ಆ ದಿನವನ್ನು ತಮ್ಮ ಸೋದರರಿಗಾಗಿ ಪ್ರಾರ್ಥನೆಯ ದಿನವನ್ನಾಗಿ ಆಚರಿಸತೊಡಗಿದರು.

ತಮ್ಮ ಸವಾರರಷ್ಟೇ ಅಮರವಾದ ಹೆಸರು ಗಳಿಸಿದ ಅತ್ಯುತ್ತಮ ಅಶ್ವಗಳನ್ನೇರಿ, ಶಿರಸ್ತ್ರಾಣಸಹಿತ ಯುದ್ಧಸನ್ನದ್ಧರಾದ ಮರುಭೂಮಿಯ ಯೋಧರ ಪ್ರತಿಮೆಗಳು ಪ್ರದರ್ಶಿತವಾಗಿರುವ ಮೊಗಸಾಲೆಯ ಸುಂದರ ವರ್ಣನೆಯನ್ನು ಜೇಮ್ಸ್ ಟಾಡ್ ಕೊಟ್ಟಿದ್ದಾನೆ.

ಝುಂಝುನು ನಗರದಲ್ಲಿ ನಡೆಯುವ ರಾಣಿ ಸತಿ ಜಾತ್ರೆ 1912ರಲ್ಲಿ ಮೊದಲು ವ್ಯವಸ್ಥಿತವಾಯಿತು. 1960ರಿಂದ ಅದು ಬಹಳ ಜನಪ್ರಿಯವಾಗಿ, ಈಗ ವರ್ಷಕ್ಕೆರಡು ಸಲ, ಮಾಘ ಕೃಷ್ಣ ನವಮಿ ಹಾಗೂ ಭಾದ್ರಪದ ಅಮಾವಾಸ್ಯೆಯಂದು ಜರುಗುತ್ತದೆ.

ಜಾಲನ್ ಕುಟುಂಬದ ಹದಿಮೂರು ಮಂದಿ ಸತಿಯರ ಸರಣಿಯಲ್ಲಿ ಮೊದಲಿಗಳಾದ ರಾಣಿಸತಿ ಚಿತೆಯೇರಿದ್ದು ಮಾಘಕೃಷ್ಣ ನವಮಿಯಂದು. ಕಡೆಯ ಸತಿ ಭಾದ್ರಪದ ಅಮಾವಾಸ್ಯೆಯಂದು.

ರಾಣಿ ತನ್ನ ಕುಟುಂಬದ ಪ್ರಥಮ ಸತಿಯಾದುದರಿಂದ, ಜಾತ್ರೆ ಅವಳ ಹೆಸರಿನಲ್ಲಿ ನಡೆಯುತ್ತದೆ. ದೇವಾಲಯಕ್ಕೂ ಅವಳ ಹೆಸರೇ ಇದೆ. ಕೆಲವರ ಪ್ರಕಾರ ಅವಳ ಸಹಗಮನದ ವರ್ಷ 1295, ಇತರರು 1595 ಎಂದು ಪ್ರತಿಪಾದಿಸುತ್ತಾರೆ.

ಐತಿಹ್ಯದ ಪ್ರಕಾರ, ಹಿಸ್ಸಾರಿನ ನವಾಬನ ದಿವಾನನಾದ ಜಾಲಿರಾಮನಿಗೆ ತಂಧನ್‌ರಾಂ ಎಂಬ ಒಬ್ಬ ಮಗನಿದ್ದ; ಅವನಲ್ಲಿ ಒಂದು ಸೊಗಸಾದ ಹೆಣ್ಣು ಕುದುರೆಯಿತ್ತು. ನವಾಬನ ಮಗ ಅದನ್ನು ತನಗಾಗಿ ಬಯಸಿದ. ಅವನ ಕೋರಿಕೆ ತಿರಸ್ಕೃತವಾದಾಗ, ಅವನು ಕುದುರೆಯನ್ನು ಕದಿಯಲು ನಿರ್ಧರಿಸಿದ. ಅವನು ಇರುಳಿನಲ್ಲಿ ತಂಧನ್‌ರಾಮನ ಮನೆಗೆ ಹೋದ; ಆದರೆ ಅವನು ಕುದುರೆಯನ್ನೊಯ್ಯುತ್ತಿದ್ದಾಗ, ಅದು ಕೆನೆಯಿತು. ತಂಧನ್‌ರಾಂ ಎಚ್ಚತ್ತು, ಕಳ್ಳನ ಮೇಲೆ ಭರ್ಜಿಯನ್ನೆಸೆದು ಅವನನ್ನು ಕೊಂದ. ನವಾಬನ ಕೋಪಕ್ಕೆ ಹೆದರಿದ ಕುಟುಂಬ ಝುಂಝುನುವಿಗೆ ಪಲಾಯನ ಮಾಡಿತು; ಅಲ್ಲಿ ಜಾಲಿರಾಂ ಆ ಊರಿನ ನವಾಬನ

ದಿವಾನನಾದ.

ಒಂದು ದಿವಸ, ತಂಥನ್‌ರಾಂ ತನ್ನ ಹೆಂಡತಿ ನಾರಾಯಿಣಿದೇವಿ ಹಾಗೂ ಕೆಲವರು ಅನುಯಾಯಿಗಳೊಡನೆ ಝುಂಝುನುಗೆ ಮರಳುತ್ತಿದ್ದಾಗ, ಹಿಸ್ಸಾರಿನ ನವಾಬ ಅವನ ಮೇಲೆ ಆಕ್ರಮಣ ಮಾಡಿ, ಅವನನ್ನು ಕೊಂದ. ನಾರಾಯಿಣಿದೇವಿ ಪತಿಯ ದೇಹವನ್ನೊಯ್ದು, ಸಹಗಮನ ಮಾಡಿದಳು. ಮುಂದೆ ಅವಳು ಕೆಲವರಿಗೆ ದೇವಿಯಾಗಿ ಕಾಣಿಸಿಕೊಂಡು, ಪೂಜೆಗೊಳ್ಳತೊಡಗಿದಳು. ಜಾಲಿರಾಮನ ಕುಟುಂಬದ ಇತರ ಹನ್ನೆರಡು ಮಂದಿ ಸ್ತ್ರೀಯರು ನಾರಾಯಿಣಿಯನ್ನನುಸರಿಸಿ, ಚಿತೆಯೇರಿದರು. ಅವಳ ಪ್ರಮುಖ ಅನುಯಾಯಿಗಳು ಜಾಲನರು; ಜಾಲಿರಾಮನ ಮತ್ತೊಬ್ಬ ಮಗನ ವಂಶಸ್ಥರು.

ಬಾರ್ಮರ್‌ದ ತಿಲ್ವಾರದ ಬಳಿಯಿರುವ ಲೂನಿ ನದಿಯ ಒಣಪಾತ್ರದಲ್ಲಿ ವಾರ್ಷಿಕವಾಗಿ ಮಾರ್ಚ್–ಏಪ್ರಿಲ್‌ನಲ್ಲಿ ಒಂದು ಪಕ್ಷದವರೆಗೆ ನಡೆಯುವ ಮಲ್ಲಿನಾಥ ಜಾತ್ರೆ ರಾಜಾಸ್ಥಾನದ ಅತ್ಯಂತ ದೊಡ್ಡ ಜಾತ್ರೆಗಳಲ್ಲೊಂದು. ತಿಲ್ವಾರ ಕೇಂದ್ರಸ್ಥಾನದಲ್ಲಿರುವುದರಿಂದ, ಜೈಸಲ್ಮೇರ್, ಜೋಧ್‌ಪುರ್, ಪಲಿ ಮತ್ತು ಜಾಲೋರ್‌ದ ಸುತ್ತಮುತ್ತಲ ಜಿಲ್ಲೆಗಳಿಂದ ದನಗಳ ವ್ಯಾಪಾರಿಗಳು ಅಲ್ಲಿ ಪ್ರಾಚೀನ ಕಾಲದಿಂದ ನೆರೆಯುತ್ತ ಬಂದಿದ್ದಾರೆ. ಒಂಟೆ, ಕುದುರೆ, ಮೇಕೆ ಮತ್ತು ಕುರಿಗಳ ಮಾರಾಟ ಮತ್ತು ಕೊಳ್ಳಾಟ ಜಾತ್ರೆಯಲ್ಲಿ ನಡೆಯುತ್ತದೆ.

ಜಾತ್ರೆಯ ಸ್ಥಳದಿಂದ ಸುಮಾರು ಐದು ಕಿ.ಮೀ. ದೂರದಲ್ಲಿ, ಪ್ರಾಚೀನ ನೆಲೆಯೊಂದರ–ಖೇಡ್–ಅವಶೇಷಗಳಿವೆ; ಸಿಂದ್‌ಗೆ ಹೋಗುವ ಹಳೆಯ ಕಾರವಾನ್ ಮಾರ್ಗದಲ್ಲಿ ಅದೊಂದು ಮುಖ್ಯ ನಗರವಾಗಿತ್ತು. ಪರಮಾರ ರಜಪೂತರು ಹನ್ನೆರಡನೆಯ ಶತಮಾನದವರೆಗೆ ಅದರ ಮೇಲೆ ಪ್ರಭುತ್ವ ಹೊಂದಿದ್ದರು; ಆಮೇಲೆ ಚೌಹಾನರು ಅದನ್ನು ಹಿಡಿದುಕೊಂಡರು. ತಮ್ಮ ಮನೆದೇವರಾದ ಮಲ್ಲಿನಾಥನ ಹೆಸರಿನಲ್ಲಿ ಅವರು ತಮ್ಮನ್ನು ಮಲ್ಲಿ ಎಂದು ಕರೆದುಕೊಂಡರು, ಆ ಪ್ರದೇಶಕ್ಕೆ ಮಲ್ಲಾನಿ ಎಂದು ಹೆಸರಾಯಿತು. ಅದೊಂದು ಆದಿವಾಸಿ ಬುಡಕಟ್ಟಾಗಿದ್ದು, ಕ್ರಿ.ಪೂ. 324ರಲ್ಲಿ ಅಲೆಕ್ಸಾಂಡರ್ ಪಂಜಾಬಿನಿಂದ ಸಿಂಧ್‌ಗೆ ಹೋಗುವಾಗ ಅವನಿಗೆ ಕಾಟ ಕೊಟ್ಟಿತೆಂದು ಹೇಳಲಾಗಿದೆ. ಅವರ ಒಂಬತ್ತು ಕೋಟೆಗಳಲ್ಲಿ ತಿಲ್ವಾರ ಒಂದಾಗಿತ್ತು.

ಕನೂಜ್‌ನಲ್ಲಿ ಮಹಮದ್ ಘಜ್ನಿ ತಮ್ಮನ್ನು ಸೋಲಿಸಿದ ನಂತರ ರಾಠೋಡರು ಆ ಪ್ರದೇಶವನ್ನು ಪ್ರವೇಶಿಸಿದರು. ಸ್ಥಳೀಯರ ಪರಸ್ಪರ ಮಾರಕ ಕಲಹಗಳು ಮುಸ್ಲಿಂ ವಿಜೇತರಿಗೆ ನೆರವಾದುವು. ಖೇಡ್ ಮತ್ತಿತರ ಹತ್ತಿರದ ಸ್ಥಳಗಳು ಪದೇಪದೇ ನಡೆದ ಆಕ್ರಮಣಗಳಿಂದ ಅಪ್ರಮುಖ ಗ್ರಾಮಗಳಾಗಿ ಕುಗ್ಗಿದುವು. ಮುಂದೆ ಆ ಪ್ರದೇಶಕ್ಕೆ ತಿಲ್ವಾರ ಎಂದು ಹೆಸರಾಯಿತು; ಎಣ್ಣೆ ತೆಗೆಯುವ ಕಸುಬಿನಲ್ಲಿ ತೊಡಗಿದ ಬಹುಮಂದಿ 'ತೆಲಿ'ಗಳು ಮತ್ತು ಇತರರು ಅಲ್ಲಿ ನೆಲಸಿದ್ದು ಇದಕ್ಕೆ ಕಾರಣ.

ಮಧ್ಯಯುಗದಲ್ಲಿ, ದಾಳಿಕಾರರನ್ನು ನಿರೋಧಿಸಿದ ಯಾರನ್ನೆ ಆಗಲಿ, ರಕ್ಷಕನೆಂದು ಕೊಂಡಾಡಲಾಗುತ್ತಿತ್ತು. ಮಲ್ಲಿನಾಥ ಆ ಕೆಲಸವನ್ನು ಮಾಡಿದ. ಅವನು

ನೆರೆಯುವರನ್ನು ವಿಧೇಯರನ್ನಾಗಿಸಿ, ಮುಖ್ಯ ಪಟ್ಟಣವಾಗಿದ್ದ ಮಂದೋರನ್ನು ತುರ್ಕರಿಂದ ಕಿತ್ತುಕೊಂಡ. ಅವನ ಪ್ರಭುತ್ವ ಪಶ್ಚಿಮದಲ್ಲಿ ಸಿಂದ್‌ವರೆಗೆ ಮತ್ತು ಉತ್ತರದಲ್ಲಿ ಜೈಸಲ್ಮೇರ್‌ವರೆಗೆ ವ್ಯಾಪಿಸಿತ್ತು. ಮಲ್ಲಿನಾಥನ ವಿಗ್ರಹವೊಂದನ್ನು ದೇವಾಲಯದಲ್ಲಿ ಪ್ರತಿಷ್ಠಿಸಲಾಗಿದೆ; ಅಲ್ಲಿ ಜಾತ್ರೆಯ ಅವಧಿಯಲ್ಲಿ ಬತ್ತಾಸು, ಲಾಡುಗಳನ್ನು ಅರ್ಪಿಸಲಾಗುತ್ತದೆ. ಅವನ ಪರಾಕ್ರಮದ ಗೌರವಾರ್ಥವಾಗಿ ಕುದುರೆಯ ಪ್ರತಿಕೃತಿಗಳೂ ಅರ್ಪಿತವಾಗುತ್ತವೆ.

ಪ್ರಾಯಃ ವೀರಪೂಜಾ ಜಾತ್ರೆಗಳಲ್ಲಿ ಅತ್ಯಂತ ಪ್ರಾತಿನಿಧಿಕವಾದುದು ಗಂಗಾನಗರ ಜಿಲ್ಲೆಯ ಗೋಗಮೇದಿ ಗ್ರಾಮದಲ್ಲಿ ನಡೆಯುವ ಗೋಗಾಜಿ ಜಾತ್ರೆ; ಅದು ಹಿಂದೆ ತೃತೀಯ ಅಧ್ಯಾಯದಲ್ಲಿ ಉಕ್ತನಾಗಿರುವ ಗೋಗಾಜಿಯ ಗೌರವಾರ್ಥ ನಡೆಯುತ್ತದೆ. ಜಾತ್ರೆ ಭಾದ್ರಪದದ ಕೃಷ್ಣಪಕ್ಷದ ಒಂಬತ್ತನೆಯ ದಿನದಿಂದ (ಗೋಗನವಮಿ) ಅದೇ ಮಾಸದ ಶುಕ್ಲಪಕ್ಷದ ಹನ್ನೊಂದನೆಯ ದಿನದವರೆಗೆ ನಡೆಯುತ್ತದೆ. ಸುಮಾರು 60,000 ಜನ ಅಲ್ಲಿ ಸೇರುತ್ತಾರೆ. ಜಾತ್ರೆಯ ಉಗಮ ತಿಳಿಯದು; ಆದರೆ ಅದು ಹನ್ನೊಂದನೆಯ ಶತಮಾನದಲ್ಲಿ ಮೊದಲಾಯಿತೆಂದು ನಂಬಲಾಗಿದೆ.

ಚೌಹಾನ ದೊರೆ ಗೋಗಾಜಿ ತುರ್ಕರ ವಿರುದ್ಧ ಅನೇಕ ಕಾಳಗಗಳನ್ನು ಹೂಡಿದ; ಅವನೊಬ್ಬ ಗೋಪೂಜಕನೂ ಹಿಂದೂಧರ್ಮ ರಕ್ಷಕನೂ ಆಗಿದ್ದ. ಹಿಂದೆಯೆ ಹೇಳಿದಂತೆ, ಅವನು ತನ್ನ ಸೋದರ ಸಂಬಂಧಿಗಳನ್ನು ಕೊಂದ; ಅವನ ತಾಯಿ ಅವನನ್ನು ಹನ್ನೆರಡು ವರ್ಷಕಾಲ ರಾಜ್ಯದಿಂದ ಬಹಿಷ್ಕರಿಸಿದಳು. ಆದರೆ ಅವನು ಪ್ರತಿ ರಾತ್ರಿ ತನ್ನ ಹೆಂಡತಿ ಸುರಿಯಲ್‌ಳಲ್ಲಿಗೆ ಬರುತ್ತಿದ್ದ. ಅವನ ತಾಯಿಗಿದು ತಿಳಿದಾಗ, ತನಗೆ ಅವಿಧೇಯತೆ ತೋರಿದ್ದಕ್ಕಾಗಿ ಅವನಿಗೆ ಛೀಮಾರಿ ಹಾಕಿದಳು. ಗೋಗಾಜಿ ಆ ಸ್ಥಳವನ್ನು ಬಿಟ್ಟು, ಮೇದಿಯಲ್ಲಿ ಸಮಾಧಿಗೊಂಡನೆಂದು ಹೇಳಲಾಗಿದೆ. ಆ ಸ್ಥಳ ಈಗ ಗೋಗಮೇದಿ ಎಂದು ಹೆಸರಾಗಿದೆ.

ಗೋಗಾಜಿಯ ಬಗೆಗೆ ಅನೇಕ ಕತೆಗಳಿವೆ. ಅವನು ಪೃಥ್ವೀರಾಜ ಚೌಹಾನನ ಸಮಕಾಲೀನನೆಂದು ಕೆಲವರು ಹೇಳುತ್ತಾರೆ. ಮತ್ತೊಬ್ಬ ಲೇಖಕನ ಪ್ರಕಾರ, ಅವನು ತುರ್ಕಿಷ್ ಆಕ್ರಮಣಕಾರರನ್ನು ಹನ್ನೊಂದು ಬಾರಿ ಸೋಲಿಸಿ, ಕೆಲವು ಹಸುಗಳನ್ನು ರಕ್ಷಿಸುವಾಗ ಹತನಾದ ಗೋಪೇಂದ್ರಾಜ್. ಮಹಮದ್ ಘಜ್ನಿಯ ವಿರುದ್ಧ ಸಟ್ಲೆಜ್ ಮಾರ್ಗವನ್ನು ಕಾಯ್ದುಕೊಳ್ಳುವಾಗ ತನ್ನ ನಲವತ್ತೇಳು ಮಂದಿ ಪುತ್ರರೊಡನೆ ಮಡಿದ ಗೋಗ ಚೌಹಾನನೆ ಗೋಗಾಜಿ ಎಂದು ಬರೆಯುತ್ತಾನೆ, ಜೇಮ್ಸ್ ಟಾಡ್. ಸುಲ್ತಾನ್ ಮಹಮದ್‌ಗೆ ಗೋಗಾಜಿಯ ಬಗೆಗೆ ಬಹಳ ಗೌರವವಿತ್ತು; ಆದರೆ ಅವನ ದೇವಾಲಯವನ್ನು ಸುಲ್ತಾನ್ ಮಸೀದಿಯನ್ನಾಗಿ ಪರಿವರ್ತಿಸಿದ.

ಮತ್ತೊಂದು ಐತಿಹ್ಯದ ಪ್ರಕಾರ, ತೌರಿಗೆ ಹೋಗುವಂತೆ ಗೋಗಾಜಿಯ ತಾಯಿಗೆ ಅವಳ ಪತಿ ಅಪ್ಪಣೆಮಾಡಿದಾಗ, ಅವಳು ಗರ್ಭಿಣಿಯಾಗಿದ್ದಳು. ಗರ್ಭದಲ್ಲಿದ್ದ ಗೋಗಾಜಿ ತನ್ನ ಅಜ್ಜನ ಮನೆಯಲ್ಲಿ ಹುಟ್ಟಬಾರದೆಂದು ದಾರಿಯಲ್ಲಿ ನಿರ್ಧರಿಸಿದ ಮತ್ತು ತನ್ನ ತಾಯಿ ಪಯಣಿಸುತ್ತಿದ್ದ ಗಾಡಿಯ ಎತ್ತುಗಳಲ್ಲಿ ಒಂದನ್ನು ಕಚ್ಚುವಂತೆ ಒಂದು ಹಾವಿಗೆ ಆಜ್ಞಾಪಿಸಿದ. ಆದ್ದರಿಂದ, ಎತ್ತಿನಗಾಡಿ ಅವನ ತಂದೆಯ ಮನೆಗೆ

ಮರಳಿತು. ಆಮೇಲೆ ಎತ್ತು ಬದುಕಿಕೊಂಡಿತು.

ಗೋಗಾಜಿಗೆ ಇಬ್ಬರು–ಸುರಿಯಲ್ ಮತ್ತು ಕಲಾಮಂದಿ–ಪತ್ನಿಯರಿದ್ದರೆಂದೂ ಅವನ ತಾಯಿ ಬಹಿಷ್ಕರಿಸಿದಾಗ ಅವನನ್ನು ಭೂಮಿ ನುಂಗಿತೆಂದೂ ಕೆಲವರ ಹೇಳಿಕೆ. ಆದರೆ ಸುರಿಯಲಳ ಪ್ರಾರ್ಥನೆಗಳಿಂದ ಅವನು ಪುನರುಜ್ಜೀವನಗೊಂಡ. ಅವನ ಸಮಾಧಿ ಹಾಲ್ಗಲ್ಲಿನಿಂದಾಗಿದೆ. ಭರ್ಜಿ ಹಿಡಿದು ಅಶ್ವಾರೋಹಿಯಾಗಿರುವಂತೆ ಪ್ರತಿಮೆ ಅವನನ್ನು ಚಿತ್ರಿಸುತ್ತದೆ. ಅವನ ಚಾವಟಿಯನ್ನೂ ಪೂಜಿಸಲಾಗುತ್ತದೆ; ಬಂಜೆಯರಿಗೆ ಅವನು ಆಶ್ರಯದಾತನೆಂದು ಭಾವಿಸಲಾಗಿದೆ. ಗೋಗ ನವಮಿಯಂದು ಅವನ ಕುದುರೆಯ ಪ್ರತಿಕೃತಿಗಳನ್ನು ಪೂಜಿಸಲಾಗುತ್ತದೆ. ಅವನು ತನ್ನ ಬದುಕಿನ ಕೊನೆಯಲ್ಲಿ ಇಸ್ಲಾಂ ಧರ್ಮವನ್ನಪ್ಪಿದನೆಂದು ಹೇಳಿಕೊಳ್ಳುವ ಮುಸ್ಲಿಮರು ಅವನನ್ನು ಉತ್ತರಪ್ರದೇಶದಲ್ಲಿ ಜಹೀರ್‌ಪೀರ್ ಎಂದು ಗೌರವಿಸುತ್ತಾರೆ.

*ಋತುಜಾತ್ರೆಗಳು*

"ತೀಜ್ ತ್ಯೋಹರ ಬವ್ರೋರಿ, ಲೆ ದೂಬಿ ಗಂಗೌರ್" ಎಂಬ ರಾಜಾಸ್ಥಾನದ ಒಂದು ಗಾದೆಯ ಅರ್ಥವಿದು. ಹಬ್ಬಗಳ ಚಕ್ರ ಶ್ರಾವಣಮಾಸದಲ್ಲಿ ತೀಜ್‌ನಿಂದ ಮೊದಲಾಗುತ್ತದೆ; ಈ ಹಬ್ಬದಿಂದ ಮೊದಲಾಗುವ ವರ್ಷ ಗಂಗೌರ್‌ದಿಂದ ಕೊನೆಗೊಳ್ಳುತ್ತದೆ.

ಹಬ್ಬಗಳಲ್ಲಿ ತೀಜ್‌ಗೆ ಪ್ರಥಮಸ್ಥಾನ ಕೊಟ್ಟಿರುವುದು ಅರ್ಥವತ್ತಾಗಿದೆ. ಅದು ವಾಸ್ತವವಾಗಿ ಮಳೆಗಳ ಹಬ್ಬ; ಆಗ, ಮಳೆ ಮಾರುತ ಅನುಕೂಲವಾಗಿದ್ದರೆ, ರಾಜಾಸ್ಥಾನ ತನ್ನ ಅತ್ಯುತ್ತಮ ಸ್ಥಿತಿಯಲ್ಲಿರುತ್ತದೆ.

ಶ್ರಾವಣದ ಶುಕ್ಲಪಕ್ಷದ ಮೂರನೆಯ ದಿನ ಬರುವ ತೀಜ್ ಹುಡುಗಿಯರ ಹಬ್ಬ; ಅದಕ್ಕೆ ಪೂರಕವಾಗಿ ಸೊಸೆಯಂದಿರ ಪಾಲಿನ ತೀಜ್ ಮುಂದಿನ ಭಾದೋನ್ ಮಾಸದ ಶುಕ್ಲಪಕ್ಷದಲ್ಲಿ ಬರುತ್ತದೆ. ಹೆಣ್ಣುಮಕ್ಕಳಿಗೆ ಮತ್ತು ಸೊಸೆಯಂದಿರಿಗೆ ಆ ದಿವಸ ಸಿಹಿತಿಂಡಿಗಳನ್ನೂ ವಸ್ತ್ರಗಳನ್ನೂ ಕೊಡಲಾಗುತ್ತದೆ. ಉಯ್ಯಾಲೆಗಳು ಸಾಮಾನ್ಯ ದೃಶ್ಯ; ಹೊಸದಾಗಿ ಮದುವೆಯಾದ ಹುಡುಗಿಯರು ಪರಿಚಿತ ಪರಿಸರ ದಲ್ಲಿ ಉಯ್ಯಾಲೆಯ ಸುಖವನ್ನನುಭವಿಸಲು ತೌರಿಗೆ ಮರಳುತ್ತಾರೆ.

ಒಂದು ವರ್ಷದಲ್ಲಿ ಮೂರು ತೀಜ್ ಹಬ್ಬಗಳಿರುತ್ತವೆ; ಆ ಸಂದರ್ಭಗಳಲ್ಲಿ ಪಟ್ಟಣ, ಗ್ರಾಮಗಳಲ್ಲಿ ಜಾತ್ರೆಗಳು ನಡೆಯುತ್ತವೆ. ಅತ್ಯಂತ ವರ್ಣರಂಜಿತವಾದ ತೀಜ್ ಜಾತ್ರೆ ಜೈಪುರದಲ್ಲಿ ನಡೆಯುತ್ತದೆ. ಗವಸು ಹಾಕಿದ ಆನೆಗಳು, ಅಲಂಕೃತವಾದ ಕುದುರೆಗಳು ಮತ್ತು ಒಂಟೆಗಳು ಹಾಗೂ ವಿಶಿಷ್ಟ ಪೋಷಾಕಿನ ಸೇವಕರು ತೀಜ್ ವಿಗ್ರಹದ ಜೊತೆ ಮೆರವಣಿಗೆಯಲ್ಲಿ ಸಾಗುತ್ತಾರೆ.

ಹಬ್ಬಗಳ ಚಕ್ರದಲ್ಲಿ ಕೊನೆಯದಾದ ಗಂಗೌರ್, ಧಾರ್ಮಿಕ ಹಬ್ಬವಾಗಿರುವುದು ಮಾತ್ರವಲ್ಲದೆ, ರಾಜಾಸ್ಥಾನದ ಸಾಂಸ್ಕೃತಿಕ ಪರಂಪರೆಯನ್ನು ಸಂಕೇತಿಸುತ್ತದೆ. ಗಣ್ ಎಂಬುದು ಶಿವನ ಒಂದು ಹೆಸರು; ಗೌರಿ ಎಂಬುದು ಅವನ ಪತ್ನಿಯಾದ ಪಾರ್ವತಿಯ ಇನ್ನೊಂದು ಹೆಸರು; ಅವರು ದಾಂಪತ್ಯದ ಆನಂದವನ್ನು

ಸಂಕೇತಿಸುತ್ತಾರೆ. ಈ ಹಬ್ಬದಲ್ಲಿ ಅಭಿವ್ಯಕ್ತಿಗೊಳ್ಳತಕ್ಕದ್ದು ಆದರ್ಶ ಮಹಿಳೆಯನ್ನು ಕುರಿತ ಭಕ್ತಿ.

ವಿವಾಹಿತ ಸ್ತ್ರೀಯರೂ ಕನ್ಯೆಯರೂ ಈ ಹಬ್ಬವನ್ನು ರಾಜಾಸ್ಥಾನದಲ್ಲಿ ಅನಾದಿಕಾಲದಿಂದ ಆಚರಿಸುತ್ತ ಬಂದಿದ್ದಾರೆ. ಅದು ಚೈತ್ರದ ಮೊದಲ ವಾರದಲ್ಲಿ ಪ್ರಾರಂಭವಾಗಿ, ಆ ತಿಂಗಳ ಶುಕ್ಲಪಕ್ಷದ ನಾಲ್ಕನೆಯ ದಿನದವರೆಗೆ ಮುಂದುವರಿಯುತ್ತದೆ. ಅವಿವಾಹಿತೆಯರು ಒಳ್ಳೆಯ ಗಂಡನಿಗಾಗಿ ಪ್ರಾರ್ಥಿಸಿದರೆ, ವಿವಾಹಿತೆಯರು ತಮ್ಮ ಗಂಡಂದಿರ ಆರೋಗ್ಯ, ದೀರ್ಘಾಯುಷ್ಯ ಮತ್ತು ಯೋಗಕ್ಷೇಮಗಳಿಗಾಗಿ ಪ್ರಾರ್ಥಿಸುತ್ತಾರೆ. ವಿಧವೆಯರು ಸಮಾರಂಭಗಳಲ್ಲಿ ಭಾಗವಹಿಸುವುದು ನಿಷಿದ್ಧ. ಹೊಸದಾಗಿ ಮದುವೆಯಾದ ಹುಡುಗಿ ಹಬ್ಬಗಳ ಹದಿನೆಂಟು ದಿನಗಳ ಪೂರ್ಣಚಕ್ರವನ್ನು ಆಚರಿಸುವುದು ಕಡ್ಡಾಯ. ಅವಳು ಒಂದು ಬಾಬುಲ್ ಟೊಂಗೆಯನ್ನು ಕಳುಹಿಸುವುದರ ಮೂಲಕ ಆರು, ಎಂಟು ಅಥವಾ ಹತ್ತು ಮಂದಿ ಅವಿವಾಹಿತ ಗೆಳತಿಯರನ್ನು ಆಮಂತ್ರಿಸುತ್ತಾಳೆ. ಅವಳು ಪೂಜಿಸುವಾಗ ಅವರು ಜೊತೆಗಿರುತ್ತಾರೆ. ಮುಖ್ಯ ಪೂಜಾಕರ್ತೆಯೂ ಸೇರಿದಂತೆ ಸಂಖ್ಯೆ ಬೆಸವಾಗಿರುತ್ತದೆ. ಪೂಜೆಯ ನಿರ್ದಿಷ್ಟ ಅವಧಿ ಪೂರ್ಣವಾಗುವವರೆಗೆ ನಿವೇದನೆ ವರ್ಷಾನುವರ್ಷ ಮುಂದುವರಿಯುತ್ತದೆ.

ವಾರ್ಷಿಕ ಪೂಜೆ ಸಾಮಾನ್ಯವಾಗಿ ತೀಜ್‌ನಂದು ಕೊನೆಗೊಳ್ಳುತ್ತದೆ; ಆಗ ಭಕ್ತರು ದೇವತೆಗೆ ವಿದಾಯ ಹೇಳುತ್ತಾರೆ.

ಹಬ್ಬದ ಪ್ರಥಮ ಪ್ರಮುಖ ವಿಧಿಯೆಂದರೆ, ಹೋಳಿಯ ಬೆಂಕಿಯಿಂದ ಬೂದಿಯನ್ನು ಸಂಚಯಿಸುವುದು ಮತ್ತು ಅದರಲ್ಲಿ ಗೋಧಿ, ಬಾರ್ಲಿಗಳ ಕಾಳುಗಳನ್ನು ಹುಗಿಯುವುದು. ಅವು ಮೊಳೆಯುವತನಕ ಪ್ರತಿನಿತ್ಯ ಅವಕ್ಕೆ ನೀರೆರೆಯಲಾಗುತ್ತದೆ. ಶಿವ, ಪಾರ್ವತಿಯರ ಹಾಡುಗಳೊಡನೆ ಮತ್ತು ತಲೆಯ ಮೇಲೆ ನೀರಿನ ಕೊಡಗಳನ್ನು ಹೊರುವುದರೊಡನೆ ವಿಧಿಯನ್ನು ಆಚರಿಸಲಾಗುತ್ತದೆ. ಹೋಳಿಯ ಒಂದು ವಾರದ ನಂತರ, ಸ್ತ್ರೀಯರು ಜೇಡಿಮಣ್ಣು ತಂದು ಗೌರಿ, ಈಶ್ವರನ ವಿಗ್ರಹಗಳನ್ನು ಮಾಡುತ್ತಾರೆ. ಹಳೆಯ ರಾಜವಂಶಗಳಲ್ಲಿ ಮರದಿಂದ ಮಾಡಿದ ಶಾಶ್ವತ ವಿಗ್ರಹಗಳಿರುತ್ತವೆ. ಬಿಕನೀರಿನ ಅರಮನೆಗಳಲ್ಲಿರುವ ಸೊಗಸಾದ ವಿಗ್ರಹಗಳು ಪ್ರಸಿದ್ಧವಾಗಿವೆ.

ದೇವಿಯ ಗೌರವಾರ್ಥ ನಡೆಯುವ ವಿಧಿಗಳು, ಅವಳನ್ನು ಮತ್ತು ಅವಳ ಪತಿಯನ್ನು ಸ್ತುತಿಸುವ ಸುಂದರತಮ ಹಾಡುಗಳನ್ನು ಕೂಡಿ, ವರ್ಣರಂಜಿತವಾಗಿರುತ್ತವೆ. ಭಕ್ತರು ತಮ್ಮ ಅಂಗೈಗಳಿಗೆ 'ಮೆಹಂದಿ' ಹಚ್ಚಿಕೊಳ್ಳುತ್ತಾರೆ; ತಮ್ಮ ಸೊಸೆಯಂದಿರು ಕೊಡುವ ಒಡವೆಗಳನ್ನು ತೊಡುತ್ತಾರೆ ಮತ್ತು ಮನೆಗೆಲಸ ಬಿಟ್ಟು ಹೊತ್ತುಗಳೆಯುತ್ತಾರೆ. ಹಾಡು ಮತ್ತು ಕುಣಿತ ಹಬ್ಬದ ಸಾರವತ್ತಾದ ಭಾಗ.

ಹೋಳಿಯಾದ ಏಳು ದಿನಗಳ ಬಳಿಕ ಬರುವ ಗದಾಲಿಯ ಹಬ್ಬ ಕೂಡ ಗಂಗೌರ್ ಸಾಹಚರ್ಯ ಪಡೆದಿದೆ. ಹಬ್ಬದ ಉಗಮ 1491ರ ಒಂದು ಘಟನೆಯಲ್ಲಿ ಕಂಡುಬರುತ್ತದೆ; ಆಗ, ಅಜ್ಮೀರದ ಸುಬೇದಾರ ಮಲ್ಲೂಖಾನ್ ಮರ್ವಾರದ ಪೈಪರ್

ಎಂಬ ನಗರದ ಮೇಲೆ ದಾಳಿ ಮಾಡಿ, ಗಂಗೌರ್ ಆಚರಿಸುತ್ತಿದ್ದ 140 ಮಂದಿ ಕನ್ಯೆಯರನ್ನು ಅಪಹರಿಸಿದ. ಆದರೆ ದಾಳಿಕಾರನನ್ನು ಜೋಧ್‌ಪುರದ ರಾವ್ ಸಂತಾಲ್ ಅಥವಾ ರಾವ್ ಸೂರಜ್‌ಮಲ್ ಸೋಲಿಸಿ, ಹುಡುಗಿಯರನ್ನು ಕಾಪಾಡಿದ. ಸ್ವಾತಂತ್ರ್ಯ ಬಂದ ನಂತರ ಗಂಗೌರ್ ಹಬ್ಬ ಬಹಳಷ್ಟು ಬಣ್ಣ ಕಳೆದು ಕೊಂಡಿದೆ; ಆದರೂ ಈಗಲೂ ಬಹಳ ಜನಪ್ರಿಯವಾಗಿದೆ.

ತೀಜ್‌ದಂತೆ ಗಂಗೌರ್ ಕೂಡ ಜೈಪುರದಲ್ಲಿ ಎರಡು ದಿನಗಳ ಹಬ್ಬ. ಆದರೆ ಆ ಸಂದರ್ಭದಲ್ಲಿ ದೋಣಿಗಳ ಅತ್ಯಂತ ವರ್ಣರಂಜಿತ ಮೆರವಣಿಗೆಯನ್ನು ಪಿಚ್ಚೋಲ ಸರೋವರದ ಮೇಲೆ ಒಯ್ಯುವುದು ಸರೋವರಗಳ ನಗರವಾದ ಉದಯಪುರದಲ್ಲಿ.

ಹರಿಯಾಲಿ ಅಮಾವಾಸ್ಯೆ ಮತ್ತು ಬಸಂತ್ ಪಂಚಮಿ ರಾಜಾಸ್ಥಾನದ ಇತರ ಋತು ಜಾತ್ರೆಗಳಲ್ಲಿ ಸೇರಿವೆ. ಅವು ಅನೇಕ ಸ್ಥಳಗಳಲ್ಲಿ ನಡೆಯುತ್ತವೆ.

### *ಹಬ್ಬದ ಚಕ್ರ*

ಪ್ರಮುಖ ಹಬ್ಬಗಳ ಮಾಹೆಯಾನ ದಿನಸೂಚಿಯನ್ನು ಅನುಬಂಧವಾಗಿ ಕೊಡುವುದರ ಮೂಲಕ ರಾಜಾಸ್ಥಾನದ ಜಾತ್ರೆಗಳ ಮತ್ತು ಹಬ್ಬಗಳ ಈ ವಿವರಣೆಯನ್ನು ಸಮಾಪ್ತಿಗೊಳಿಸುವುದು ಸೂಕ್ತ.

| ಇಂಗ್ಲಿಷ್ ಕ್ಯಾಲೆಂಡರ್ ತಿಂಗಳು | ಭಾರತೀಯ ಮಾಸ | ಹಬ್ಬಗಳು |
|---|---|---|
| ಜನವರಿ | ಮಾಘ | 1. ಮಕರಸಂಕ್ರಾಂತಿ |
| ಫೆಬ್ರವರಿ | | 2. ಬಸಂತ್ ಪಂಚಮಿ |
| | | 3. ಶಿವರಾತ್ರಿ |
| | | 4. ಚೌತ್ |
| | | 5. ಸುರಜ್ ಸಪ್ತಮಿ |
| ಫೆಬ್ರವರಿ | ಫಗುನ್ | 1. ಹೋಳಿ |
| ಮಾರ್ಚ್ | ಚೈತ್ರ | 2. ಧುಲಂದಿ |
| | | 3. ಗಂಗೌರ್ |
| | | 4. ಶೀತ್ಲ–ಅಷ್ಟಮಿ |
| | | 5. ಘುಡ್ಲ |
| | | 6. ನವರಾತ್ರ |
| | | 7. ಹನುಮಾನ್ ಜಯಂತಿ |
| ಏಪ್ರಿಲ್ | ಬೈಶಾಖ್ | 1. ಅಖ ತೀಜ್ |
| ಮೇ | ಜೇಠ್ | 1. ನಿರ್ಜಲ ಏಕಾದಶಿ |
| ಜೂನ್ | | 2. ಗಂಗಾದಶ್ಮಿ ಅಥವಾ ದಸ್ಸೆರಾ |

| | | |
|---|---|---|
| | | 3. ಬತ್ ಸಾವಿತ್ರಿ |
| ಜೂನ್ | ಆಷಾಡ್ | 1. ರಥ್ ಯಾತ್ರಾ |
| ಜುಲೈ | | 2. ಗುರು ಪೂರ್ಣಿಮ |
| ಜುಲೈ | ಶ್ರಾವಣ್ | 1. ರಕ್ಷಾಬಂಧನ್ |
| ಆಗಸ್ಟ್ | | 2. ತೀಜ್ (ಚೋಟಿ) |
| | | 3. ನಾಗ್ ಪಂಚಮಿ |
| ಆಗಸ್ಟ್ | ಭದೋನ್ | 1. ಜನ್ಮಾಷ್ಟಮಿ |
| ಸೆಪ್ಟೆಂಬರ್ | | 2. ಅನಂತ್ ಚತುರ್ದಶಿ |
| | | 3. ಗಣೇಶ್ ಚತುರ್ಥಿ |
| | | 4. ತೀಜ್ (ಬಾರಿ) |
| | | 5. ಗೋಗಾ ನವಮಿ |
| | | 6. ರಿಷಿ ಪಂಚಮಿ |
| ಸೆಪ್ಟೆಂಬರ್ | ಆಸೋಜ್ | 1. ಶ್ರಾದ್ಧ ಪಿತೃ–ಪಕ್ಷ |
| ಅಕ್ಟೋಬರ್ | | 2. ದಸ್ಸೆರ |
| | | 3. ನವರಾತ್ರಿ |
| | | 4. ಶರದ್ ಪೂರ್ಣಿಮ |
| | | 5. ಧನ್ ತೆರಸ್ |
| ಅಕ್ಟೋಬರ್ | ಕಾರ್ತಿಕ್ | 1. ದಿವಾಲಿ |
| | | 2. ಭಯ್ಯಾ ದೂಜ್ |
| | | 3. ಥಿಯೋಥನಿ ಏಕಾದಶಿ |
| | | 4. ಗೋಪಾಷ್ಟಮಿ |
| | | 5. ಗೋವರ್ಧನ್ |
| | | 7. ಕರ್ವ ಚೌತ್ |
| ನವಂಬರ್ | ಮಾಂಗ್‌ಸಿರ್ | 1. ಗೀತಾ ಜಯಂತಿ |
| ಡಿಸೆಂಬರ್ | ಪೌಸ್ | 1. ಮಾಲ್ |

# ರಾಜಾಸ್ಥಾನೀ ಭಾಷೆ, ಉಪಭಾಷೆಗಳು ಮತ್ತು ಸಾಹಿತ್ಯ

ರಾಜಾಸ್ಥಾನದಲ್ಲಿ ಮಾತನಾಡುವ ಉಪಭಾಷೆಗಳ ವರ್ಗಕ್ಕೆ ನೀಡಲಾಗಿರುವ ಹೆಸರೇ ರಾಜಾಸ್ಥಾನಿ. ಇದರ ಭಾಷಾಶಾಸ್ತ್ರೀಯ ಮೇರೆಗಳನ್ನು ಗ್ರಿಯರಸನ್ ಈ ರೀತಿ ಗುರುತಿಸಿರುವರು: "ರಾಜಾಸ್ಥಾನೀ (ದಕ್ಷಿಣದಿಂದ ಉತ್ತರಕ್ಕೆ ಸಾಗಿದಂತೆ) ಪೂರ್ವ ಭಾಗದಲ್ಲಿ ಪಶ್ಚಿಮ ಹಿಂದಿಯ ವ್ರಜಭಾಷೆ ಹಾಗೂ ಬುಂದೇಲಿ ಉಪಭಾಷೆಗಳಿಂದ ಸುತ್ತುವರಿದಿದೆ; ಅದರ ದಕ್ಷಿಣ ಭಾಗದಲ್ಲಿ (ಪೂರ್ವದಿಂದ ಪಶ್ಚಿಮಕ್ಕೆ) ಬುಂದೇಲಿ, ಮರಾಠಿ, ಭಿಲಿ, ಖಾಂದೇಶಿ ಹಾಗೂ ಗುಜರಾತಿಗಳಿವೆ. ಭಿಲಿಯನ್ನು ರಾಜಾಸ್ಥಾನದ ಮಧ್ಯಭಾಗದಲ್ಲಿನ ಎರಡು ಪರ್ವತ ಪ್ರದೇಶಗಳಲ್ಲಿ (ವಿಂಧ್ಯ ಬೆಟ್ಟಗಳು ಹಾಗೂ ಅರಾವಳಿ ಬೆಟ್ಟಗಳು) ಕೂಡ ಮಾತನಾಡುವರು. ಅದರ ಪಶ್ಚಿಮಕ್ಕೆ (ದಕ್ಷಿಣದಿಂದ ಉತ್ತರಕ್ಕೆ) ಸಿಂಧಿ ಮತ್ತು ಲಬಂಡಗಳಿವೆ; ಅದರ ಉತ್ತರಕ್ಕೆ (ಪಶ್ಚಿಮದಿಂದ ಪೂರ್ವದತ್ತ) ಲಬಂಡ, ಪಂಜಾಬಿ ಹಾಗೂ ಪಶ್ಚಿಮ ಹಿಂದಿಯ ಬಗ್ರಿ ಉಪಭಾಷೆಯಿದೆ. ಇವುಗಳ ಪೈಕಿ ಮರಾಠಿ, ಸಿಂಧಿ ಮತ್ತು ಲಬಂಡ ಇಂಡೋ–ಆರ್ಯನ್ ಭಾಷೆಯ ಹೊರವಲಯಕ್ಕೆ ಸೇರಿವೆ."

**ಮಾರವಾರಿ**

ರಾಜಾಸ್ಥಾನಿಯನ್ನು ನಾಲ್ಕು ದೊಡ್ಡ ವರ್ಗಗಳಾಗಿ ವಿಭಾಗಿಸಲಾಗಿದೆ. ಇವುಗಳ ಪೈಕಿ ಅತ್ಯಂತ ದೊಡ್ಡದು ಮಾರವಾರಿ. ಶಿಷ್ಟ ಮಾರ್ವಾರಿಯನ್ನು ಪ್ರಧಾನವಾಗಿ ಜೋಧ್‌ಪುರ ಜಿಲ್ಲೆಯಲ್ಲಿ ಹಾಗೂ ಅದರ ಸುತ್ತಮುತ್ತ ಮಾತನಾಡುವರು ಹಾಗೂ ಇದು ಬಾರ್ಮರ್, ಜಾಲೋರ್, ಪಲಿ ಹಾಗೂ ನಾಗೌರ್‌ಜಿಲ್ಲೆಯ ಭಾಗ–ಇವೆಲ್ಲವೂ ಹಿಂದಿನ ಜೋಧ್‌ಪುರ ರಾಜ್ಯವಾಗಿತ್ತು–ಉಪಭಾಷೆಗಳ ಮೇಲೆ ಸ್ವಲ್ಪ ಮಟ್ಟಿನ ಪ್ರಭಾವ ಪಡೆದಿದೆ.

ಈ ಉಪಭಾಷೆಯನ್ನು ಹೆಚ್ಚು ಕಡಮೆ ಸಂಮಿಶ್ರರೂಪದಲ್ಲಿ ಪೂರ್ವದಲ್ಲಿ–ಅಜ್ಮೀರ, ಉದಯಪುರ, ಭಿಲ್ವಾರ ಹಾಗೂ ಚಿತ್ತೋರಗರ್ ಜಿಲ್ಲೆಗಳಲ್ಲಿ–ದಕ್ಷಿಣದಲ್ಲಿ ಸಿರೋಹಿ ಜಿಲ್ಲೆ ಹಾಗೂ ಉತ್ತರದಲ್ಲಿ ಬಿಕನೀರ್, ಚುರು, ಶಿಖರ್ ಹಾಗೂ ಝುಂಝುನು ಜಿಲ್ಲೆಗಳಲ್ಲಿ ಮಾತನಾಡುತ್ತಾರೆ. ಸ್ವಲ್ಪ ಮಟ್ಟಿಗೆ ಪಂಜಾಬೀ ಪ್ರಭಾವ ದೊಡನೆ ವಾಯುವ್ಯದಲ್ಲಿ ಗಂಗಾನಗರ ಜಿಲ್ಲೆಯಲ್ಲಿಯೂ ಮಾತನಾಡುವರು.

ಆಗ್ನೇಯದಲ್ಲಿ ಮೇವಾರದಲ್ಲಿ (ಉದಯಪುರ, ಭಿಲ್ವಾರ ಹಾಗೂ ಚಿತ್ತೂರ್‌ಗರ್ ಜಿಲ್ಲೆಗಳು) ಹಾಗೂ ಆದರ ನೆರೆಹೊರೆಯಲ್ಲಿ ಮೇವಾರಿ ಎಂದು ಪರಿಚಿತವಾಗಿರುವ ಸುವಿಖ್ಯಾತ ಮಾರ್ವಾರಿಯ ಪೂರ್ವರೂಪವೂ ಇದೆ. ಪಾಲಿ ಹಾಗೂ ಜಾಲೋರ್ ಜಿಲ್ಲೆಗಳ ದಕ್ಷಿಣ ಭಾಗದಲ್ಲಿ, ಇಡೀ ಶಿರೋಹಿಜಿಲ್ಲೆ ಹಾಗೂ ಪಾಲನಪುರದ ಉತ್ತರ ಭಾಗದಲ್ಲಿ ದಕ್ಷಿಣ ಉಪಭಾಷೆಯಿದೆ. ಬಾರ್ಮರ್ ಹಾಗೂ ಜೈಸಾಲ್ಮೆರ್‌ನ ಪಶ್ಚಿಮ ಭಾಗಗಳಲ್ಲಿ ಹಾಗೂ ಸಿಂಧ್‌ನ ಥಾರ್ ಮತ್ತು ಪಾರ್ಕರ್ ಪ್ರದೇಶಗಳಲ್ಲಿ ಸಿಂಧಿಯ ಪ್ರಭಾವ ಸ್ಪಷ್ಟವಾಗಿದೆ. ಈ ಪ್ರದೇಶಗಳಲ್ಲಿ ಮಾತನಾಡುವ ಉಪಭಾಷೆಯನ್ನು ಉತ್ತರದಲ್ಲಿ ಥಾಲಿ ಎಂದೂ ಪಶ್ಚಿಮದಲ್ಲಿ ಧಾತಕ್ ಎಂದೂ ಕರೆಯಲಾಗುವುದು.

ಮಾರ್ವಾರಿಯ ಉತ್ತರದ ರೂಪಗಳು ಬಿಕನೀರ್, ಚುರು, ಗಂಗಾನಗರ, ಶಿಖರ್ ಹಾಗೂ ಝುಂಝುನು ಜಿಲ್ಲೆಗಳಲ್ಲಿ ವ್ಯಾಪಿಸಿವೆ. ಬಿಕನೀರ್‌ನಲ್ಲಿ ಇದನ್ನು ಬಿಕನೇರಿ ಎಂದು ಕರೆದರೆ, ಚುರುವಿನ ಈಶಾನ್ಯಭಾಗದಲ್ಲಿ ಬಗ್ರೀ ಎಂದು ಕರೆಯಲಾಗುವುದು.

## ಧುಂಧರಿ

ಪೂರ್ವ ರಾಜಾಸ್ಥಾನೀ ಅಥವಾ ಜೈಪುರಿಯಿಂದ ರಾಜಾಸ್ಥಾನಿಯ ಎರಡನೆಯ ದೊಡ್ಡ ಗುಂಪು ಆಗಿದೆ. ಇದು ಧುಂಧರಿ ಎಂದೇ ಪ್ರಖ್ಯಾತವಾಗಿದೆ. ಜೈಪುರ, ಟೊಂಕ್, ಕೋಟ ಮತ್ತು ಬುಂಡೀ ಜಿಲ್ಲೆಗಳು ಮತ್ತು ಕಿಷನ್‌ಗರ್, ಅಜ್ಮೀರ ಹಾಗೂ ಝಲಾವರ್‌ನ ಭಾಗಗಳಲ್ಲಿ ಇದು ವ್ಯಾಪಿಸಿದೆ. ಈಶಾನ್ಯದಲ್ಲಿ ಪೂರ್ವ ರಾಜಾಸ್ಥಾನಿಯಲ್ಲಿ ಇದೇ ಭಾಷೆಯ ಮೇವಾಟಿ ಉಪಭಾಷೆಯಿರುವುದಾದರೆ, ಮತ್ತೂ ಪೂರ್ವದಲ್ಲಿ ಉತ್ತರದಿಂದ ದಕ್ಷಿಣಕ್ಕೆ ಭರತಪುರದಲ್ಲಿ ಬ್ರಜಭಾಷೆಯೂ ಸವಾಯಿ ಮಾಧವಪುರ ಹಾಗೂ ಕರೌಲಿಯಲ್ಲಿ, ಜಲಾವರ್‌ನಲ್ಲಿ ಬುಂದೇಲಿ ಹಾಗೂ ಮಾಳ್ವಿಯಲ್ಲಿ, ಹಾಗೂ ಕೋಟಾದ ದಕ್ಷಿಣ ಭಾಗಗಳಲ್ಲಿ ಬ್ರಜಭಾಷೆಯ ಡಾಂಗ್ ಉಪ–ಉಪ ಭಾಷೆಯೂ ಇವೆ.

ಹಾಗಾಗಿ, ಪೂರ್ವದ ಗಡಿಯ ಒಂದು ಭಾಗವನ್ನುಳಿದು ರಾಜಾಸ್ಥಾನದಲ್ಲಿ ರಾಜಾಸ್ಥಾನೀ ಉಪಭಾಷೆಗಳೇ ಸಂಪೂರ್ಣವಾಗಿ ವ್ಯಾಪಿಸಿವೆ ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಹಿಂದಿನ ಜಯಪುರ ರಾಜ್ಯದಲ್ಲಿ 1898ರಲ್ಲಿ ನಡೆಸಲಾದ ವಿಶೇಷ ಭಾಷಾತ್ಮಕ ಸರ್ವೇಕ್ಷಣೆಯ ಪ್ರಕಾರ ರಾಜ್ಯದಲ್ಲಿ ಹದಿಮೂರು ಭಿನ್ನಭಿನ್ನ ಭಾಷಾ ಪ್ರಭೇದಗಳು ಅಸ್ತಿತ್ವದಲ್ಲಿದ್ದುವು; ಮಧ್ಯದಲ್ಲಿ ಶಿಷ್ಟ ಜೈಪುರಿ, ಉತ್ತರದಲ್ಲಿ ತೋರವಾಟಿ, ನೈರುತ್ಯದಲ್ಲಿ ಕಾಥೈರ ಹಾಗೂ ಚೌರಾಸಿ, ಆಗ್ನೇಯದಲ್ಲಿ ನಾಗಾಚಲ ಹಾಗೂ ರಾಜವತಿ.

## ಹರೌಟಿ

ಕಿಷನ್‌ಗರ್ ಉಪವಿಭಾಗದಲ್ಲಿ ಪೂರ್ತಿಯಾಗಿ ಹಾಗೂ ಅಜ್ಮೀರದ ಉತ್ತರಕ್ಕೆ ಸಣ್ಣ ಪ್ರದೇಶದಲ್ಲಿ ಕಿಷನ್‌ಗರಿಯನ್ನು ಮತ್ತು ಅಜ್ಮೀರದ ಪೂರ್ವಪ್ರದೇಶದಲ್ಲಿ

ಅಜ್ಮೇರಿಯನ್ನು ಮಾತನಾಡುವರು. ಬುಂಡಿ ಮತ್ತು ಕೋಟಗಳ ಉಪಭಾಷೆಯೇ ಹರೌಟಿ. ಇದನ್ನು ಜಲಾವರ್ ಹಾಗೂ ಟೊಂಕ್ ಜಿಲ್ಲೆಗಳ ನೆರೆಹೊರೆಯ ಪ್ರದೇಶಗಳಲ್ಲಿ ಮತ್ತು ಮಧ್ಯಪ್ರದೇಶದ ಗ್ವಾಲಿಯರ್ ಜಿಲ್ಲೆಗಳಲ್ಲಿ ಮಾತನಾಡುವರು. ಗ್ವಾಲಿಯರ್ ಜಿಲ್ಲೆಯ ಭಾಗದಲ್ಲಿ ಇದು ಶಿಯೊಪುರಿ ಎಂದು ಪ್ರಸಿದ್ಧವಾಗಿದೆ.

ಮೇವಾಟಿಯು ಮೇಯೊಗಳ ನಾಡಾದ ಮೇವಾಟದ ಭಾಷೆಯಾದರೂ ಅದು ಭರತಪುರ ಹಾಗೂ ಆಳ್ವಾರ ಜಿಲ್ಲೆಗಳ ವಾಯುವ್ಯದಲ್ಲಿ ವ್ಯಾಪಿಸಿರುವುದಕ್ಕಿಂತ ವಿಶಾಲ ಪ್ರದೇಶದಲ್ಲಿ ವ್ಯಾಪಿಸಿದೆ. ಇದನ್ನು ಹರಿಯಾಣದ ಗುರಗಾಂವ್ ಜಿಲ್ಲೆಯ ಆಗ್ನೇಯದಲ್ಲಿ ಹಾಗೂ ಜಯಪುರದ ಕೋಟ-ಕಾಸಿಂಗಳಲ್ಲಿಯೂ ಮಾತನಾಡುವರು. ಇದು ಹಿಂದಿಯ ಬಾಂಗ್ರು ಉಪಭಾಷೆಗೆ ಸರಿಯುವಂಥ ರಾಜಾಸ್ಥಾನಿಯನ್ನು ಪ್ರತಿನಿಧಿಸುತ್ತದೆ.

## ಮಾಲ್ವಿ

ಮಾಲ್ವಿಯನ್ನು ಮಾಳ್ವ ಪ್ರಾಂತದಲ್ಲಿ-ಎಂದರೆ ಇಂಡೋರ್, ಭೂಪಾಲ್, ಮಾಂಡಸರ್ ಹಾಗೂ ಉಜ್ಜಯಿನಿ ಪ್ರದೇಶದಲ್ಲಿ-ಮಾತನಾಡುವರು. ಪೂರ್ವ ದಿಕ್ಕಿನಲ್ಲಿ ಅದು ಜಲಾವರ್ ಹಾಗೂ ಕೋಟ ಜಿಲ್ಲೆಗಳ ಭಾಗಗಳಿಗೂ ವ್ಯಾಪಿಸಿದೆ. ಉತ್ತರದಲ್ಲಿ ಮಾಲ್ವಿಯು ರಾಜಾಸ್ಥಾನಿಯ (-ಇದಕ್ಕೆ ಜಯಪುರಿಯನ್ನು ಶಿಷ್ಟ ಭಾಷೆಯೆಂದು ಪರಿಗಣಿಸಲಾಗಿದೆ) ಪೂರ್ವ-ಮಧ್ಯ ಉಪಭಾಷೆಯನ್ನು ಪಡೆದಿದೆ; ಪೂರ್ವಕ್ಕೆ ಗ್ವಾಲಿಯರ್ ಮತ್ತು ಸಾಗರಗಳಲ್ಲಿ ಮಾತನಾಡುವ ಪಶ್ಚಿಮ ಹಿಂದಿಯ ಬುಂದೇಲಿ ಉಪಭಾಷೆ ಇದೆ. ದಕ್ಷಿಣ ದಿಕ್ಕಿನಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ನರಸಿಂಗಪುರ ಮತ್ತು ಮಧ್ಯ ಹೊಷಂಗಾಬಾದಿನ ಬುಂದೇಲಿ, ಬಿರಾರಿನ ಮರಾಠಿ ಹಾಗೂ ಉತ್ತರ ನಿಮಚ್ ಹಾಗೂ ಬನ್ಸವಾರಗಳಲ್ಲಿ ಮಾತನಾಡುವಂಥ ರಾಜಾಸ್ಥಾನಿಯ ನೇಮಡಿ ಉಪಭಾಷೆಗಳಿವೆ. ವಾಯುವ್ಯಕ್ಕೆ ಮಾರ್ವಾರಿಯ ಮೇವಾರಿ ರೂಪ ಹಾಗೂ ಗುಜರಾತಿಯಿದೆ; ದಕ್ಷಿಣದಲ್ಲಿ ಖಾಂದೇಶಿಯಿದೆ. ಮಾಲ್ವಿಯು ಮಾರ್ವಾರಿ ಮತ್ತು ಜೈಪುರಿ (ಧುಂಧರಿ) ಗಳೊಡನೆ ಸಂಬಂಧಗಳನ್ನು ಪಡೆದಿರುವಂಥ ವಿಶಿಷ್ಟವಾದ ರಾಜಾಸ್ಥಾನೀ ಉಪಭಾಷೆಯಾಗಿದೆ.

ಗ್ರಿಯರ್‌ಸನ್‌ರ ಪ್ರಕಾರ ಭಿಲ್ಲರಿಗೆ ಪ್ರತ್ಯೇಕ ಉಪಭಾಷೆ-ಭಿಲಿ-ಇದೆ. ಇದನ್ನು ಉದಯಪುರ ಜಿಲ್ಲೆಯಲ್ಲಿ ಆರಾವಳಿಯ ಶ್ರೇಣಿಯಲ್ಲಿ ಮೇರ್ವಾರದ ದಕ್ಷಿಣ, ಮತ್ತೂ ದಕ್ಷಿಣಕ್ಕೆ ದುಂಗಾರಪುರ ಹಾಗೂ ಬನ್ವಾರ ಜಿಲ್ಲೆಗಳಲ್ಲಿ, ಹಾಗೂ ಗುಜರಾತ್ ಮತ್ತು ಮಧ್ಯಪ್ರದೇಶದವರೆಗೂ ಮಾತನಾಡುವರು. ದುಂಗಾರಪುರದ ಬನ್ಸಾರ ಉಪಭಾಷೆಯು ರಾಜಾಸ್ಥಾನಿಯ ಬಗ್ರಿಯದ ರೂಪವೆಂಬುದು ಮೋತಿಲಾಲ ಮನೇರಿಯರವರ ಅಭಿಪ್ರಾಯವಾಗಿದೆ. ಭಿಲ್ಲರು ಇದನ್ನೆ ಅಲ್ಪ ಸ್ವಲ್ಪ ವ್ಯತ್ಯಯಗಳೊಡನೆ ಆಡುವರು. ಏಕಮಾತ್ರ ವ್ಯತ್ಯಾಸವೆಂದರೆ ಉಚ್ಚಾರಣೆಯೇ; ಆದರೆ ಭಾಷೆಯ ರಚನೆಯು ಒಂದೇ ಆಗಿದೆ.

ಮಾರ್ವಾರಿ ಹಾಗೂ ಧುಂಧರಿಗಳು ರಾಜಾಸ್ಥಾನದಲ್ಲಿಯೇ ಸ್ಥಳೀಯ

ಉಪಭಾಷೆಗಳ ದೊಡ್ಡ ಗುಂಪುಗಳಾಗಿವೆಯಾದರೂ ಮಾಳ್ವಿಯ ಮೂಲ ಸ್ಥಾನ ಹೊರಗಡೆಯದು ಎಂಬುದನ್ನು ಗಮನಿಸಬೇಕು. ಬಗ್ರೀ ಮತ್ತು ಮೇವಾಟ–ಇವು ರಾಜ್ಯದಲ್ಲಿಯೇ ಸಣ್ಣ ಗುಂಪುಗಳಾಗಿವೆ. ಈ ಗುಂಪುಗಳಲ್ಲಿ ಪ್ರತಿಯೊಂದರಲ್ಲೂ ಹಲವಾರು ಉಪಉಪಭಾಷೆಗಳಿದ್ದು, ಅವಕ್ಕೆ ಹಲವು ಸ್ಥಳೀಯ ಹೆಸರುಗಳಿರುವ ಕಾರಣ ಅವೆಲ್ಲವುಗಳ ವಿವರವಾದ ಚರ್ಚೆ ಇಲ್ಲಿ ಸಾಧ್ಯವಿಲ್ಲ. ಈ ಉಪಭಾಷೆಗಳು ತಮ್ಮ ತಮ್ಮ ಹೊರವಲಯಗಳಲ್ಲಿ ಬ್ರಜ, ಲಬಂಡ, ಸಿಂಧಿ, ಬುಂದೇಲಿ, ಬಂಗ್ರು, ಗುಜರಾತಿ ಮತ್ತ ಪಂಜಾಬಿಯ ಅಥವಾ ಪಕ್ಕದ ಪ್ರದೇಶಗಳ ಅವುಗಳ ಉಪಭಾಷೆಗಳಿಂದ ಗಮನಾರ್ಹವಾಗಿ ಪ್ರಭಾವಿತವಾಗಿವೆ.

ಈ ಮುಂದಿನ ಪುಟದಲ್ಲಿ ನೀಡಿರುವ ಸಾರಣಿಯು ಈ ಚಿತ್ರವನ್ನು ಮತ್ತಷ್ಟು ವಿಶದಪಡಿಸುವಲ್ಲಿ ನೆರವಾಗಬಹುದು.

## ರಾಜಾಸ್ಥಾನಿಯ ವ್ಯತ್ಯಯಗಳು

| ಮಾರ್ವಾರಿ | ಮೇವಾರಿ | ಬಗ್ರೀ | ಧುಂಧರಿ | ಮೇವಾಟಿ | ಮಾಳ್ವಿ |
|---|---|---|---|---|---|
| 1. ಜೋಧ್‌ಪುರ ಕೇಂದ್ರ | 13. ಉದಯ ಪುರ | 17. ದುಂಗಾ ರ್ಪುರ | 19. ಜೈಪುರ ಕೇಂದ್ರ | 25. ಆಳ್ವಾರ್ | 29. ಚಿತ್ತೋರ್ ಘರ್ |
| 2-4 ಪಾಲಿ ಸಿರೋಹಿ, ಮತ್ತು ಗುಜರಾತಿ ಪ್ರಭಾವದೊಡನೆ ಜಾಲೋರಿನ ಭಾಗ | 14. ಚಿತ್ತೋರ್ ಘರ್ | 18. ಬನ್‌ಸ್ವಾರ (ಗುಜರಾತಿ ಪ್ರಭಾವ ಸಹಿತ) | 20. ಟೋಂಕ್ | 26. ಭರತ ಪುರ | 30. ಜಲ ವಾರ |
| 5. ನಗೌರ್ (ಶೇಖಾವತಿಯ ಪ್ರಭಾವದೊಡನೆ ಭಾಗ) | 15. ಭಿಲ್ವಾರ | | 21. ಬುಂಡಿ | 27. ಕರೌಲಿ | |
| 6. ಬಾರ್ಮರ್ (ಸಿಂಧಿ ಪ್ರಭಾವದೊಡನೆ ಭಾಗ) | 16. ಅಜ್ಮೀರ | | 22. ಕೋಟ | | |
| 7. ಜೈಸಾಲ್ಮೆರ್ (ಗಡಿಯಲ್ಲಿ ಸಿಂಧೀ ಪ್ರಭಾವದೊಡನೆ ಥಾಲಿ) | | | 23. ಜಲಾ ವರ್‌ನ ಭಾಗ | | |

| | | |
|---|---|---|
| 8. ಬಿಕನೇರ್ (ಬಿಕನೇರಿ) | 24.ಸವಾಯಿ ಮಾಧವ ಪುರ ಡಂಗ್ | 28. ಧೋಲ್ಪುರ (ಮೇಲಿನ ಪ್ರದೇಶಗಳಲ್ಲೆಲ್ಲ ಉತ್ತರದಲ್ಲಿ ಬಂಗಾಲೀ ಪ್ರಭಾವ ಹಾಗೂ ಉಳಿದೆಡೆಗಳಲ್ಲಿ ಬ್ರಜ ಭಾಷೆಯ ಪ್ರಭಾವ) |
| 9. ಗಂಗಾನಗರ (ಪಂಜಾಬಿ ಮತ್ತು ಹರಿಯಾಣ್ವಿ ಪ್ರಭಾವಸಹಿತವಾದ ಭಾಗ) | | |
| 10. ಚುರು (ಹರ್ಯಾಣ್ವಿ ಪ್ರಭಾವ ಸಹಿತವಾದ ಭಾಗ) | | |
| 11. ಶಿಖರ್ | | |
| 12. ಝುಂಝುನು | | |

## ರಾಜಾಸ್ಥಾನಿ ಸಾಹಿತ್ಯ

ಹಲವಾರು ಉಪಭಾಷೆಗಳೊಡನೆ ರಾಜಾಸ್ಥಾನಿ ಭಾಷೆಯು ರಾಜಾಸ್ಥಾನೀ ಸಾಹಿತ್ಯದ ವಾಹಕವಾಗಿದೆ. ಈ ಸಾಹಿತ್ಯದ ಹೆಚ್ಚಿನ ಭಾಗವು ಮಾರ್ವಾರಿಯ ಮೂಲಕ ಅಭಿವ್ಯಕ್ತಗೊಂಡಿದೆ. ರಾಜಾಸ್ಥಾನಿಯ ಮೊತ್ತಮೊದಲ ಕಾವ್ಯಕೃತಿಗಳು ರಾಜಾಸ್ಥಾನಿಯ ಮೂಲನೆಲೆಯಾದ ಪಶ್ಚಿಮ ಪ್ರಾಕೃತ ಅಥವಾ ಅಪಭ್ರಂಶದ ಕ್ಷೀಣತೆಯ ಅವಧಿಯಲ್ಲಿ ರಚನೆಗೊಂಡವು. ಆನಂತರದಲ್ಲಿ, ಹದಿನೈದನೆಯ ಶತಮಾನದ ಸುಮಾರಿನಲ್ಲಿ ಯಾವುದೇ ಪ್ರದೇಶದಲ್ಲಿ ಮಾತನಾಡದ ಒಂದು ಸಾಹಿತ್ಯಿಕ ಭಾಷೆ ಕಾವ್ಯಾಭಿವ್ಯಕ್ತಿಗಾಗಿ ರೂಪುಗೊಂಡಿತು. ಇದೇ ದಿಂಗಲ್. ಬ್ರಜಭಾಷೆಯ ರಾಜಾಸ್ಥಾನೀ ವ್ಯತ್ಯಯವಾದ ಪಿಂಗಲ್ ಎಂಬ, ಕಾವ್ಯಾತ್ಮಕ ಅಭಿವ್ಯಕ್ತಿಯ ಮತ್ತೊಂದು ಮಾಧ್ಯಮದಿಂದ ಪ್ರತ್ಯೇಕಿಸುವ ಸಲುವಾಗಿ ಈ ರೀತಿ ಕರೆಯಲಾಯಿತು. ಪಿಂಗಲ್ ಮತ್ತು ದಿಂಗಲ್–ಇವೆರಡನ್ನೂ ರಾಜಾಸ್ಥಾನದ ಚಾರಣರು ಹಾಗೂ ಇತರ ಲೇಖಕರು ಕಳೆದ ಐದು ಶತಮಾನಗಳಿಂದ ವ್ಯಾಪಕವಾಗಿ ಬಳಸುತ್ತಿರುವರು.

ಯೋಧರ ಸಾಹಸ–ವೀರ ಕೃತ್ಯಗಳ ವೃತ್ತಾಂತಗಳು ಹಾಗೂ ಲಾವಣಿಗಳ ರಚನೆಯಲ್ಲಿ ದಿಂಗಲ್‌ಅನ್ನು–ಅದರಲ್ಲಿಯೂ ವಿಶೇಷವಾಗಿ ಮಾರವಾರ ಹಾಗೂ

ಮೇವಾರಗಳಲ್ಲಿ ಹೆಚ್ಚಾಗಿ ಬಳಸಲಾಗಿದೆಯಾದರೆ, ಪಿಂಗಲವನ್ನು ಭಕ್ತಿ ಹಾಗೂ ಶೃಂಗಾರ ಕಾವ್ಯರಚನೆಗಾಗಿ ವ್ಯಾಪಕವಾಗಿ ಬಳಸಲಾಗಿದೆ. ಆದಾಗ್ಯೂ ಇದನ್ನು ಅಷ್ಟೇನೂ ಕಟ್ಟುನಿಟ್ಟಾಗಿ ಪರಿಗಣಿಸಿಲ್ಲ. ಪಿಂಗಲ ವೀರಕಾವ್ಯದ ಮಾಧ್ಯಮ ವಾಗಿದೆಯಾದರೆ, ದಿಂಗಲವನ್ನು ಶೃಂಗಾರ ಹಾಗೂ ಭಕ್ತಿ ಕಾವ್ಯಗಳಲ್ಲಿಯೂ ಅಷ್ಟೇ ವ್ಯಾಪಕವಾಗಿ ಬಳಸಲಾಗಿದೆ.

ರಾಜಾಸ್ಥಾನೀ ಸಾಹಿತ್ಯ ಒಂಬತ್ತನೇ ಶತಮಾನದಷ್ಟು ಪ್ರಾಚೀನವಾದುದು. ಆಗ ದಲ್ಪತ್ ವಿಜಯನು *ಖುಮನ್ ರಾಸೋ*ವನ್ನು ರಚಿಸಿದನೆಂದು ಹೇಳಲಾಗಿದೆ. ಇದು ಖಲೀಫ ಅಲ್ಮಮುನ್‌ನ ವಿರುದ್ಧ ಮೇವಾರದ ಖುಮನ್‌ನ ಕಲಿತನವನ್ನು ವಿವರಿಸುವ ಕೃತಿ. ಜೈನ ಸಂನ್ಯಾಸಿ ವಜ್ರಸೇನಸೂರಿ ವಿರಚಿತ *ಭರತೇಶ್ವರ ಬಾಹುಬಲಿ ರಾಜ* ಎಂಬುದು ರಾಜಾಸ್ಥಾನಿಯಲ್ಲಿ ಪ್ರಪ್ರಥಮ ಜ್ಞಾತಕೃತಿ ಎಂದು ಪರಿಗಣಿತ ವಾಗುವ ಸ್ಥಾನ ಪಡೆದಿದೆ. ಮೊದಲ ಯುಗದ ಕವಿಗಳ ಪೈಕಿ ಉಲ್ಲೇಖಾರ್ಹರೆಂದರೆ *ಬಿಸಲದಿದೇವ್ ರಾಸೋ*ದ ಕರ್ತೃ ನರ್ವತಿ ನಲ ಹಾಗೂ *ಪೃಥ್ವೀರಾಜ ರಾಸೋ*ದ ಕರ್ತೃ ಸುವಿಖ್ಯಾತ ಚಾಂದ್ ಬರ್ದಾಯಿ. ನಲನ ಭಾಷೆಯು ಜನಪ್ರಿಯ ಮಾರ್ವಾರಿಯಾಗಿದೆ. ಇದಕ್ಕೆ ಸಾಹಿತ್ಯಿಕ ಮಹತ್ತ್ವವೇನೂ ಅಷ್ಟಾಗಿಲ್ಲದಿದ್ದರೂ ಇದರ ಪ್ರಾಚೀನತೆಯಿಂದಾಗಿ ಐತಿಹಾಸಿಕವಾಗಿ ತುಂಬ ಪ್ರಮುಖವಾದುದಾಗಿದೆ. *ಪೃಥ್ವೀರಾಜ ರಾಸೋ*ದ ಕಾಲದ ಬಗ್ಗೆ ವಿದ್ವಾಂಸರಲ್ಲಿ ಸಾಕಷ್ಟು ವಾದವಿವಾದಗಳಿವೆ. ಪಿಂಗಲದಲ್ಲಿ ಈ ಕೃತಿ ಪ್ರಾಚೀನತಮ ಜ್ಞಾತಪಾಠವನ್ನು ಹದಿನೇಳನೇ ಶತಮಾನದಲ್ಲಷ್ಟೇ ನಕಲು ಮಾಡಲಾಯಿತು; ಆದರೆ ಈ ಪಾಠವನ್ನು ಹದಿನೆಂಟನೇ ಶತಮಾನದಲ್ಲಿ ಬರೆಯು ಲಾದ ಪಾಠದೊಡನೆ ಹೋಲಿಸಿದಲ್ಲಿ ಇದು ತುಂಬ ಚಿಕ್ಕದಾಗಿದೆ. ಮಹಾಕಲಿ ಪೃಥ್ವೀರಾಜ ಚೌಹಾನನ ಕಲಿತನವನ್ನು ವಿವರಿಸುವಂಥ ಯಾವುದೇ ಕೃತಿ ಅವನ ಜೀವಿತಾವಧಿಯಲ್ಲಿ ರಚಿತವಾಗಿರಬಹುದಾದುದರ ಪ್ರಾಮಾಣ್ಯದ ಬಗ್ಗೆ ಸಾಹಿತ್ಯದ ಹಾಗೂ ಇತಿಹಾಸದ ವಿದ್ವಾಂಸರು ಬಹುಮಟ್ಟಿಗೆ ಸಂದೇಹಗ್ರಸ್ತರಾಗಿರುವರು.

ಆದಾಗ್ಯೂ *ಪೃಥ್ವೀರಾಜ ರಾಸೋ* ತನ್ನ ವರ್ಣನೆಗಳ ವಿವರ, ವೈವಿಧ್ಯ ಹಾಗೂ ಪಾತ್ರ ರಚನೆಯ ಸತ್ತ್ವಪೂರ್ಣತೆಯಿಂದಾಗಿ ಗಮನಾರ್ಹವಾಗಿ ಕಾವ್ಯದ ಒಂದು ಪ್ರಧಾನ ಕೃತಿಯಾಗಿದೆ. ಅದಕ್ಕೆ ಮಹಾಕಾವ್ಯದ ಮಹತ್ತ್ವವಿದೆ; ಅದು ಭಾರತದ ಇತಿಹಾಸದ ಯುಗವೊಂದನ್ನು ಬೃಹತ್ಪ್ರಮಾಣದಲ್ಲಿ ಚಿತ್ರಿಸಿದೆ.

ಮೊದಲ ಯುಗದ ಇತರ ಕವಿಗಳ ಪೈಕಿ ಕೆಲವರು ಶಾಲಿಭದ್ರಸೂರಿ, ಜಲ್ಹನ್, *ವಿಜಯಪಾಲ ರಾಸೋ*ವನ್ನು ರಚಿಸಿದ ನಲ್ಲಸಿಂಗ್ ಭಟ್, *ವಾಚವಿಕ ಅಚಲದಾಸ ಖಿಚ್ಚೆರಿ*ಯ ಕರ್ತೃ ಶಿದಾಸ ಗಡನ; ಮತ್ತು ಸುಜೋ ನಗರಜೋಟೆ. ಈತ ತನ್ನ ಕೃತಿ *ಛಾಂದ್‌ರಾವ್ ಜೈತ್ಸಿ ರೋ*ಯುಲ್ಲಿ ಹುಮಾಯೂನನ ಸೋದರ ಕಮ್ರಾನನ ವಿರುದ್ಧ ಬಿಕನೇರಿನ ರಾವ್ ಜೈತ್ಸಿಯ ವಿಜಯದ ಸತ್ತ್ವಪೂರ್ಣವಾದ ಹಾಗೂ ಮನಮೋಹಕವಾದ ವಿವರಣೆ ನೀಡಿರುವನು.

ತಮ್ಮದೇ ಆದ ರೀತಿಯಲ್ಲಿ ದಿಂಗಲಕಾವ್ಯದ ಅಸಾಧಾರಣ ಕವಿಗಳಾದ ಭರಾಯಿತ್ ಈಶರ್ದಾಸ ಹಾಗೂ ಆತನ ಚಿಕ್ಕಪ್ಪ ಆಶಾನಂದರ ಉಲ್ಲೇಖವಿಲ್ಲದಿದ್ದರೆ

ಈ ಪಟ್ಟಿ ಅಪೂರ್ಣವಾಗುತ್ತದೆ. ಅವರು ರಾಜಾಸ್ಥಾನ ಹಾಗೂ ಗುಜರಾತುಗಳಲ್ಲಿ ಜನಪ್ರಿಯರಾಗಿದ್ದರು; ಅವರ ಹಲವಾರು ಸಂಕೀರ್ಣ ಕೃತಿಗಳು ಕೀರ್ತಿಭಾಜನವಾಗಿವೆ.

## ಸುವರ್ಣಯುಗ

ಹದಿನಾರನೆಯ ಶತಮಾನದಿಂದ ಹದಿನೆಂಟನೇ ಶತಮಾನದ ಅಂತ್ಯದ ನಡುವಣ ಅವಧಿಯನ್ನು ರಾಜಾಸ್ಥಾನೀ ಕಾವ್ಯದ ಸ್ವರ್ಣಯುಗ ಎಂದು ಪರಿಗಣಿಸಬಹುದು. ಈ ಅವಧಿಯು ದಿಂಗಲ್ ಹಾಗೂ ಆಡುಭಾಷೆ ರಾಜಾಸ್ಥಾನಿಯು ಶಿಷ್ಟಸಾಹಿತ್ಯಿಕ ಕಲಾರೂಪಗಳಾಗಿ ಅಭಿವೃದ್ಧಿಯಾದುದನ್ನು ವೀಕ್ಷಿಸಿತು; ಇದರಲ್ಲಿ ನೂರಾರು, ಸಾವಿರಾರು ಕವಿತೆಗಳು ರಚನೆಗೊಂಡವು.

ಭಾರತದ ಇತರ ಭಾಗಗಳಂತೆ ರಾಜಾಸ್ಥಾನ ಕೂಡ ಹದಿನೇಳನೇ ಹಾಗೂ ಹದಿನೆಂಟನೇ ಶತಮಾನಗಳಲ್ಲಿ ಭಕ್ತಿಕಾವ್ಯದ ಮಹಾಸ್ರೋತವನ್ನು ವೀಕ್ಷಿಸಿತು. ದಾದು, ವಜಿಂದ್, ಸುಂದರ್‌ದಾಸ್, ಚರಣದಾಸ್, ದಯಾಬಾಯಿ, ಹರಿದಾಸ ಮತ್ತು ಪರಸ್‌ರಾಮ್‌ರು ಸೇರಿದಂತೆ ಸಂತಕವಿಗಳ ಸಾಲು ರಾಜಾಸ್ಥಾನದ ಸಾಹಿತ್ಯಿಕ ಪರಂಪರೆಯನ್ನು ಶ್ರೀಮಂತಗೊಳಿಸಿದಂತೆಯೇ, ಅಲ್ಲಿನ ನೈತಿಕ ಜೀವನವನ್ನೂ ಉದಾತ್ತಗೊಳಿಸಿತು. ಈ ಕವಿಗಳು ಉಪಯೋಗಿಸಿದ ಭಾಷೆಯು ರಾಜಾಸ್ಥಾನಿ, ಪಿಂಗಲ ಹಾಗೂ ಜೋಗಿಗಳು ಹಾಗೂ ಇತರ ಅಲೆಮಾರಿ ಸನ್ಯಾಸಿಗಳಿಗೆ ವಿಶಿಷ್ಟವಾದ ಸಾಧುಕ್ಕಡಿ ಖಡೀಬೋಲಿಯ ವಿಚಿತ್ರ ಸಂಮಿಶ್ರಭಾಷೆಯಾಗಿತ್ತು.

ಶೃಂಗಾರದ ಭಕ್ತಕವಿಗಳ ಸಾಧನೆಗಳನ್ನು ಉಪೇಕ್ಷಿಸುವಂತಿಲ್ಲ. ಅಂಥ ಭಾವತೀವ್ರತೆಯನ್ನು ಅಭಿವ್ಯಕ್ತಿಸಲು ಕೆಲವರು ಸರಳವಾದ ಭಾಷೆಯನ್ನು ಬಳಸಿರುವರು. ಮೀರಾ ವ್ಯಕ್ತಪಡಿಸಿರುವ ಭಾವನೆಗಳು ಸಾರ್ವತ್ರಿಕವಾದುವಾದರೂ ಅಭಿವ್ಯಕ್ತಿಯ ರೀತಿಯು ರಾಜಾಸ್ಥಾನಿಗೇ ವಿಶಿಷ್ಟವಾದುದಾಗಿದೆ. ಮೀರಾಳ ಅತ್ಯುತ್ತಮ ರಚನೆಗಳ ಪೈಕಿ ಕೆಲವು ರಚನೆಗಳ ಪೂರ್ಣ ಭಾವವನ್ನು ರಾಜಾಸ್ಥಾನಿ ಮಾತ್ರವೇ ಅರ್ಥ ಮಾಡಿಕೊಳ್ಳಬಲ್ಲ ಎಂದು ಅನೇಕ ವೇಳೆ ಹೇಳಲಾಗುತ್ತದೆ.

ವೀರಕಾವ್ಯ ಕರ್ತೃಗಳ ಪೈಕಿ (ಇವರಲ್ಲಿ ಹೆಚ್ಚಿನವರು ಡಿಂಗಲ್‌ನಲ್ಲಿ ಬರೆದಿರುವರು) ಎರಡು ಹೆಸರುಗಳು ಗಮನಾರ್ಹವಾಗಿ ಕಾಣುತ್ತವೆ. ಬಿಕನೀರಿನ ' ಪೃಥ್ವೀರಾಜ ರಾಥೋರ್ ಹಾಗೂ ಮಾರ್ವಾರದ ಸೋಜತ್‌ನ ಸಮೀಪದ ಧುನ್ಲಾದ ದುರ್ಸ್ ಆರ್ಟ್–ಇವರೇ ಆ ಇಬ್ಬರು ಖ್ಯಾತನಾಮರು. ಪೃಥ್ವೀರಾಜನು ಅಕ್ಬರನ ಕೃಪೆಗೆ ಪಾತ್ರನಾಗಿದ್ದ ಎನ್ನಲಾಗುತ್ತದೆ. ಅವನು ಕವಿ, ಯೋಧ ಹಾಗೂ ಭಕ್ತನಾಗಿಯೂ ಶ್ರೇಷ್ಠನಾಗಿದ್ದ. ಆತನ ಪ್ರಸಿದ್ಧ ದಿಂಗಲ್ ಕಾವ್ಯ *'ವೆಲಿ ಕೃಷ್ಣ–ರುಕಮನಿ ರೀ'* ಎಂಬುದು "*ಬೆಲಿಯೋ*'ದ 305 ಪದ್ಯಗಳಲ್ಲಿ ಶ್ರೀಕೃಷ್ಣ–ರುಕ್ಮಿಣಿಯರ ವಿವಾಹವನ್ನು ವಿವರಿಸು ತ್ತದೆ. ಪ್ರತಿಮಾ ಸೌಂದರ್ಯ, ವರ್ಣನಾ ವೈಖರಿ ಹಾಗೂ ಶೃಂಗಾರ ಭಾವಾಭಿವ್ಯಕ್ತಿ ಯಲ್ಲಿ ಇದೊಂದು ಗಮನಾರ್ಹವಾದ ಕಾವ್ಯವಾಗಿದೆ. ಇತರ ದೀರ್ಘಕಾವ್ಯಗಳ ಜೊತೆಗೆ ಪೃಥ್ವೀರಾಜನು ಅನೇಕ *'ಗೀತ'*ಗಳು *'ಸೋರ್ತಗಳು'* ಹಾಗೂ *'ದೂಹಾ'* ಗಳನ್ನು ರಚಿಸಿರುವನು. (ಅಕ್ಬರನಿಗೆ ತನ್ನ ಸ್ವಾತಂತ್ರ್ಯವನ್ನು ಶರಣು

ನೀಡದಂತೆ ಒತ್ತಾಯಿಸಿ) ಮಹಾರಾಣ ರಾಣಾಪ್ರತಾಪನಿಗೆ ಪೃಥ್ವೀರಾಜ ಬರೆದ ದ್ವಿಪದಿಗಳು ಸುಪ್ರಸಿದ್ಧವಾಗಿವೆ: "ನಾನು ಹೆಮ್ಮೆಯಿಂದ ನನ್ನ ಮೀಸೆದಿರುವಲೇ, ಇಲ್ಲ ಅಪಮಾನದಿಂದ ನನ್ನ ತಲೆ ತಗ್ಗಿಸಲೇ ?" ಎಂದು ಪ್ರತಾಪನನ್ನು ಪ್ರಶ್ನಿಸುತ್ತಾನೆ. ವಾಸ್ತವವಾಗಿಯೂ, ರಾಜಾಸ್ಥಾನೀ ಸಾಹಿತ್ಯದ ಅಮರರ ಶ್ರೇಣಿಯಲ್ಲಿ ಪೃಥ್ವೀರಾಜನಿಗೆ ಉನ್ನತವಾದ ಸ್ಥಾನವಿದೆ.

ದುರ್ಸ ಆರ್ಹಾ ಕೂಡ ಅಕ್ಬರನ ಆಸ್ಥಾನದಲ್ಲಿದ್ದನೆನ್ನಲಾಗಿದೆ; ಇವನು ಕೂಡ ಪೃಥ್ವೀರಾಜನಂತೆ ರಜಪೂತರ ಗೌರವ ಘನತೆಗಳನ್ನು ಪಾಲಿಸಲು ಶ್ರಮಿಸಿದ. ಮಹಾರಾಣಾ ಪ್ರತಾಪನ ಕಲಿತನವನ್ನು ಅಮರಗೊಳಿಸಿದ ಕೆಲವು ದ್ವಿಪದಿಗಳಿಂದಾಗಿ ಈತ ಸುವಿಖ್ಯಾತನಾಗಿದ್ದಾನೆ. ಅವುಗಳ ಪೈಕಿ ಒಂದು ಎಂದರೆ: "ಹಿಂದೂ ಮುಸ್ಲಿಂರೆಲ್ಲ ಮುಳುಗಿರುವ ಮಹಾಸಾಗರ ಅಕ್ಬರ; ಆದರೋ ಮೇವಾಡದ ಪ್ರತಾಪ ಕಮಲಪುಷ್ಪ (ತಾವರೆ)ದಂತೆ ಅದರ ಮೇಲ್ಮೈಯಲ್ಲಿ ತೇಲುತ್ತಿರುವನು".

## ಆಧುನಿಕ ಯುಗ

ಹತ್ತೊಂಬತ್ತನೇ ಶತಮಾನದಿಂದ ಆರಂಭಗೊಳ್ಳುವ ರಾಜಾಸ್ಥಾನೀ ಕಾವ್ಯದ ಆಧುನಿಕ ಯುಗದಲ್ಲಿ ಬುಂದಿಯ ಸೂರ್ಯಮಲ್‌ನ ಪ್ರತಿಭೆ ಹೆಗ್ಗಳಿಕೆಯದಾಗಿದೆ. *'ವಂಶ ಭಾಸ್ಕರ'* ಮತ್ತು *'ವೀರ ಸತ್ಸಾಯಿ'*ಗಳ ಕರ್ತೃ ಇವನು. ವೀರಕಾವ್ಯ ರಚನೆಯಲ್ಲಿ ಅಂಥ ಸಿದ್ಧಿ ಪಡೆದಿರುವರು ತುಂಬ ಕೆಲವರೇ ಕೆಲವರು. ಯುದ್ಧದ ವಿವಿಧ ಅಂಶಗಳ ಇವನ ವರ್ಣನೆಯು ವೈವಿಧ್ಯಮಯುವಾದುದೂ, ವಿಶದವಾದುದೂ ಆಗಿದೆ; ಕಾವ್ಯದ ಮೇಲಣ ಇವನ ಪ್ರಭುತ್ವ ಪರಿಪೂರ್ಣ. ಸೂರ್ಯಮಲ್ "ರಾಜಾಸ್ಥಾನದ ಭೂಷಣ"ನಾಗಿದ್ದಾನೆ. ಈ ಯುಗದ ಇತರ ಕವಿಗಳ ಪೈಕಿ ಉಲ್ಲೇಖನೀಯರು: *'ವೀರವಿನೋದ'*ದ ಕರ್ತೃ ಗಣೇಶಪುರಿ, ಉಮರ್ ದಾನ್, ಮುರಾರಿದನ್ ಹಾಗೂ ಮಹಾರಾಜ ಚತುರಸಿಂಗ್; ಚತುರಸಿಂಗ್ ಉದಯ ಪುರದ ದಿವಂಗತ ಮಹಾರಾಜ ಭೂಪಾಲ ಸಿಂಗನ ಸೋದರ ಸಂಬಂಧಿ; ಸಂತನಂತಿದ್ದ ವನು. ಮಹಾರಾಜ ಚತುರ್‌ಸಿಂಗ್ *'ಗೀತಾ'*, ಪತಂಜಲಿಯ *'ಯೋಗಸೂತ್ರ'* ಹಾಗೂ ಇತರ ತತ್ತ್ವಶಾಸ್ತ್ರ ಕೃತಿಗಳನ್ನು ಜನಪ್ರಿಯ ಮೇವಾರಿಯಲ್ಲಿ ಭಾಷಾಂತರಿಸಿರುವನು; ಭಕ್ತಿ, ನೈತಿಕತೆಗಳ ಬಗ್ಗೆ ಹಲವು ಪದ್ಯಗಳನ್ನು ಬರೆದಿರುವನು.

ಈಗ ನಮ್ಮ ಯುಗಕ್ಕೆ ಪದಾರ್ಪಣ ಮಾಡುತ್ತೇವೆ. ರಾಜ್ಯದಲ್ಲಿ ರಾಷ್ಟ್ರೀಯ ಜಾಗೃತಿಯ ಪ್ರಬಲಮಾಧ್ಯಮ ರಾಜಾಸ್ಥಾನೀ ಕಾವ್ಯವೂ ಆಗಿದೆ. ಈ ಜಾಗೃತಿಯ ಆದ್ಯಪ್ರವರ್ತಕರೆಂದರೆ ಕೇಸ್ರಿಸಿಂಗ್ ಭೈರಾತ್. ಈತ ರಾಜಾಸ್ಥಾನದ ಜನತೆ ಮತ್ತು ರಾಜರನ್ನು ತಮ್ಮ ಸುದೀರ್ಘ ನಿದ್ರೆಯಿಂದ ಎಚ್ಚರಿಸಿದರು. ಉದಯರಾಜ ಉಜ್ವಲ್ ಕೂಡ ರಾಷ್ಟ್ರೀಯ ಆಂದೋಲನ ಹಾಗೂ ಭಾರತದ ಪುನರುಜ್ಜೀವನದ ಬಗ್ಗೆ ಹಾಡಿರುವರು. ನಾಥುದೇನ್ ಮಹಿಯಾರಿಯರವರು ಪಾರಂಪರಿಕ ಶೈಲಿಯಲ್ಲಿ ರಾಜಪುತ ಶೌರ್ಯ ಕಲಿತನಗಳ ಹಂಸಗೀತೆಯಾದ *'ವೀರ ಸತ್ಸಾಯಿ'*ಯನ್ನು ರಚಿಸಿರುವರು. ಅವರು ಸೂರ್ಯಮಲ್‌ರ *'ಸತ್ಸಾಯಿ'*ಯನ್ನು ನೆನಪಿಗೆ ತರುವರು.

ಆದಾಗ್ಯೂ ಆಧುನಿಕ ರಾಜಾಸ್ಥಾನೀ ಸಾಹಿತ್ಯದಲ್ಲಿ ಹೊಸ ಯುಗವನ್ನು ಪ್ರಾರಂಭಿಸಿದ ನಿಜವಾದ ಗೌರವಕ್ಕೆ ಚಂದ್ರಸಿಂಗ್ ಪಾತ್ರರು. ಅವರು ತಮ್ಮ ಸುವಿಖ್ಯಾತ ಕೃತಿ *'ಬಧ್ಲೀ'*(1940)ಯಲ್ಲಿ ವರ್ಷ ಋತುವನ್ನು ಸ್ತುತಿಸಿದರು. ಅವರು ತಮ್ಮ ಮೊದಲ ಒಂದು ಕಿರು ಕೃತಿ *'ಕಹ್ ಮುಖರಾನಿ'*ಯಲ್ಲಿ ಹದಿನಾಲ್ಕನೇ ಶತಮಾನದ ಸುಪ್ರಸಿದ್ಧ ವಿದ್ವಾಂಸ ಅಮೀರ್ ಖುಸ್ರೋನ ಶೈಲಿಯನ್ನು ಅನುಸರಿಸಿದ್ದರು.

ಆಧುನಿಕ ರಾಜಾಸ್ಥಾನಿಯ ಸ್ವಾತಂತ್ರ್ಯಪೂರ್ವ ಅವಧಿಯಲ್ಲಿ ಕೆಲವೇ ಪ್ರಖ್ಯಾತರ ಹೆಸರುಗಳು ಕಂಡುಬರುತ್ತವೆ. ಚಂದ್ರಸಿಂಗ್‌ರ ಜೊತೆಗೆ ಬಿಸೌನ ಮನೋಹರಶರ್ಮ, ಜೋಧಪುರದ ಗಣೇಶಿಲಾಲ ವ್ಯಾಸ 'ಉಸ್ತಾದ್', ಅಳ್ವಾರದ ರಾಮನಾಥ ಕವಿಯ, ಕಾಲ್ವಿಯ ನಾಮರಾವಮ್ ಸೌಕ್ಕರ್ತ, ರತ್ನಗರ್‌ನ ರಾಮನಿವಾಸ ಹರೀತ್ ಮತ್ತು ಸುವ್ನೇಶ್ ಜೋಷಿಯವರನ್ನೂ ಉಲ್ಲೇಖಿಸಬಹುದು. ಮೇಘರಾಜ್ ಮುಕುಲ್ ರಚಿಸಿ, ವಾಚಿಸುತ್ತಿರುವ ಕಾವ್ಯರೂಪದ ವೀರಕಥೆ *'ಸೈನಾನಿ'*ಯ ಬಗ್ಗೆ ವಿಶೇಷವಾಗಿ ಉಲ್ಲೇಖಿಸಬೇಕು. ಇದು ಇಡೀ ಭಾರತದಲ್ಲಿ ಇಷ್ಟವಾಗಿದೆ; ಹಾಗಾಗಿ ಆಧುನಿಕ ರಾಜಾಸ್ಥಾನೀ ಭಾಷೆ ಹಾಗೂ ಸಾಹಿತ್ಯವನ್ನು ಜನಪ್ರಿಯಗೊಳಿಸುವಲ್ಲಿ ನೆರವಾಗಿದೆ.

1947ರ ಅನಂತರ, ಅಥವಾ ರಾಜಪುಟಾಣಾದ ಹಿಂದಿನ ರಾಜರ ರಾಜ್ಯಗಳನ್ನು ಪ್ರಸಕ್ತ ರಾಜಾಸ್ಥಾನ ರಾಜ್ಯವಾಗಿ ಏಕೀಕರಣಗೊಳಿಸಿದ 1950ರ ನಂತರ ಗದ್ಯ, ಪದ್ಯಗಳೆರಡರಲ್ಲೂ ಕೃತಿ ಪ್ರಕಟಣೆಯಾಗಿದೆ. ಈ ಅವಧಿ ರಾಷ್ಟ್ರೀಯ ಘನತೆ, ಪರಂಪರೆ ಹಾಗೂ ಜಾನಪದ ಸಂಸ್ಕೃತಿಯ ಪುನಶ್ಚೇತನವನ್ನು ಕಂಡಿತು. ಕವಿಗಳು ಕೂಡ ಈ ಬದಲಾವಣೆ ಹಾಗೂ ಪುನರುಜ್ಜೀವನವನ್ನು ಕುರಿತು ಹಾಡಿದರು. ಜೋಧಪುರದ ರೇವತ್ ಧನ ಊಳಿಗಮಾನ್ಯ ವ್ಯವಸ್ಥೆಯ ವಿರುದ್ಧ ರೈತ ಬಂಡಾಯವನ್ನು ಚಿತ್ರಿಸಿದರೆ ನಾರಾಯಣ ಸಿಂಗ್ ಭಾಟಿ *'ದುರ್ಗಾದಾಸ್'* ಅನ್ನು ರಚಿಸಿದರು. ಇದು ರೂಪದಲ್ಲಿ ಪಾರಂಪರಿಕವಾದುದಾದರೂ ಕಲ್ಪನೆಗಳಲ್ಲಿ ಹೊಸತನವಿರುವಂಥ ಸ್ಫೂರ್ತಿದಾಯಕ ಕೃತಿಯಾಗಿದೆ. ಅವರ ಇತರ ಕೃತಿಗಳ ಪೈಕಿ ಸೇರಿರುವುವು, ಕಾಳಿದಾಸನ *'ಮೇಘದೂತ'*ದ ರಾಜಾಸ್ಥಾನೀ ಪದ್ಯ ಭಾಷಾಂತರ; ಹಾಗೂ ರಾಜಾಸ್ಥಾನದ ಮರಳುಗಾಡಿನಲ್ಲಿ ಸಂಜೆಯಲ್ಲಿ ಪ್ರಕೃತಿಯ ಸೌಂದರ್ಯ, ನಿಗೂಢತೆ ಪ್ರಕಟಗೊಳ್ಳುವುದನ್ನು ವಿವರಿಸುವ 'ಸಂಜ್ಞ'.

ಹಾಗೆಯೇ, ರಾಜಾಸ್ಥಾನದ ಶುಷ್ಕ ಹಾಗೂ ಅರೆ ಶುಷ್ಕ ಪ್ರದೇಶಗಳಲ್ಲಿನ ಹಸುರು, ಸಮೃದ್ಧವಾದ ಜಮೀನುಗಳು ಮಳೆಯಲ್ಲಿ ನೆನೆದ ನಂತರ ಅವುಗಳ ಸೌಂದರ್ಯ ವೈಭವಗಳನ್ನು ರತ್ನಗರ್‌ನ ಗಜಾನನವರ್ಮ ಸ್ತುತಿಸಿದ್ದಾರೆ; ಅದೇ ರೀತಿ ಜನತೆಯ ಸುಖ ದುಃಖಗಳ ಬಗ್ಗೆ ಹಾಡಿದಾಗ, ರಾಜಾಸ್ಥಾನದ ಜಾನಪದ ಜೀವನವನ್ನು ಚಿತ್ರಿಸಿದ್ದಾರೆ; *ದೇವರ್* ಮತ್ತು *'ಭಾಭಿ'*ಯರ ಸರಳವಾದರೂ ವಿಚಿತ್ರವಾದ ರಮ್ಯ ಸಂಬಂಧವನ್ನು ಕೂಡ.

ಈಚೆಗೆ, ಬದಲಾವಣೆಯ ಉತ್ಸಾಹವನ್ನು ಪ್ರತಿನಿಧಿಸುವಂಥ ರಾಜಾಸ್ಥಾನೀ ಕವಿಗಳು ಹಾಗೂ ಲೇಖಕರ ಹೊಸವರ್ಗವೊಂದು ಪ್ರಾಬಲ್ಯಮಾನಕ್ಕೆ ಬರುತ್ತಿದೆ. ಈ ವರ್ಗದ ಉಲ್ಲೇಖಾರ್ಹವಾದ ಹೆಸರುಗಳು: ಕೋಟಾದ ರಘುರಾಜಸಿಂಘ ಹಾಡ,

ಅಜ್ಮೀರದ ತ್ರಿಲೋಕ ಗೋಯೆಲ್, ನಾಗೌರಿನ. ಕಲ್ಯಾಣಸಿಂಗ್ ರಾಜವತ್, ರತ್ನಘರ್‌ನ ಕಿಶೋರ ಕಲ್ಪನ ಕಾಂತ್, ಸುಜನಘರ್‌ನ ಕನ್ಹಯಲಾಲ್ ಸೇಠಿಯ, ಶಿಖರ್‌ನ ಸುಮೇರ್ ಸಿಂಗ್, ಜುಂಜುನುವಿನ ವಿಮಲೇಶ್, ಚಿರಾವದ ಸುಮನ್, ಘೆಷನದ ಕರ್ನಿದಾನ್, ಜೈಪುರದ ಮದನ ಗೋಪಾಲ ಶರ್ಮ ಮತ್ತು ಮನೋಹರ ಪ್ರಭಾಕರ್, ಜೋಧಪುರದ ಬುದ್ಧಿಪ್ರಕಾಶ್, ತಾರಾಪ್ರಕಾಶ ಜೋಷಿ, ಸತ್ಯಪ್ರಕಾಶ್, ಕಾಲುವಿನ ನಾನು ರಾಮ್ ಸೌಸ್ಕರ್ತ, ಹಾಗೂ ಬಿಕನೀರಿನ ಗಿರಿಧಾರೀ ಲಾಲ್ ಪರಿಹಾರ್.

ಆಧುನಿಕ ರಾಜಾಸ್ಥಾನೀ ಕಾವ್ಯವು ಕಾಲದೊಡನೆ ಸಾಗುತ್ತಿದೆ; *'ನಯೀ ಕವಿತಾ'* ಎಂದು ಕರೆಯಲಾಗುವ ಈಚಿನ ಪ್ರವೃತ್ತಿಗಳನ್ನು ತೇಜಸಿಂಗ್ ಜೋಧ, ಮಣಿ ಮಧುಕರ್, ಕನ್ಹಯಲಾಲ ಸೇಥಿಯ, ರಾಮನಾಥವ್ಯಾಸ್, ಓಂಕಾರ್ ಪರೀಕ್ ಹಾಗೂ ಗೋವರ್ಧನ ಸಿಂಗರ ಈಚೆಗೆ ಪ್ರಕಟಗೊಂಡ ಕೆಲವು ಕೃತಿಗಳಲ್ಲಿ ಗಮನಿಸಬಹುದಾಗಿದೆ.

ಕಥೆಗಾರರ ಪೈಕಿ ಕೆಲವರು ಮುಖ್ಯರಾದವರೆಂದರೆ ರಾಣಿ ಲಕ್ಷ್ಮೀಕುಮಾರಿ ಚಂದಾವತ್, ನರಸಿಂಗ್ ರಾಜಪುರೋಹಿತ್, ಬೈಜನಾಥ್ ಪನ್ವರ್, ಮನೋಹರ ಶರ್ಮ, ಶ್ರೀಲಾಲ ಜೋಷಿ, ಮುರುಳೀಧರ್ ವ್ಯಾಸ್, ನಾನು ರಾಮ್ ಹಾಗೂ ವಿಜಯದನ್ ದೇತಾ; ಕಾದಂಬರಿ ಕ್ಷೇತ್ರದಲ್ಲಿಯೇ ಖ್ಯಾತನಾಮರಾದ ಮೂವರೆಂದರೆ, ಶ್ರೀ ಲಾಲ್ ಜೋಷಿ, ಅಮರಮ್ ಹಾಗೂ ಯಾದವೇಂದ್ರ ಶರ್ಮ 'ಚಂದ್ರ'.

## ಜನಪದ ಸಾಹಿತ್ಯ

ಈ ಮೊದಲ ಅಧ್ಯಾಯಗಳಲ್ಲಿ ಗಮನಿಸಿರುವಂತೆ *'ಧೋಲಾ–ಮಾರು ಕ ದೊಹಾ'*ವು ಜನಪದ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನ ಗಳಿಸಿದೆ. ಈ ಪ್ರೇಮ ಆಖ್ಯಾಯಿಕೆಯು ಈ ಪ್ರದೇಶದಲ್ಲೆಲ್ಲ ಸುಪರಿಚಿತವಾಗಿದೆ. ರಾಜಾಸ್ಥಾನಿ ಕಾವ್ಯದಲ್ಲಿ ಸನ್ನಿಹಿತ ಮರಣದ ಭಾವನೆಯು–ಇದು ರಣರಂಗದಲ್ಲಿರಬಹುದು ಇಲ್ಲವೇ ಪತಿಯ ಚಿತೆಯಲ್ಲಿರಬಹುದು –ಪ್ರೇಮ ಹಾಗೂ ಅದರ ಕ್ಷಣಿಕ ಆನಂದಗಳಿಗೆ ತೀವ್ರವಾದ ಮನೋವೇದಕತೆಯನ್ನು ತುಂಬಿದೆ. ವಿರಹಯಾತನೆ ಹಾಗೂ ಪ್ರೀತಿಯ ಹಂಬಲ–ಇವು ರಾಜಾಸ್ಥಾನದ ಕಾವ್ಯದ ಲಕ್ಷಣಗಳಾಗಿವೆ. *'ಧೋಲಾ–ಮಾರು'* ಇದಕ್ಕೆ ಉತ್ತಮ ಮಾದರಿಯಾಗಿದೆ.

ಇತರ ಜನಪ್ರಿಯ (ಜಾನಪದ) ಕಥೆಗಳ ಪೈಕಿ *'ರುಕಮಣ ಮಂಗಲ್'* ಮತ್ತು *'ನರಸಿಜಿರೋ ಮೆಹ್ರೋ'*– ಇವು ಸೇರಿವೆ. *ಖ್ಯಾಲ್*ಗಳು ಕಾವ್ಯ ರೂಪದಲ್ಲಿರುವ ನಾಟಕಗಳು. *ಅಮರಸಿಂಗ್ ರಾಥೋರ್ ರೊ ಖ್ಯಾಲ್* ಹಾಗೂ *ರಾಜಾಗೋಪೀಚಂದ್‌ರೋ ಖ್ಯಾಲ್* –ಇವು 'ಖ್ಯಾಲ್'ಗಳಿಗೆ ಮಾದರಿಗಳಾಗಿವೆ. *'ಪಾವಡಗಳು'* ಪಾಬುಜಿ, ರಾಮದೇವ್‌ಜಿ ಹಾಗೂ ತೇಜಾಜಿಯವರಂಥ ನಾಯಕರ ತ್ಯಾಗಸ್ಮರಣೆಗಾಗಿರುವ ಜನಪದ ಲಾವಣಿಗಳಾಗಿದ್ದು, ಇವು ತುಂಬ

ಜನಪ್ರಿಯವಾಗಿವೆ.

ರಾಜಾಸ್ಥಾನೀಗೆ ಗದ್ಯ ರಚನೆಯ ಸುದೀರ್ಘ ಪರಂಪರೆಯಿದೆ. ಪೃಥ್ವೀರಾಜ ಚೌಹಾನ್‌ಗೆ ಸಂಬಂಧಿಸಿದವೆಂದು ಭಾವಿಸಲಾಗಿರುವ ಸನದುಗಳು ಹಾಗೂ ಪಟ್ಟಾಗಳನ್ನು ಪತ್ತೆ ಹಚ್ಚಲಾಗಿದೆ. ಜೈನ ಲೇಖಕರನೇಕರು ರಾಜಾಸ್ಥಾನಿಯಲ್ಲಿ ಮೂಲಕೃತಿಗಳು ಹಾಗೂ ವ್ಯಾಖ್ಯಾನಗಳನ್ನು ರಚಿಸಿರುವರು. ಹದಿನೇಳನೇ ಶತಮಾನದ ಆರಂಭದಲ್ಲಿ ಜೈಮಲ್ *'ಗೋರಾಬಾದಲ್ ಕಿ ಬಾತ್'* ಕೃತಿಯನ್ನು ರಚಿಸಿದ. ಬೃಹತ್ ಐತಿಹಾಸಿಕ ಗೆಜೆಟಿಯರ್ *'ಮುಹೋತ್ ನೈನ್ಸಿರೀ ಖ್ಯಾತ್'* ಸುಪ್ರಸಿದ್ಧ ಕೃತಿ. ಕವಿ ಬಂಕಿದಾಸನು ಸುಮಾರು 2800 'ವಾತ್'ಗಳು ಅಥವಾ ಟಿಪ್ಪಣಿಗಳನ್ನು ರಚಿಸಿದ; ಅವನ್ನು ಈಗ ಕೃತಿರೂಪದಲ್ಲಿ ಸಂಕಲಿಸಲಾಗಿದೆ. ಆಳುವ ಮನೆತನಗಳ ಇತಿಹಾಸಗಳು ಅಥವಾ *ಖ್ಯಾತ್*ಗಳನ್ನು ರಚಿಸಲು ಹದಿನೇಳು–ಹದಿನೆಂಟನೆ ಶತಮಾನಗಳಲ್ಲಿ ಮೊಘಲರ ಆಳಿಕೆಯ ಅವಧಿಯಲ್ಲಿ ನೇಮಿಸಲಾಗಿತ್ತು. ಬಿಕನೀರಿನ *'ದಯಾಳ್‌ದಾಸ್ ರೀ ಖ್ಯಾತ್'*, ಜೋಧಪುರದ *'ರಾಥೊರೋನ್ ಖ್ಯಾತ್'* ಹಾಗೂ ಉದಯಪುರದ *'ಸಿಸೋದಿಯೋಂ ರೀ ಖ್ಯಾತ್'* ಉಲ್ಲೇಖಾರ್ಹ ವಾದುವು. ಕಳೆದ ನಾಲ್ಕು–ಐದು ಶತಮಾನಗಳಲ್ಲಿ ರಚಿಸಲಾದ ಅಥವಾ ವಿಶದೀಕರಿಸ ಲಾದ ನೂರಾರು ಕಥೆಗಳು ಇವೆ.

## ಪುನರುಜ್ಜೀವನ

ಸಾಕಷ್ಟು ಈಚಿನ ಕಾಲದವರೆಗೆ ಆಡಳಿತ ಹಾಗೂ ಅಧಿಕೃತ ಕಾರ್ಯಭಾರದ ಭಾಷಾವಾಹಕವಾಗಿ ರಾಜಾಸ್ಥಾನಿಯೇ ಇತ್ತು; ಆನಂತರದಲ್ಲಿ ಉರ್ದು ಅಥವಾ ಹಿಂದಿ, ಆಮೇಲೆ ಇಂಗ್ಲಿಷ್ ಅದರ ಸ್ಥಾನವನ್ನು ಆಕ್ರಮಿಸಿತು. ಅದರ ಪುನರು ಜ್ಜೀವನವು ಕಷ್ಟವಾದುದಾದರೂ, ಅಸಾಧ್ಯವಾಗಿಯೇನೂ ಉಳಿದಿಲ್ಲ. ಹಿಂದಿಯನ್ನು ರಾಜ್ಯದಲ್ಲಿ ಶಿಕ್ಷಣ ಮಾಧ್ಯಮ ಹಾಗೂ ರಾಜ್ಯದ ಭಾಷೆಯಾಗಿ ಅಂಗೀಕರಿಸಿರು ವುದರಿಂದ ಇದು ಕಷ್ಟವಾಗಿದೆ. ಆದರೂ ರಾಜ್ಯದ ವಿವಿಧ ಭಾಗಗಳಲ್ಲಿನ ಲೇಖಕರು ಇದನ್ನು ಅಭಿವ್ಯಕ್ತಿಯ ಮಾಧ್ಯಮವನ್ನಾಗಿ ಬಳಸುತ್ತಿರುವರು; ಕಾವ್ಯ, ಕಥೆ–ಕಾದಂಬರಿ ಹಾಗೂ ಗದ್ಯದ ಇತರ ಪ್ರಕಾರಗಳು ಸೇರಿದಂತೆ ಸೃಜನಾತ್ಮಕ ಸಾಹಿತ್ಯವೂ ರಾಜಾಸ್ಥಾನಿಯಲ್ಲಿ ಬೆಳಕಿಗೆ ಬರುತ್ತಿದೆ.

ಸಾಹಿತ್ಯ ಅಕಾಡೆಮಿಯು ಈಚೆಗೆ ರಾಜಾಸ್ಥಾನಿಯನ್ನು ಸಾಹಿತ್ಯಿಕ ಭಾಷೆಯಾಗಿ ಅಂಗೀಕರಿಸಿದೆ; ಸಂವಿಧಾನದ ಎಂಟನೆಯ ಅನುಸೂಚಿಯಲ್ಲಿ ಇದರ ಸೇರ್ಪಡೆ ಗಾಗಿಯೂ ಪ್ರಯತ್ನಗಳು ನಡೆಯುತ್ತಿವೆ.

ಸೆಕೆಂಡರಿ ಶಿಕ್ಷಣ ಮಂಡಲಿಯು ರಾಜಾಸ್ಥಾನಿಯನ್ನು ಅಧ್ಯಯನ ವಿಷಯಗಳಲ್ಲಿ ಸೇರಿಸಿದೆ ಹಾಗೂ 1973ರಿಂದ ಇದೊಂದು ಐಚ್ಛಿಕ ವಿಷಯವಾಗಿದೆ. ಜೋಧ್‌ಪುರ ಹಾಗೂ ರಾಜಾಸ್ಥಾನ ವಿಶ್ವವಿದ್ಯಾನಿಲಯಗಳು ಹಿಂದೀ ಎಂ.ಎ., ಶಿಕ್ಷಣದಲ್ಲಿ ರಾಜಾಸ್ಥಾನಿಯ ನಾಲ್ಕು ಪತ್ರಿಕೆಗಳಿಗೆ ಅವಕಾಶ ಮಾಡಿಕೊಟ್ಟಿವೆ. ರಾಜಾಸ್ಥಾನ ಸಾಹಿತ್ಯ ಅಕಾಡೆಮಿ ರಾಜಾಸ್ಥಾನಿಯ ಸ್ವಾಯತ್ತ ವಿಭಾಗವೊಂದನ್ನು ಕೂಡ ರಚಿಸಿದೆ.

ಈ ಎಲ್ಲ ಕ್ರಮಗಳು ರಾಜಸ್ಥಾನೀ ಸಾಹಿತ್ಯ ಹಾಗೂ ಭಾಷೆಗಳ ಭವಿಷ್ಯದ ಬಗ್ಗೆ ಶುಭ ಸೂಚಕಗಳಾಗಿವೆ.

# ಮೌಖಿಕ ಸಾಹಿತ್ಯ

## ಒಂದು ಸರ್ವೇಕ್ಷಣೆ

ರಾಜಾಸ್ಥಾನ ತನ್ನ ಭವ್ಯ ಗತಕಾಲ ಹಾಗೂ ಸಮೃದ್ಧವಾದ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಹಿನ್ನೆಲೆಯಿಂದೊಡಗೂಡಿದ್ದು, ಅದರ ಮೌಖಿಕ ಸಾಹಿತ್ಯ ತುಂಬ ಶ್ರೀಮಂತವಾದುದೂ, ವೈವಿಧ್ಯಮಯವಾದುದೂ ಆಗಿದೆ. ಠಾಕೂರ್ ರಾಮ್ ಸಿಂಗ್ ಸೂಚಿಸಿರುವಂತೆ ಜನಪದ ಸಾಹಿತ್ಯವನ್ನು ಎರಡು ಭಾಗಗಳಾಗಿ – ದೃಶ್ಯ ಮತ್ತು ಶ್ರವ್ಯ–ವಿಭಜಿಸಬಹುದು. ಆದರೆ ಈ ವಿಭಜನೆಯು ವಿನಿಫ್ರೆಡ್ ಬ್ರೈಸ್‌ರವರು ಯುಕ್ತವಾಗಿಯೇ ಸೂಚಿಸಿರುವಂತೆ ಸಮಗ್ರವಾಗಿರುವುದಕ್ಕಿಂತಲೂ ಕೇವಲ ಸೂಚಕವಾಗಿದೆ.[1] ಶ್ರವ್ಯವರ್ಗದಲ್ಲಿನ ಸಾಹಿತ್ಯವನ್ನು ಗದ್ಯ ಮತ್ತು ಕಾವ್ಯಗಳಾಗಿ ಮತ್ತೆ ವಿಭಜಿಸಬಹುದು; ಗದ್ಯಭಾಗದಲ್ಲಿ ಕಥೆಗಳು, ವಂಶಾವಳಿಗಳು ಹಾಗೂ ಗಾದೆಗಳು ಮತ್ತು ಉಕ್ತಿಗಳು ಸೇರಿರುತ್ತವೆ. ಭಟರಂಥ ವೃತ್ತಿಪರರು ಮದುವೆಗಳಲ್ಲಿ ವಂಶಾವಳಿಗಳನ್ನು ಪಠಿಸುತ್ತಾರೆ; ಹೆಣ್ಣು–ಗಂಡಿನ ಕಡೆಯವರು ಅವನ್ನು ಆಸಕ್ತಿಯಿಂದ ಕೇಳುತ್ತಾರೆ. ಕಥೆಗಳು ಮತ್ತು ಆಖ್ಯಾನಗಳು ಜಾನಪದದ ಮನೋಭೂಮಿಯಲ್ಲಿ ಸಂರಕ್ಷಿತವಾಗಿರುತ್ತವೆ; ಅವೇ ಗಾದೆಗಳು ಹಾಗೂ ಸೂಕ್ತಿಗಳು ಜನತೆಯ ಸಾರ್ವತ್ರಿಕ ಸ್ವತ್ತಾಗುತ್ತವೆ; ಇವನ್ನು ಸಂಭಾಷಣೆಯಲ್ಲಿ ತಮ್ಮ ವಾದವನ್ನು ಸಮರ್ಥಿಸುವಲ್ಲಿ ಪರಿಣಾಮಕಾರಿಯಾಗಿ ಬಳಸಿಕೊಳ್ಳುವರು.

ಕಂಠಸ್ಥ ಸಾಹಿತ್ಯದ ಎರಡನೆಯ ವರ್ಗವಾದ ಕಾವ್ಯದಲ್ಲಿ ಋಜು ಹಾಗೂ ಪುಣ್ಯಕರವಾದ ಜೀವನ ನಡೆಸಲು ಜನತೆಗೆ ಸ್ಫೂರ್ತಿ ನೀಡಲು ಧಾರ್ಮಿಕ ಗ್ರಂಥಗಳು ಹಾಗೂ ಮಹಾಭಾರತ, ರಾಮಾಯಣ ಪಠಣವು ಸೇರಿರುತ್ತದೆ. ಶ್ರೇಷ್ಠ ಸಾಹಿತ್ಯ ಅಥವಾ ಅದರ ಆಳವಡಿಕೆಗಳ ಪಠಣ ಅಥವಾ ಪಾರಾಯಣ ಮಾಡುವ ಪಂಡಿತರಿಗೆ ಧನಧಾನ್ಯ ರೂಪದಲ್ಲಿ ಸಂಭಾವನೆ ನೀಡಲಾಗುತ್ತಿತ್ತು; ಇದೊಂದು ಪುಣ್ಯಕಾರ್ಯವೆಂದು ಪರಿಗಣಿತವಾಗಿತ್ತು. ವಿನಿಫ್ರೆಡ್ ಬ್ರೈಸ್‌ರ ಪ್ರಕಾರ ಇದು ಮೂಲತಃ ಜನಪದ ಸಾಹಿತ್ಯವಲ್ಲ; ಆದರೆ ಅದರ ಸ್ವರೂಪ, ಪರಿಣಾಮಗಳಿಂದಾಗಿ ಆ ವರ್ಗದಲ್ಲಿ ಸೇರಿಸಬಹುದು. ವಾಸ್ತವವಾಗಿ, ಅನೇಕ ಅನಕ್ಷರಸ್ಥ ಮನಸ್ಸುಗಳಲ್ಲಿ, ಈ ರೀತಿಯಲ್ಲಿ ಪಡೆದುಕೊಳ್ಳಲಾದ ಶ್ರೇಷ್ಠ (ಕ್ಲಾಸಿಕಲ್) ಸಾಹಿತ್ಯದ ರಾಶಿಯೇ ಬೇರೂರಿದೆ.

[1] Bryce, Winifred, ***Folk songs of Rajaputana***, **Delhi, 1970 (Reprint), P.13**

ನಿಜವಾದ ಜನಪದ ಸಾಹಿತ್ಯ ಎಂಬುದು ಹಾಡುಗಳು ಮತ್ತು ಲಾವಣಿಗಳಿಂದ ಪ್ರಸ್ತುತವಾಗುತ್ತದೆ. ಜನಪದ ಗೀತೆಗಳು ಜೀವನದ ಪ್ರತಿಬಿಂಬಕಗಳಾಗಿರುವ ಕಾರಣ ಅವೇ ಸಂಪತ್ತಾಗಿವೆ; ಜೀವನ ನಾಟಕದ ಯಾವುದೇ ಘಟನೆಯು ಜನಪದ ಗೀತೆಗಳ ವ್ಯಾಪ್ತಿಯಿಂದ ಹೊರಗುಳಿದಿಲ್ಲ. ಸಾಮಾನ್ಯವಾಗಿ ರಾಜಾಸ್ಥಾನದ ಲಾವಣಿಗಳು ಸುದೀರ್ಘವಾದುವು; ಆದರೆ ಅವು ಐತಿಹಾಸಿಕ ಅಥವಾ ಆಸಕ್ತಿದಾಯಕ ಘಟನೆಗಳ ಸರಳವಾದ, ಸುಲಭವಾದ ನಾಟಕೀಯ ವೃತ್ತಾಂತಗಳಾಗಿವೆ.

ರಾಜಾಸ್ಥಾನೀ ಸಾಹಿತ್ಯವು ಸಮಾಜದ ಒಂದು ನಿರ್ದಿಷ್ಟ ವರ್ಗಕ್ಕೆ-ಊಳಿಗಮಾನ್ಯ – ಸಂಬಂಧಿಸಿದುದು ಎಂಬುದು ಕೆಲವು ವಿದ್ವಾಂಸರ ಅನಿಸಿಕೆಯಾಗಿದೆ. ಅದರ ತುಂಬ ಅತಿಯಾಗಿ ಸ್ತುತಿಗಳು ಅಥವಾ ಪ್ರಶಂಸೆಗಳಿವೆ; ಅವು ಕ್ರಾಂತಿಕಾರಕವಾದುವೂ ಕೂಡ. ಮೂಡಿ ಬಂದಿರುವ ಸಾಹಿತ್ಯದ ಲಿಖಿತ ಹಾಗೂ ಮೌಖಿಕ ಇವೆರಡರ-ಎಲ್ಲೋ ಸ್ವಲ್ಪ ಭಾಗದಲ್ಲಿ ಮಾತ್ರವೇ ಈ ಅಭಿಪ್ರಾಯವನ್ನು ಸಮರ್ಥಿಸಲು ವಾಸ್ತವವಾಗಿ ತುಂಬ ಸಾಕ್ಷ್ಯಾಧಾರಗಳಿವೆ. ಸಮಗ್ರವಾಗಿ ರಾಜಾಸ್ಥಾನೀ ಸಾಹಿತ್ಯವು ಜನತೆಯ ಸಾಹಿತ್ಯ ವಾಗಿದೆ. ಜನರ ಸುಖದುಃಖಗಳು, ಆಸೆ ನಿರಾಸೆಗಳು, ಉತ್ಸಾಹ ಖಿನ್ನತೆಗಳು ಮೊದಲಾದ ಜನರ ಭಾವಾವೇಗಗಳಿಗೆ ತುಂಬ ನಿಕಟವಾಗಿ ಪ್ರತಿಕ್ರಿಯಿಸಿದಂಥ, ದಾಖಲಿಸಿದಂಥ ಸಾಹಿತ್ಯವೇ ಅದಾಗಿದೆ. ರವೀಂದ್ರನಾಥ ಠಾಕೂರರ ಮಾತಿನಲ್ಲಿಯೇ ಹೇಳುವುದಾದರೆ,"ರಾಜಾಸ್ಥಾನದ ಸಮರ ಗೀತೆಗಳು ಅವನ್ನು ರಚಿಸಿದ ಜನತೆಯ ನೈಜ ಅಭಿವ್ಯಕ್ತಿಗಳಾಗಿವೆ; ಪ್ರಪಂಚದ ಯಾವುದೇ ಭಾಷೆ ಹಾಗೂ ಸಾಹಿತ್ಯಕ್ಕೆ ಅವು ಘನತೆಯನ್ನುಂಟು ಮಾಡಬಲ್ಲವು".

## ಜನಪದ ಕಥೆಗಳು

ರಾಜಾಸ್ಥಾನದಲ್ಲಿ ಮತ್ತೆ ಮತ್ತೆ ಹೇಳಲಾದ ಸಹಸ್ರಾರು ಜನಪದ ಕಥೆಗಳಿವೆ. ಅವುಗಳ ವಸ್ತು ವಿಷಯ ಸರ್ವವ್ಯಾಪಿಯಾಗಿದೆ. ಧರ್ಮ ಮತ್ತು ನೀತಿ, ಕಲಿತನ ಮತ್ತು ಪ್ರೀತಿ-ಪ್ರೇಮ, ಹಾಸ್ಯ ಹಾಗೂ ಕಾರುಣ್ಯ, ರಾಜರು ಹಾಗೂ ಅವರ ಪ್ರಜೆಗಳು, ದೇವರು, ದೆವ್ವಗಳು ಮತ್ತು ದುಷ್ಟಶಕ್ತಿಗಳು, ಕಳ್ಳರು ಹಾಗೂ ದರೋಡೆಕೋರರು, ಆದರ್ಶವಾದ ಹಾಗೂ ವಾಸ್ತವವಾದ-ಇವೆಲ್ಲವನ್ನೂ ಈ ಜನಪದ ಕಥೆಗಳು ವ್ಯಾಪಿಸಿವೆ. ಸುಪ್ರಸಿದ್ಧವಾದ ಕೆಲವು ಮುಖ್ಯವಾದ ಜನಪದ ಕಥೆಗಳು ಹಾಗೂ ಮೌಖಿಕ ಸಾಹಿತ್ಯದ ಈ ಪ್ರಕಾರದಲ್ಲಿ ಪ್ರಾತಿನಿಧಿಕವಾದುವೆಂದು ಪರಿಗಣಿತವಾದವು ಎಂದರೆ-ರಾಜಭೋಜ, ಸಯನಿ ಚರ್ನಿ, ಫೋಘಾನಂದ, ಜಸ್ಮ-ಓಡನಿ, ಚಂದನ ಮತ್ತು ಮಲಯಗಿರ್, ಚೌಬೋಲಿ, ಏಕಲ್ಗಿರ್ ದಧಲ ವರಹ, ಅಚಲದಾಸ್ ಖಿಚಿ, ಉಮಾ ಭಟಿಯಾನಿ, ಮೂಮಲ್ ಹಾಗೂ ಮಹಂದರ್, ಪಲಕ್ ದರ್ಯವ ಹಾಗೂ ಕುತಬಿದಿ ರಾಣಿಯವಾಗಿವೆ.[1]

ಯಾವುದೋ ಬಯಕೆ ಪೂರೈಸುವಂತಾಗಲು ಅಥವಾ ಪುಣ್ಯ ಗಳಿಸಲು ಉಪವಾಸ

---

[1] Swami Narottam Das, *Ek Parichaya, Sahyukta Rajasthan, monthly*, Jaipur, P.37

ಮಾಡುವುದು ರಾಜಾಸ್ಥಾನದಲ್ಲಿ ಜೀವನಮಾರ್ಗವಾಗಿದೆ ಎಂಬುದನ್ನು ಈ ಮೊದಲೇ ಉಲ್ಲೇಖಿಸಿದ್ದೇವೆ. ಪ್ರತಿಯೊಂದು ವ್ರತದ ಪ್ರಾಮುಖ್ಯ ಹಾಗೂ ಅವನ್ನು ಆಚರಿಸುವುದರ ಹಿಂದಿರುವ ಧ್ಯೇಯ ಇವುಗಳಿಗೆ ಸಂಬಂಧಿಸಿದಂತೆ ಕಥೆಗಳಿವೆ. ವಾರದ ಏಳು ದಿನಗಳ ಹಾಗೂ ಪ್ರಮುಖ ಹಬ್ಬ-ಹರಿದಿನಗಳ ಬಗ್ಗೆ ವೃತ್ತಾಂತಗಳು ಸುಪರಿಚಿತವಾಗಿವೆ; ಇವನ್ನು ಬಹುಪಾಲು ಮಹಿಳೆಯರೇ ಹೇಳಿಕೊಳ್ಳುವ, ತೀವ್ರ ಕುತೂಹಲದಿಂದ ಕೇಳುವ ಪರಿಪಾಠವಿದೆ.

ಮಕ್ಕಳಿಗಾಗಿ ಜಾನಪದ ಕಥೆಗಳ ಅಮೂಲ್ಯನಿಧಿಯೇ ಇದೆ; ಎಲ್ಲ ಮಕ್ಕಳ ಕಥೆಗಳಲ್ಲಿ ಪಾತ್ರಗಳು ಪ್ರಾಣಿ ಅಥವಾ ಪಕ್ಷಿಗಳಾಗಿದ್ದು, ಇವುಗಳ ಮೂಲಕ ನೀತಿ ಅಥವಾ ಜೀವನದ ಅನುಭವವನ್ನು ಸಂವಹನಿಸುವ ಅಂಶ ಗಮನಾರ್ಹವಾಗಿದೆ.

## ಗಾದೆಗಳು ಮತ್ತು ಸೂಕ್ತಿಗಳು

ಗಾದೆಗಳು ಮತ್ತು ಸೂಕ್ತಿಗಳು ಪ್ರಪಂಚದ ಎಲ್ಲೆಡೆಯಲ್ಲಿನ ಜನಪದದ ಅವಿಭಾಜ್ಯ ಅಂಗವಾಗಿದೆ; ಮೌಖಿಕ ಸಾಹಿತ್ಯದ ಈ ಪ್ರಕಾರಕ್ಕೆ ಭಾರತದಲ್ಲಿ ತುಂಬ ಪ್ರಾಚೀನ ಪರಂಪರೆಯೂ ಇದೆ. ನಾಣ್ನುಡಿ ಮತ್ತು ಸಾಮತಿಗಳಾಗಿ ಬಳಕೆಯಾಗುವ ಗಾದೆಗಳಲ್ಲಿ ಯುಗಯುಗಗಳ ಜ್ಞಾನ ಅಡಗಿರುತ್ತದೆ.

ಕನ್ಹಯಲಾಲ್ ಸಹಾಲ್‌ರವರು ರಾಜಾಸ್ಥಾನೀ ಗಾದೆಗಳ ವಿದ್ವತ್ಪೂರ್ಣ ಅಧ್ಯಯನ ಮಾಡಿರುವರು; ಈ ವಿಷಯ ಕುರಿತ ಅವನ ಗಮನಾರ್ಹ ಕೃತಿಯು ಅವನ್ನು ವಿವಿಧ ಶೀರ್ಷಿಕೆಗಳಲ್ಲಿ ವಿಭಜಿಸಿದೆ. ಆ ಪ್ರದೇಶ ಹಾಗೂ ಅದರ ಜನಪದದಷ್ಟೇ ರಾಜಾಸ್ಥಾನೀ ಗಾದೆಗಳು ತಮ್ಮ ವಸ್ತುವಿನಲ್ಲಿ ಶ್ರೀಮಂತವೂ ವಿಷಯದಲ್ಲಿ ವೈವಿಧ್ಯಮಯವೂ ಆಗಿವೆ ಎಂಬುದು ಗಮನಾರ್ಹ ಅಂಶವಾಗಿದೆ. ಇತಿಹಾಸ, ಆಳಿದ ಸಂತತಿಗಳು ಹಾಗೂ ಐತಿಹಾಸಿಕ ವ್ಯಕ್ತಿಗಳಿಂದ ಮೂಡಿರುವ ಗಾದೆಗಳಿವೆ. ನಗರಗಳು, ಪಟ್ಟಣಗಳು ಮತ್ತು ಹಳ್ಳಿಗಳು, ಕೋಟೆಕೊತ್ತಲಗಳು, ಬೆಟ್ಟಗುಡ್ಡಗಳು, ನದೀಕೊಳ್ಳಗಳು ಮೊದಲಾದುವಕ್ಕೆ ಸಂಬಂಧಿಸಿದ ಗಾದೆಗಳೂ ಇವೆ. ವಿವಿಧ ಸಮುದಾಯಗಳ ಗುಣಲಕ್ಷಣಗಳು, ಜನತೆಯ ಗುಣಾವಗುಣಗಳು ಮತ್ತು ಸಾಮಾಜಿಕ ವರ್ತನೆಯ ರೀತಿನೀತಿಗಳ ಬಗ್ಗೆ ಸೂಚಿಸಿ ಸಮಾಜವನ್ನು ಚಿತ್ರಿಸುವಂಥ ಗಾದೆಗಳೂ ಇವೆ. ಬೋಧಪ್ರದವಾದ, ಶಿಕ್ಷಣಾತ್ಮಕವಾದ, ಮತ್ತು ಮನೋವೈಜ್ಞಾನಿಕವಾದ ಹಲವು ಗಾದೆಗಳಿವೆ; ನಿರ್ದಿಷ್ಟ ಸಮುದಾಯಗಳ ಜನಪದ ನಂಬಿಕೆಗಳು, ಮೂಢನಂಬಿಕೆಗಳು ಹಾಗೂ ಶಕುನಗಳು ಸೇರಿದಂತೆ ದೇವರು, ತತ್ವ ಮೊದಲಾದುವಕ್ಕೆ ಸಂಬಂಧಿಸಿದ ಗಾದೆಗಳೂ ಇವೆ. ತತ್ವಶಾಸ್ತ್ರದ ಸೂಕ್ತಿಗಳಿಲ್ಲ; ಆದರೆ ವಿಧಿವಾದ, ಕರ್ತವ್ಯನಿಷ್ಠೆ ಹಾಗೂ ಕರ್ತವ್ಯ ಪರಿಪಾಲನೆಯನ್ನು ಒತ್ತಿಹೇಳುವಂತಹ ಗಾದೆಗಳಿವೆ; ಆತ್ಮಗಳ ದೇಹಾಂತರ ಸಾಹಸ ಹಾಗೂ ಸಹನೆಗೆ ಸಂಬಂಧಿಸಿದ ಗಾದೆಗಳೂ ಇಲ್ಲದಿಲ್ಲ.

ರಾಜಾಸ್ಥಾನದ ಜನತೆ ಅನಾದಿಕಾಲದಿಂದಲೂ ಪ್ರಕೃತಿಯ ವಿರುದ್ಧ ಸೆಣಸುತ್ತಿದ್ದು ಮಳೆಗಳು ಹಾಗೂ ಕೃಷಿ ಕಾರ್ಯಾಚರಣೆಗಳಿಗೆ-ಇವು ಆ ಪ್ರದೇಶದಲ್ಲಿ ಮಳೆಗಳನ್ನೇ ಸಂಪೂರ್ಣವಾಗಿ ಅವಲಂಬಿತವಾಗಿವೆ- ಸಂಬಂಧಿಸಿದಂತೆ ಗಾದೆಗಳು ಮತ್ತು

ಸೂಕ್ತಿಗಳ (ಕಾಲಜ್ಞಾನ ಎನ್ನಿ) ವಿಶ್ವಕೋಶವನ್ನೇ ವಾಸ್ತವವಾಗಿ ರೂಪಿಸಿವೆ. ಸೂರ್ಯ, ಚಂದ್ರ, ಗಾಳಿ, ಆಕಾಶ, ಮೋಡಗಳು, ಮಿಂಚು, ಬಿರುಗಾಳಿ ಮತ್ತ ಮಳೆ ಬರಿಸುವಂಥ ಅಥವಾ ಅದನ್ನು ತಡೆಯುವಂಥ ಇತರ ಎಲ್ಲ ನೈಸರ್ಗಿಕಾಂಶಗಳನ್ನು ಈ ಗಾದೆಗಳು ಪರಿಗಣಿಸಿವೆ. ಈ ಪರಿಸ್ಥಿತಿಯಲ್ಲಿ ಪ್ರಾಣಿಪಕ್ಷಿಗಳು ಹಾಗೂ ಕೀಟಗಳ ವರ್ತನೆಯನ್ನು ಕೂಡ ಸಂಪೂರ್ಣವಾಗಿ ಅಧ್ಯಯನ ಮಾಡಲಾಗಿದೆ. ಜನತೆ ಈ ಗಾದೆಗಳನ್ನು ರೂಪಿಸುವುದರ ಮೊದಲು ಪ್ರಕೃತಿಯನ್ನು ತುಂಬ ಸೂಕ್ಷ್ಮವಾಗಿ ವೀಕ್ಷಿಸಿದ್ದರು ಎಂಬುದು ಖಚಿತವಾಗುತ್ತದೆ.

ಗಾದೆಗಳ ಅಮೂಲ್ಯ ಭಂಡಾರವು ಋತುಗಳು, ಪ್ರಾಣಿಪಕ್ಷಿಗಳು, ಸಸ್ಯಸಂಪದ, ಕ್ರೀಡೆಗಳು ಮೊದಲಾದವುಗಳಿಗೆ ಸಂಬಂಧಿಸಿದಂತೆಯೂ ಅದೇ ಜ್ಞಾನರಾಶಿಯನ್ನು ಒಳಗೊಂಡಿರುತ್ತದೆ.

ರಾಜಾಸ್ಥಾನೀ ಗಾದೆಗಳ ವ್ಯಾಪ್ತಿ, ವೈವಿಧ್ಯ ಹಾಗೂ ವಿವಿಧ ಪರಿಸ್ಥಿತಿಗಳಲ್ಲಿ ಅವುಗಳ ಉಪಯುಕ್ತತೆಯನ್ನು ಸೂಚಿಸುವಂಥ ಕೆಲವು ಉದಾಹರಣೆಗಳನ್ನು ಈ ಮುಂದೆ ನೀಡಲಾಗಿದೆ.

## ಐತಿಹಾಸಿಕ

ಕಲ್ ಪರೇ ತೋ ಕುಂಭ ಧನಿ
ಮೇ ಬರ್ಸೇ ತೋ ಮಜೂರಿ ಲ್ಹಾನಿ

ದೇಶದಲ್ಲಿ ಕ್ಷಾಮ ಕಾಡಿದರೆ ಕುಂಭನೇ ಧಣಿ (ಪರಿಹಾರವನ್ನು ಒದಗಿಸುವವನು) ಮತ್ತು ಚೆನ್ನಾಗಿ ಮಳೆಯಾದರೆ ಉದ್ಯೋಗಾಭಾವವೇ ಇರುವುದಿಲ್ಲ ಎನ್ನುತ್ತಾರೆ, ಮೇವಾರದ ರಾಣಾ ಕುಂಭನ ಪ್ರಜೆಗಳು.

## ಋತುಗಳು

ಸಿಯಾಲೆ ಖಾತು ಭಲೋ ಉನಾಲೇ ಅಜ್ಮೇರ್
ನಗೀನೊ ನಿತ್ ಹಿ ಭಲೋ, ಸಾವನ್ ಬಿಕನೇರ್

ಋತುವಿನಲ್ಲಿ ಚಳಿಗಾಲ ಚೆನ್ನ, ಅಜ್ಮೇರದಲ್ಲಿ ಬೇಸಿಗೆ ಚೆನ್ನ; ನಗೌರಿನಲ್ಲಿ ವರ್ಷವಿಡೀ ಚೆನ್ನಾಗಿರುತ್ತದೆ; ಬಿಕನೀರಿನಲ್ಲಿ ಮಳೆ ಚೆನ್ನಾಗಿರುತ್ತದೆ.

## ಸ್ತ್ರೀಪುರುಷರು

ಮಾರ್ವಾರ್ ನರ್ ನೀಪಾಜೆ ನಾರಿ ಜೈಸಾಲ್ಮೆರ್
ತುರಿ ತೋ ಸಿಂಧಾನ್ ಸುತ್ರ ಕಶಾಲ್ ಬಿಕನೇರ್

ಸುಂದರಪುರುಷರು ಮಾರ್ವಾರದಲ್ಲಿ ಜನಿಸುತ್ತಾರೆ; ಸುಂದರಿಯರು ಜೈಸಾಲ್ಮೇರ್‌ನವರು; ಸಿಂಧ್‌ನ ಅಶ್ವಗಳು, ಬಿಕನೇರದ ಒಂಟೆಗಳು ಅತ್ಯುತ್ತಮ ವಾದುವು.

**ಸ್ಥಳ**

**ಜೇ ನ ದೇಖ್ಯೋ ಜೈಪುರಿಯೋ**
**ತೋ ಕಲ್ ಮೇ ಆಕರ್ ಕ್ಯಾ ಕರಿಯೋ**
ಜಯಪುರವನ್ನು ನೋಡದೆ ಇರುವ ವ್ಯಕ್ತಿ ಹುಟ್ಟಿಯೂ ಏನು ಪ್ರಯೋಜನ?
ಸಮರ್ ಪರ್ಯೊ ಸೋ ಲೂನ್
ಸಂಭಾರ ಸರೋವರದಲ್ಲಿ ಬೀಳುವುದೆಲ್ಲ ಉಪ್ಪು ಆಗುತ್ತದೆ.

**ಸಮುದಾಯಗಳು**

ಬಮನ್ ಹಾಥಿ ಚಾರ್ಯೊಂ ಭೀ ಮಾಂಗೇ
ಬ್ರಾಹ್ಮಣ ಆನೆಸವಾರಿ ಮಾಡುತ್ತಿದ್ದರೂ ಭಿಕ್ಷೆ ಬೇಡುತ್ತಲೇ ಇರುತ್ತಾನೆ.
ಆಮ್, ನಿಬೂ, ಬನ್ಯೋ
ಕಂತ್ ಭೀನೇಚಯ ಜನಿಯೋ
ಮಾವು, ನಿಂಬೆ ಮತ್ತು ಬನಿಯ–ಇವನ್ನು ಕತ್ತು ಹಿಡಿದು ಹಿಚಿಕಿದಾಗ ಮಾತ್ರವೇ ಸಗ್ಗುವುದು.

**ಪ್ರಾಪಂಚಿಕ ಜ್ಞಾನ**

ಜಾತ್ ಕಹೇ ಸುನ್ ಜಾತ್ನಿ ಏನ್ ಹಾವ್ರೋಂ ಮೇ ರಹ್ನು
ಉಂಟ್ ಬಿಲಾಯಿ್ ಲೇ ಗಯಿ, ಹಾಂಜಿ–ಹಾಂಜಿ ಕಹ್ನ
ಜಾಟ್‌ರವನು ತನ್ನ ಮಡದಿಗೆ ಹೀಗೆ ಹೇಳುತ್ತಾನೆ: ನಾವು ಈ ಹಳ್ಳಿಯಲ್ಲಿರಬೇಕು. ಹಾಗಾಗಿ ಒಂಟೆಯನ್ನು ಬೆಕ್ಕು ಎತ್ತಿತು ಎಂದರೂ ನಾವು ಒಪ್ಪಿಕೊಳ್ಳಬೇಕು.

**ಶಕುನಗಳು**

ತವರ್ ಕೀಜೆ ತರ್ಪನ, ಬುಧ್ ಕೀಜೆ ವ್ಯೋಪಾರ್
ಯಾವುದೇ ಹೊಸ ಕಾರ್ಯವನ್ನು ಶನಿವಾರ ಆರಂಭಿಸು; ಬುಧವಾರ ಮಾತ್ರವೇ ವ್ಯಾಪಾರ ಮಾಡು.

**ದಾನ**

ಗೌ ಕೋ ದಾನ್, ಗಂಗಾ ಕೋ ಅಸ್ನಾನ್
ಗ್ರಹಣಗಳ ಕಾಲದಲ್ಲಿ ದಾನವು ಗಂಗಾಸ್ನಾನ ಮಾಡಿದಂತೆ ಪುಣ್ಯಪ್ರದ

**ವಿಧಿ**

**ರೂಪ್ ಕಿ ರೋವೇ**
ಕರಮ್ ಕಿ ಖಾಯ

ಸ್ಫುರದ್ರೂಪಿ ಹುಡುಗಿ ಅಳುತ್ತಾಳೆ; ಕುರೂಪಿ ಹುಡುಗಿ ಚೆನ್ನಾಗಿ ಬಾಳುತ್ತಾಳೆ.

## ಮಳೆ

ಬಿಜ್ಞಸ್ ಪವನ್ ಸುರಿಯೋ ಬಾಜೇ
ಘಾಸಿ ಪಲಕ್ ಮಹೀ ಮೇ ಗಾಜೇ
ವಾಯುವ್ಯದಿಂದ ಗಾಳಿ ಬೀಸಿದರೆ ಮಳೆಯಂತೂ ಖಂಡಿತ
ಅಮ್ಮರ್ ರಚ್ಯೋ, ಮೆಹ್ ಮಚ್ಯೋ
ಕಡುಗೆಂಪು ಆಕಾಶ ಮಳೆಗೆ ವಿರಾಮ
ಅಗಸ್ತ್ ಉಗೋ, ಮೆಹ್ ಪೂಗೊ
ಅಗಸ್ತ್ಯ ನಕ್ಷತ್ರ ಉದಯಿಸಿದರೆ ಮಳೆಗಾಲ ಮುಗಿದಂತೆ.

## ಜನಪದ ಗೀತೆಗಳು

ರಾಜಾಸ್ಥಾನದ ಹೆಂಗಸರ ಜನಪದ ಗೀತೆಗಳು ಅವರ ಜೀವನದ ಬಗ್ಗೆ ಒಂದು ನಸುನೋಟವನ್ನು ಒದಗಿಸುವುದು ಮಾತ್ರವೇ ಅಲ್ಲ; ವಿನಿಫ್ರೆಡ್ ಬ್ರೈಸ್ ವ್ಯಕ್ತಪಡಿಸಿದಂತೆ ಈ ಮೂಕ ಜನತೆಯ ಭಾವನೆಗಳು, ಆಲೋಚನೆಗಳನ್ನು ಹೊರಗೆಡಹುತ್ತವೆ. ಪ್ರಾಚೀನ ಸುಸ್ಥಾಪಿತ ಗ್ರಾಮೀಣ ಪರಿಸರದಲ್ಲಿದ್ದಂಥ ಈ ಜನರು 'ತಾವು ಜೀವನವನ್ನು ಯಾವ ರೀತಿ ಗಮನಿಸಿದರು ಎಂಬ ಬಗ್ಗೆ ಯಾವುದೇ ಲಿಖಿತ ದಾಖಲೆಯನ್ನು ಎಲ್ಲಿಯೂ ಬಿಟ್ಟಿಲ್ಲ.....ಇದು ಹೆಣ್ಣಿನ ಹೃದಯದ ಬಹುಮಟ್ಟಿಗೆ ಸಾರ್ವತ್ರಿಕವಾದ ನೈಜ ಚಿತ್ರಣದ ಸಹಜ ಅಭಿವ್ಯಕ್ತಿಯಾಗಿದೆ....''

ಎಲ್ಲ ಕಡೆಯಂತೆಯೇ ಜನಪದ ಗೀತೆಗಳು ಹೆಣ್ಣಿನ ಜೀವನದ ಕಥೆಗಷ್ಟೇ ಸೀಮಿತವಾಗಿಲ್ಲ; ಅವು ಮತ್ತೂ ವಿಶಾಲ ವ್ಯಾಪ್ತಿಯುವಾಗಿವೆ. ಕೆಲಸದ ಹಾಡುಗಳಿವೆ, ಧಾರ್ಮಿಕ ಹಾಗೂ ಭಕ್ತಿಗೀತೆಗಳು (ಹರ್ಜಗಳು) ಇವೆ; ಇವು ಗದ್ಯದಲ್ಲಿ ಶೀಘ್ರಕಥೆಗಳೊಡನೆ, ರಣಗೀತೆಗಳು ಮತ್ತು ಕರುಣ ಹಾಗೂ ಶೋಕಗೀತೆಗಳು– ಇವುಗಳೊಡನೆ ಸ್ಪರ್ಧಿಸುತ್ತವೆ. ವಿಶಾಲವಾದ ಮರುಭೂಮಿ ಪ್ರದೇಶಗಳಿಗೆ ಪದೇ ಪದೇ ಭೇಟಿ ನೀಡುವಂಥ ಕ್ಷಾಮದ ಗೀತೆಗಳೂ ಇವೆ. ಶ್ರೇಷ್ಠ ಸಾಹಿತ್ಯಗಳ ವಿದ್ಯಾರ್ಥಿಯು ಕೂಡ ಈ ಜನಪದ ಗೀತೆಗಳಲ್ಲಿ ಒಂದು ಘಟನೆಯ ನಾಟಕೀಯ ರೀತಿಯ ಮಂಡನೆಯನ್ನು ಹಾಗೂ ಈ ಪ್ರದೇಶ ಮತ್ತು ಅದರ ಜನರಿಗೆ ವಿಶಿಷ್ಟಗುಣವಾಗಿರುವಂಥ ಅತಿಶಯೋಕ್ತಿಗಳನ್ನು ಮೆಚ್ಚುವಲ್ಲಿ ವಿಫಲನಾಗಲಾರ. ಬಡಕುಟೀರವನ್ನು 'ಅರಮನೆ' ಎಂದೂ, ಗಂಡ–ಹೆಂಡತಿಯನ್ನು 'ರಾಜ' ಮತ್ತು 'ರಾಣಿ' ಎಂದೂ ಸಂಬೋಧಿಸಿರುವುದುಂಟು.

ರಾಜಾಸ್ಥಾನೀ ಜನಪದ ಗೀತೆಗಳ ಪ್ರಕಾರವು ಸಾಮಾನ್ಯವಾಗಿ ದುಹ (ದ್ವಿಪದಿ)ಯಾಗಿದ್ದು, ಇದರಲ್ಲಿ ಪ್ರಾಸವಿರಬಹುದು, ಇಲ್ಲದಿರಬಹುದು. ಛಂದಸ್ಸು ಸರಳವಾಗಿದೆ; ಅನೇಕ ವೇಳೆ ಅನಿಯತವಾಗಿದೆ. ದ್ವಿಪದಿಯ ಸಾಲೊಂದನ್ನು ಅನೇಕ ವೇಳೆ ಪಲ್ಲವಿಯಾಗಿ ಬಳಸಲಾಗುತ್ತದೆ.

## ಲಾವಣಿಗಳು

ಲಾವಣಿಗಳು ಜನತೆಯ ಭಾವನೆಗಳು ಹಾಗೂ ಪ್ರೇರಣೆ ಪ್ರೇರೇಪಣೆಗಳ ಪ್ರಬಲ ಅಭಿವ್ಯಕ್ತಿಗಳಾಗಿವೆ; ಅವುಗಳ ಸೌಂದರ್ಯ, ಶಕ್ತಿಗಳು ಅವುಗಳ ಮೌಖಿಕ ಪರಂಪರೆಯಲ್ಲಿ ಅಡಗಿವೆ. "ಪ್ರತಿಯೊಂದನ್ನು (ಲಾವಣಿಯನ್ನು) ಬರೆದುಕೊಳ್ಳುವ ಕೃತ್ಯದಲ್ಲಿ ನೀವು ಈ ಲಾವಣಿಯನ್ನು ಕೊಲೆ ಮಾಡಲು ನೆರವಾಗುವಿರಿ ಎಂಬುದನ್ನು ನೀವು ನೆನಪಿನಲ್ಲಿಡಬೇಕು" ಎಂದು ಜಾನಪದ ವಿದ್ವಾಂಸರೊಬ್ಬರು ಯುಕ್ತವಾಗಿಯೇ ಹೇಳಿರುವರು. ಲಾವಣಿಗಳು ಮೌಖಿಕವಾಗಿರುವ ಕಾರಣ ಅವು ಜನಪದ ಜೀವನದ ಇಡೀ ಭಾವನಾತ್ಮಕ ವ್ಯಾಪ್ತಿಯನ್ನು ಒಳಗೊಂಡಿರುತ್ತವೆ ಹಾಗೂ ಶ್ರೇಷ್ಠ ಲಕ್ಷಣ ಅಥವಾ ಮಹಾನ್ ಆದರ್ಶವನ್ನು ಚಿತ್ರಿಸಲು ಪ್ರಯತ್ನಿಸುತ್ತವೆ. ಲಾವಣಿಯ ರಚನಕಾರ ಅಥವಾ ರಚನಕಾರರು, ಮಹಾಕಾವ್ಯ ಅಥವಾ ಕಾವ್ಯಾತ್ಮಕ ಕೃತಿಯ ಕವಿಯು ಯಾವ ಸೃಜನಾತ್ಮಕ ಪ್ರಚೋದನೆಯಿಂದ ಸ್ಫೂರ್ತಿಗೊಳ್ಳುವನೋ ಅದೇ ಪ್ರಚೋದನೆಯಿಂದ ಸ್ಫೂರ್ತಿ ಪಡೆಯುವನು(ರು). ರಾಜಾಸ್ಥಾನದ ಲಾವಣಿಗಳು ತಾವಾಗಿಯೇ ಪರಿಪೂರ್ಣವಾಗಿರುವುವು ಹಾಗೂ ಇದು ಜನಪದ ಸಾಹಿತ್ಯದ ಮುಖ್ಯ ಅಂಗವಾಗಿದೆ. ಅವುಗಳ ಸಾಹಿತ್ಯಿಕ ಕಲೆ ಹಾಗೂ ತಂತ್ರವು ದೃಶ್ಯಾತ್ಮಕ ಮತ್ತು ನಾಟಕೀಯ ಅಂಶಗಳ ಮಟ್ಟಿಗೆ ಹೇಳುವುದಾದರೆ ಪ್ರಶ್ನಾತೀತವಾಗಿದೆ. ಅವು ರಾಜಾಸ್ಥಾನದ ಸಮಾಜ ಮತ್ತು ಸಂಸ್ಕೃತಿಗೆ ಅತ್ಯಂತ ನಿಷ್ಠವಾದ ಹಾಗೂ ಯಥಾವತ್ತಾದ ರೀತಿಯಲ್ಲಿ ಅಭಿವ್ಯಕ್ತಿ ನೀಡುವುವು.

ಕೃಷ್ಣಕುಮಾರ್ ಶರ್ಮರವರು ತಮ್ಮ *ಸ್ಟಡೀ ಆಫ್ ರಾಜಾಸ್ಥಾನೀ ಬ್ಯಾಲಡ್*ಗಳಲ್ಲಿ ಅವುಗಳ ಕಥೆಗಳ ವಿನ್ಯಾಸವನ್ನು ಗುರುತಿಸಿ ಅವನ್ನು ಈ ಐದು ಪ್ರಮುಖ ಶೀರ್ಷಿಕೆಗಳಲ್ಲಿ ವರ್ಗೀಕರಿಸಿರುವರು: ಕಲಿತನದ ವೀರ ಲಾವಣಿಗಳು, ಪ್ರೇಮಲಾವಣಿಗಳು, ಕೌತುಕಕಾರಿ ಲಾವಣಿಗಳು, ಪುರಾಣಸಂಬಂಧವಾದ ಲಾವಣಿಗಳು ಮತ್ತು ತ್ಯಾಗವನ್ನು ಹಾಗೂ ಪ್ರಾಪಂಚಿಕ ಮೋಹದ ನಿರಸನವನ್ನು ಪ್ರತಿಪಾದಿಸುವ ಲಾವಣಿಗಳು.

ಸ್ಪಷ್ಟವಾಗಿಯೇ ಇರುವ ಐತಿಹಾಸಿಕ ಕಾರಣಗಳಿಂದಾಗಿ ರಾಜಾಸ್ಥಾನದ ಲಾವಣಿಗಳಲ್ಲಿ ವೀರ ಲಾವಣಿಗಳಿಗೆ ಮುಖ್ಯವಾದ ಸ್ಥಾನವಿದೆ. ಅವು, ಧರ್ಮಪ್ರತಿಪಾದನೆಗಾಗಿ ಹಾಗೂ ಜೀವದಾನದಂಥ ಆದರ್ಶಗಳನ್ನು ಎತ್ತಿ ಹಿಡಿಯಲು ತಮ್ಮ ಪ್ರಾಣತ್ಯಾಗ ಮಾಡಿದಂಥ ನಾಯಕರಿಗೆ ಸಂಬಂಧಿಸಿದುವಾಗಿದೆ. ಈ ನಾಯಕರು ಬಹು ಮಟ್ಟಿಗೆ ಐತಿಹಾಸಿಕ ವ್ಯಕ್ತಿಗಳಾಗಿರುವರಾದರೂ ಆ ಘಟನೆಗಳ ಐತಿಹಾಸಿಕತೆಯನ್ನಾಗಲೀ, ಅವು ಯಾವ ಕಾಲದಲ್ಲಿ ನಡೆದುವೆಂಬುದನ್ನಾಗಲೀ ಖಚಿತಪಡಿಸಿಕೊಳ್ಳುವುದು ಸಾಧ್ಯವಿಲ್ಲ. ಇದಕ್ಕೆ ಬಹು ಸರಳವಾದ ಕಾರಣವೆಂದರೆ, ಪರಿಪೂರ್ಣ ಮನಸ್ಸು ಮಾನವ ಮತ್ತು ಘಟನೆಗಳನ್ನು ಪ್ರಧಾನ ವಸ್ತುವನ್ನಾಗಿಯೂ ಕಾಲವನ್ನು ಅಪ್ರಧಾನ ಅಂಶವನ್ನಾಗಿಯೂ ಪರಿಗಣಿಸಿರುವುದಾಗಿದೆ.

ರಾಜಾಸ್ಥಾನದ ಅತ್ಯಂತ ಜನಪ್ರಿಯ ಕಲಿತನ ಲಾವಣಿಗಳೆಂದರೆ ಬಗ್ಡಾವತ್,

ಪಾಬುಜಿ, ಗೋಗಾಜಿ, ದುಂಗಾಜಿ, ಜವಾಹರ್ಜಿ, ತೇಜಾಜಿ ಹಾಗೂ ಗಲಲೆಂಗ್‌ರ ಕಥೆಗಳನ್ನು ಹೇಳುವಂಥವಾಗಿವೆ.

ಬಗ್ಡಾವತ್ ಲಾವಣಿಯನ್ನು ದೇವ್ ನಾರಾಯಣದ ಭೋಪಾಗಳು ಹಾಡುವರು. ಭೋಪಾಲಾವಣಕಾರರು ಇದರಲ್ಲಿ ಪರಿಣತರಾಗಿರುವರು. ಇದು ಅಜ್ಮೀರದ ಬಿಸಲ್‌ದೇವ ಚೌಹಾನನ ಸಮಕಾಲೀನರಾಗಿದ್ದ ಬಘ್ಷಿಯ ಇಪ್ಪತ್ತನಾಲ್ಕು ಪುತ್ರರ ಕಥೆಯಾಗಿದೆ. ಈ ಇಪ್ಪತ್ತನಾಲ್ಕು ಜನ ಸೋದರರು ಭಿಲ್ವಾರಾ ಜಿಲ್ಲೆಯ ಅಸಿಂಡ್‌ನ ಸಮೀಪ ರಾಣಾನ ವಿರುದ್ಧ ಮಾಡಿದ ನಿರ್ಣಾಯಕ ಕದನದಲ್ಲಿ ಹೋರಾಡಿದರು; ಈ ಲಾವಣಿ ಅವರನ್ನು ರಾಜಪ್ರಭುತ್ವದ ವಿರುದ್ಧ ಜನರ ಸಂರಕ್ಷಕರೆಂದು ಪ್ರಶಂಸಿಸುತ್ತದೆ. ಇದೇ ರೀತಿಯಲ್ಲಿ, ಪಾಬುಜಿಯ ಲಾವಣಿಯು ಅಗ್ನಿಸಾಕ್ಷಿಯಾದ ಸಪ್ತಪದಿಯನ್ನು ಪೂರೈಸಲು ನಿರಾಕರಿಸಿ, ತನ್ನ ವಚನಪಾಲನೆ ಮಾಡಿ, ಪ್ರಾಣಾರ್ಪಣೆ ಮಾಡಿದ ವೀರನ ಕಥೆಯಾಗಿದೆ. ಈ ಲಾವಣಿಯು ಜೋಧಪುರ, ಜೈಸಾಲ್ಮರ್, ಜೈಪುರ ಹಾಗೂ ಶೇಖಾವತಿಯ ಪ್ರದೇಶಗಳಲ್ಲಿ ವಿಶೇಷವಾಗಿ ಜನಪ್ರಿಯವಾಗಿದೆ. ಈ ಲಾವಣಿಗಳನ್ನು ಹಾಡುವ ಲಾವಣಿಕಾರರನ್ನು ಪಾಬುಜಿಯ ಭೋಪಾಗಳೆನ್ನುವರು.

ಈ ಲಾವಣಿಯ ನಾಯಕ, ಐತಿಹಾಸಿಕ ವ್ಯಕ್ತಿಯಾದ ಪಾಬುಜಿ ಹದಿಮೂರನೆಯ ಶತಮಾನದಲ್ಲಿದ್ದವನೆಂದು ಹೇಳಲಾಗಿದೆ. ಆತ ಖಿಚಿ ಜಯಲನ ವಿರುದ್ಧ ಹೋರಾಡುತ್ತ ಸಂವತ್ 1381ರಲ್ಲಿ ಮಡಿದ.

ಈ ಲಾವಣಿಯು ರಾಜಾಸ್ಥಾನೀ ಸಂಸ್ಕೃತಿಯ ಪ್ರಾತಿನಿಧಿಕ ಲಾವಣಿಯಾಗಿದ್ದು, ಕಾವ್ಯಕೃತಿಯಾಗಿ ಉತ್ತಮವಾಗಿದೆ.

ಸರ್ಪಗಳ ದೈವ ಗೋಗಾಜಿಯು ಮತ್ತೊಂದು ಲಾವಣಿಯ ನಾಯಕ. ಈ ಲಾವಣಿ ಆತನ ಜೀವನದ ಕಥೆಯನ್ನು ವಿವರಿಸುತ್ತದೆ; ಸಮಾಧಿಯಾಗಬಯಸುವ ಅವನ ಅಪೇಕ್ಷೆಯೊಡನೆ ಮುಕ್ತಾಯಗೊಳ್ಳುತ್ತದೆ. ಮುಸಲ್ಮಾನನು ಮಾತ್ರವೇ ಸಮಾಧಿ ಹೊಂದಬಲ್ಲವನೆಂದು ಭೂಮಿಯು ಹೇಳಿದುದರಿಂದ ಗೋಗಾಜಿ ಮುಸಲ್ಮಾನನಾಗಲು ಕಲ್ಮವನ್ನು ಪಠಿಸಿ, ಸಮಾಧಿ ಹೊಂದಿದ. ಗೋಗಾನನ್ನು ಪೀರನೆಂದು ಹಿಂದೂಗಳು ಮತ್ತು ಮುಸಲ್ಮಾನರು ಪೂಜ್ಯಭಾವದಿಂದ ಕಾಣುತ್ತಾರೆ.

ತೇಜಾಜಿಯ ಲಾವಣಿಯನ್ನು ಸಾಮಾನ್ಯವಾಗಿ ಮಳೆಗಾಲದಲ್ಲಿ ಒಬ್ಬ ವ್ಯಕ್ತಿಯೋ ಅಥವಾ ಗುಂಪೋ ಹಾಡುತ್ತದೆ. ಲಾವಣಿ ಹಾಡುವ ಸ್ಥಳದಲ್ಲಿ ತೇಜಾಜಿಯ ಚಿತ್ರವನ್ನು ಇಟ್ಟಿರಲಾಗುವುದು. ತೇಜಾಜಿಯು ಬಡ ಕೃಷಿಕರ ಕುಟುಂಬದಲ್ಲಿ ಜನಿಸಿದರೂ ಆತ ಧೈರ್ಯ, ಆತ್ಮಗೌರವ, ಎದೆಗಾರಿಕೆ ಹಾಗೂ ಇತರ ಹಲವು ಸದ್ಗುಣಗಳ ಪ್ರತೀಕವಾಗಿದ್ದಾನೆ.

ದುಂಗ್‌ಜೀ–ಜವಾಹರಜಿಯ ವೀರಲಾವಣಿಯು ಜೈಪುರ, ಶಿಖರ್, ಟೋಂಕ್, ನೆವಾಯಿ, ಕೋಟ ಹಾಗೂ ಜೋಧ್‌ಪುರ ಪ್ರದೇಶಗಳಲ್ಲಿ ಜನಪ್ರಿಯವಾಗಿದೆ. ದುಂಗ್‌ಜಿಯು ಶಿಖರ್ ಜಿಲ್ಲೆಯ ಬಥೋಥದ ಜಾಗೀರ್ದಾರ ಹಾಗೂ ಜವಾಹರ್‌ಜಿಯು ಅವನ ಸೋದರಳಿಯ. ಈಸ್ಟ್ ಇಂಡಿಯಾ ಕಂಪೆನಿಯ ಮೊದಲ

ವರ್ಷಗಳಲ್ಲಿ ಬ್ರಿಟಿಷರು ಅನುಸರಿಸಿದ ನೀತಿಯು ರಾಜರ ಪರವಾದುದೂ, ಜಾಗೀರ್ದಾರರ ವಿರುದ್ಧವಾದುದೂ ಆಗಿತ್ತು. ಇದರಿಂದ ದುಂಗ್‌ಜೀ ಕೆರಳಿದವನಾಗಿ ತನ್ನ ಸೋದರಳಿಯನೊಡನೆ ಜೀವನವಿಡೀ ಬ್ರಿಟಿಷರ ವೈರಿಯಾದನು.

1837ರಲ್ಲಿ ಶಿಖರ್‌ನ ಸಮೀಪ ಸಿಂಗ್ರಾವತ್ ಕೋಟೆಯಲ್ಲಿ ದುಂಗ್‌ಜಿಯನ್ನು ಸುತ್ತುಗಟ್ಟಲಾಯಿತು; ಆದರೆ ಅಂತಿಮವಾಗಿ ಅವನು ಹೊರಬರುವುದು ಸಾಧ್ಯವಾಗಿ, ತನ್ನನ್ನು ದ್ರೋಹಿ ಬಂಧುವೊಬ್ಬ ವೈರಿಗಳಿಗೆ ಹಿಡಿದುಕೊಡುವವರೆವಿಗೂ ತನ್ನ ಗೆರಿಲ್ಲಾಗಳ ನೆರವಿನಿಂದ ಬಹು ಸಮಯ ಬ್ರಿಟಿಷರನ್ನು ಪೀಡಿಸಿದ. ಅವನನ್ನು ಆಗ್ರಾದ ಕೋಟೆಯಲ್ಲಿ ಬಂಧಿಸಲಾಗಿತ್ತು; ಆದರೆ ಜಾಟನಾದ ಲೋಟ್ಯ ಮತ್ತು ಮೀನಾ ಆದ ಕರ್ನಿಯ ಎಂಬ ಇಬ್ಬರು ಸಹಚರರ ನೆರವಿನಿಂದ ಮತ್ತೆ ತಪ್ಪಿಸಿಕೊಂಡ. ತನ್ನ ಅನುಚರರನ್ನು ಸಂಘಟಿಸಿ, ಅಜ್ಮೀರದ ಸಮೀಪ ನಸೀರಬಾದಿನ ಬ್ರಿಟಿಷ್ ಕಂಟೋನ್ಮೆಂಟನ್ನು ಕೊಳ್ಳೆಹೊಡೆದ. ದುಂಗ್‌ಜಿ ಹಾಗೂ ಜವಾಹರ್‌ಜಿಯನ್ನು ಸೆರೆಹಿಡಿಯಲು ಕಳುಹಿಸಲಾದಂಥ ದೊಡ್ಡ ಬ್ರಿಟಿಷ್ ಪಡೆಯು ಬಿಕನೀರಿನ ಸಮೀಪ ಘರ್ಸಿಯಾರಿನಲ್ಲಿ ಅವರನ್ನು ಮುತ್ತಿತು. ಜವಾಹರ್‌ಜಿ ತಪ್ಪಿಸಿಕೊಂಡು, ಬಿಕನೀರನ್ನು ತಲುಪಿದ. ಬಿಕನೀರಿನಲ್ಲಿ ಮಹಾರಾಜ ರತನ್‌ಸಿಂಗ್ ಅವನಿಗೆ ಆಶ್ರಯ ನೀಡಿದ; ತೀವ್ರ ಒತ್ತಡ ತಂದರೂ ಕೂಡ ಅವನನ್ನು ಬ್ರಿಟಿಷರ ವಶಕ್ಕೆ ಒಪ್ಪಿಸಲು ನಿರಾಕರಿಸಿದ. ಜೋಧ್‌ಪುರ ಸೇನೆಯಿಂದ ಸೆರೆಹಿಡಿಯಲ್ಪಟ್ಟಿದ್ದ ದುಂಗ್‌ಜಿಯನ್ನು ಮಹಾರಾಜ ತಖತ್ ಸಿಂಗ್‌ನಿಗೆ ಅಪಮಾನ, ಕ್ಲೇಶಗಳುಂಟಾಗುವಂತೆ ಬ್ರಿಟಿಷರ ವಶಕ್ಕೆ ಒಪ್ಪಿಸಲಾಯಿತು. ಕೊನೆಗೆ ಜೋಧಪುರಕ್ಕೆ ವಾಪಸು ಕಳುಹಿಸಲಾಯಿತು; ತನ್ನ ಉಳಿದ ಆಯುಷ್ಯವನ್ನು ಅಲ್ಲಿಯೇ ಕಳೆದ. ಆದಾಗ್ಯೂ ಜವಾಹರಜಿಯು ಬಿಕನೀರಿನಲ್ಲಿ ಉಳಿದುಕೊಂಡ.

ಜನಪ್ರಿಯ ಲಾವಣಿಯು ದುಂಗ್‌ಜಿಯನ್ನು ಡಕಾಯಿತನೆಂದಾಗಲೀ ದೇಶಭ್ರಷ್ಟನೆಂದಾಗಲೀ ಗುರುತಿಸುವುದಿಲ್ಲ. ಸಾಹಸದ ಅದಮ್ಯ ಉತ್ಸಾಹ, ಅಸೀಮ ಧೈರ್ಯ ಹಾಗೂ ವಿಶಿಷ್ಟ ಕಲಿತನಗಳಿಂದೊಡಗೂಡಿದ ರಜಪೂತ ನಾಯಕ ಎಂದು ಚಿತ್ರೀಕರಿಸಲಾಗಿದೆ. ಆತನಿಗೆ ತನ್ನ ಸ್ವಹಿತಾಸಕ್ತಿಯಲ್ಲ ಮುಖ್ಯವಾಗಿದ್ದದ್ದು; ಬಡವರು ಹಾಗೂ ದೀನದಲಿತರ ಹಿತಾಸಕ್ತಿಗಳ ಬಗ್ಗೆ ತೀವ್ರ ಕಾಳಜಿಯಿತ್ತು. ಆಗ್ರಾ ಕೋಟೆಯ ಸೆರೆಮನೆಯಲ್ಲಿ, ತನ್ನ ಮಿತ್ರ ಲೋಟ್ಯ ಜಾಟ್ ತನ್ನ ಸರಪಣಿಗಳನ್ನು ಕತ್ತರಿಸಿ ಹಾಕುವುದಾಗಿ ಹೇಳಿದಾಗ, ಆತ ತಮ್ಮ ತಾಯಿಯರು ಹಾಗೂ ಸೋದರಿಯರ ಸುದೀರ್ಘ ಅಗಲಿಕೆ ಹಾಗೂ ಬಂಧನದಿಂದ ರೋದಿಸುತ್ತಿರುವಂಥ ತನ್ನ ಎಪ್ಪತ್ತೆರಡು ಅನುಯಾಯಿಗಳನ್ನು ಮೊದಲು ಮುಕ್ತಗೊಳಿಸುವಂತೆ ಸೂಚಿಸುತ್ತಾನೆ.

ದುಂಗ್‌ಜಿ ಜವಾಹರ್‌ಜಿ ಲಾವಣಿಯು ಜೈಪುರ ಹಾಗೂ ಶೇಖಾವತಿ ಪ್ರದೇಶಗಳಲ್ಲಿ ಜನಪ್ರಿಯವಾಗಿರುವಂತೆ ಗಲಾಲೆಂಗ್ ಲಾವಣಿಯು ಬಗರ್ ಪ್ರದೇಶದಲ್ಲಿ (ದುಂಗರ್‌ಪುರ ಬನ್‌ಸ್ವಾರ) ಜನಪ್ರಿಯವಾಗಿದೆ. ಗಲಾಲೆಂಗ್ ಎಂಬುದು ಗುಲಾಬ್‌ಸಿಂಗ್ ಚೌಹಾನ್ ಎಂಬುವವನ ಜನಪ್ರಿಯ ಹೆಸರು. ಈತ ಕದಾನದ ಪರ್ಮಾರನ ವಿರುದ್ಧ, ಕಲಿತನದಿಂದ ಕಾದಾಡಿ ಕದನದಲ್ಲಿ ಗೆದ್ದವನು. ಈ ಲಾವಣಿ

ಯನ್ನು ಏಕತಾರಿಯ ಶ್ರುತಿಯಲ್ಲಿ, ಕಾವಿ ಧರಿಸಿದ ಜೋಗಿಗಳು ಹಾಡುತ್ತಾರೆ. ಈ ಲಾವಣಿಯು ಇತಿಹಾಸವನ್ನು ಆಧರಿಸಿದ್ದರೂ ಇದು ಕೇವಲ ಐತಿಹಾಸಿಕ ಸಂಗತಿಗಳಿಗೆ ಮಾತ್ರವೇ ಸೀಮಿತವಾಗದೆ ಗಲಾಲೆಂಗ್‌ನನ್ನು ನಾಯಕನನ್ನಾಗಿಯೂ ವೀರ, ಬಲಿಷ್ಠ ಹಾಗೂ ದೃಢ ನಿರ್ಧಾರದ ವ್ಯಕ್ತಿಯನ್ನಾಗಿಯೂ ಚಿತ್ರಿಸುತ್ತದೆ.

ರಾಜಾಸ್ಥಾನದಲ್ಲಿ ಹಾಡುವ ಮತ್ತು ಕೇಳಿ ಬರುವ ಪ್ರೇಮ ಲಾವಣಿಗಳ ಪೈಕಿ ಧೋಲ–ಮಾರು, ಜಲಾಲ್–ಬೂಬ್ನ, ನಾಗಜಿ–ನಾಗವಂತಿ ಮತ್ತು ಸೋರಥ್ ಲಾವಣಿಗಳು ಜನಪ್ರಿಯವಾಗಿವೆ. ಅವು ಬಹುಮಟ್ಟಿಗೆ ದುಹ ಪ್ರಕಾರದಲ್ಲಿವೆ ಯಾದರೂ ರಾಗಗಳು ಪ್ರತಿಯೊಂದು ಲಾವಣಿಗೂ ವಿಶಿಷ್ಟವಾಗಿರುತ್ತವೆ. ಜಲಾಲ್–ಬೂಬ್ನ ಲಾವಣಿಯನ್ನು ಜೈಸಾಲ್ಮೆರ್, ಮಾಂಡ್ ಮತ್ತು ಸೋರಥ್‌ನಲ್ಲಿ ಸೋರ್ತ್‌ನಲ್ಲಿ ಹಾಡಿದರೆ, ಧೋಲಮಾರು ಮತ್ತು ನಾಗಜಿ–ನಾಗವಂತಿಯನ್ನು ಕ್ರಮವಾಗಿ ಮಾರು ಮತ್ತ ರಾಜಾಸ್ಥಾನೀ ಮಾಂಡ್ ರಾಗಗಳಲ್ಲಿ ಹಾಡಲಾಗುವುದು.

ಧೋಲ–ಮಾರು ಲಾವಣಿಯೇ ಅತ್ಯಂತ ಜನಪ್ರಿಯ ಪ್ರೇಮ ಲಾವಣಿಯಾಗಿದೆ. ಇದರ ವ್ಯತ್ಯಯರೂಪಗಳು ರಾಜಾಸ್ಥಾನದ ಹೊರಗಡೆ ಚತ್ತೀಸ್‌ಗರ್ ಹಾಗೂ ಬ್ರಜ್ ಪ್ರದೇಶಗಳಲ್ಲಿಯೂ ಇವೆ. ಚತ್ತೀಸ್‌ಗರ್‌ದ ಪಾಠಾಂತರದಲ್ಲಿ ಧೋಲನ ತಂದೆ ನರ್ವುಲ್‌ನ ದೊರೆ ನಲ. ಮಾರು ಪಿಂಗಳದ ದೊರೆ ಬೈನನ ಮಗಳು. ಧೋಲ–ಮಾರು–ಇವರಿಗೆ ಶೈಶವಾವಸ್ಥೆಯಲ್ಲಿಯೇ ವಿವಾಹವಾಗುತ್ತದೆ. ರೇವಾ ಎಂಬ ಮಾಟಗಾತಿಯ ಭಯದಿಂದಾಗಿ ನಲನು ಧೋಲನನ್ನು ಬಚ್ಚಿಟ್ಟಿರುತ್ತಾನೆ. ಒಂದು ದಿನ ಧೋಲ ಬೇಟೆಗೆ ಹೋಗಿ ರೇವಾಳ ತೋಟದಲ್ಲಿ ಅವಳ ಗಿಣಿಯನ್ನು ಕೊಲ್ಲುತ್ತಾನೆ. ಗಿಣಿಯನ್ನು ಬದುಕಿಸಿಕೊಡುವಂತೆ ಧೋಲನನ್ನು ರೇವಾ ಕೇಳುತ್ತಾಳೆ. ಆದರೆ ಧೋಲನಿಗೆ ಅದು ಸಾಧ್ಯವಾಗುವುದಿಲ್ಲ. ಧೋಲ ತನ್ನನ್ನು ಮದುವೆಯಾಗ ಬೇಕೆಂಬ ಷರತ್ತಿನ ಮೇಲೆ ಅವಳು ಗಿಣಿಗೆ ಮತ್ತೆ ಜೀವ ನೀಡುತ್ತಾಳೆ. ಅನಂತರ ಧೋಲ ರೇವಾಳ ಮನೆಯಲ್ಲಿ ಅವಳೊಡನೆ ಇರುತ್ತಾನೆ. ವಿರಹವೇದನೆ ಯನ್ನು ತಾಳಲಾರದ ಮಾರು ಗಿಣಿಯ ಮೂಲಕ ಧೋಲನಿಗೆ ಸಂದೇಶ ಕಳುಹಿಸು ತ್ತಾಳೆ. ಧೋಲ ಆಕೆಯನ್ನು ಭೇಟಿಯಾಗಲು ಬಂದು, ಅಂತಿಮವಾಗಿ ಪಿಂಗಲದ ದೊರೆಯಾಗುತ್ತಾನೆ. ಅವನು ರೇವಾಳಲ್ಲಿಗೆ ಮರಳಿಹೋಗುವುದೇ ಇಲ್ಲ.

ಭ್ರಜದಲ್ಲಿ, ಧೋಲ–ಮಾರು ಲಾವಣಿಯು ನಳ–ದಮಯಂತಿ ಕಥೆಯ ಜನಪದ ರೂಪವಾಗಿದೆ.

ಜಲಾಬ–ಬೂಬ್ನ ಲಾವಣಿಯು ವಾಚಿಕವೂ ಲಿಖಿತವೂ ಆಗಿದೆ. ವಾಚಿಕ ಪ್ರಕಾರದಲ್ಲಿ ಅದು ದುಃಖಾಂತವಾದರೆ ಲಿಖಿತ ಪ್ರಕಾರದಲ್ಲಿ, ನಾಯಕ–ನಾಯಕಿ ಯರನ್ನು ಸಮಾಧಿಯಿಂದ ಶಂಕರ–ಪಾರ್ವತಿಯರು ಮರಳಿ ಜೀವಂತರಾಗಿಸು ವುದರೊಡನೆ ಅದು ಸುಖಾಂತವಾಗಿದೆ. ಸಾಮಾನ್ಯವಾಗಿ ದುಃಖಾಂತ ಪ್ರಕಾರವನ್ನು ಸಾರಂಗಿಯ ಪಕ್ಕವಾದ್ಯದಲ್ಲಿ ಪ್ರಲಾಪದ ರೀತಿ ಇಬ್ಬರು ಹಾಡುತ್ತಾರೆ.

ಈ ಲಾವಣಿಯ ಮೂಲ ಮುಸ್ಲಿಂ ಸಂಸ್ಕೃತಿಯಲ್ಲಿರಬಹುದು; ಅದರ ಪ್ರೇಮಕಥೆ ಹಿಂದೂ ಪರಂಪರೆಗಿಂತ ಭಿನ್ನವಾಗಿದೆ. ಭೌತಿಕ ಆಕರ್ಷಣೆಯಿಂದ ಉಗಮಗೊಳ್ಳುವ

ಜಲಾಲ್ ಮತ್ತು ಬೂಬ್ನರ ಪ್ರಣಯವು ಅಂತಿಮವಾಗಿ ದೇಹವೆರಡಾದರೂ ಆತ್ಮವೊಂದು ಎಂಬ ಹಂತ ತಲುಪಿ, ಅವರು ಅಗಲಿರುವುದು ಅಸಾಧ್ಯವಾಗುತ್ತದೆ. ಜನತೆಯ ದರ್ಶನಕ್ಕೆ ಅನುಗುಣವಾಗಿ ಈ ಲಾವಣಿಯ ಕತೆಯು ನಿರೀಕ್ಷಿಸಲಾಗದಂಥ ವಿಧಿಯ ಸುತ್ತ ಹೆಣೆದಿರುವುದಾಗಿದೆ. ಜಲಾಲ್ ಮತ್ತು ಬೂಬ್ನ ಪರಸ್ಪರ ನಿಷ್ಠೆಯಿಂದಿದ್ದರು: ಆದರೆ ವಿಧಿವಿಲಾಸವೇ ಬೇರೆಯಾಗಿತ್ತು. ದುರಾಸೆಯ ಖಾಜಿಯು ಬೂಬ್ನಳ ವಿವಾಹವನ್ನು ವೃದ್ಧ ರಾಜನೊಡನೆ ನಿಗದಿಪಡಿಸುತ್ತಾನೆ.

ಮುಸ್ಲಿಂ ಪಾತ್ರವರ್ಗ ಹಾಗೂ ಸಂಸ್ಕೃತಿಯಿಂದೊಡಗೂಡಿದ ಈ ಲಾವಣಿಯನ್ನು ಹಿಂದೂ ಮಾದರಿಗಳ ಚೌಕಟ್ಟಿನಲ್ಲಿ ಅಭಿವ್ಯಕ್ತಿಗೊಳಿಸಲಾಗಿದ್ದು, ಇದು ರಾಜಾಸ್ಥಾನದ ಸಂಕೀರ್ಣ ಹಾಗೂ ಸಾಂಸ್ಥಿಕ ಜನಪದ ಜೀವನದ ಪ್ರತೀಕವಾಗಿದೆ.

ನಾಗಜಿ–ನಾಗವತಿಯ ಲಾವಣಿ ಕೂಡ ಧೈರ್ಯವಂತನಾದ ಹಾಗೂ ವಿರಹಿಯಾದ ನಾಯಕ ಹಾಗೂ ತನ್ನ ಕನಸುಗಳ ಮತ್ತು ಆಯ್ಕೆಯ ವ್ಯಕ್ತಿಯನ್ನಲ್ಲದೆ ಬೇರೆ ಯಾರನ್ನೇ ಆಗಲಿ ಮದುವೆಯಾಗಲು ನಿರಾಕರಿಸುವಂಥ ಅನುರಕ್ತ ನಾಯಕಿ–ಇವರ ಕಥೆಯೇ ಆಗಿದೆ. ಸೊರಥ್ ಎಂಬುದು ಸೌರಾಷ್ಟ್ರದ ಸುಂದರಿಯೊಬ್ಬಳು ಮೂವರೊಡನೆ ಶಯ್ಯಾಸುಖ ಪಡೆದರೂ ಪಾತಿವ್ರತ್ಯ ಹಾಗೂ ಆದರ್ಶ ಸ್ತ್ರೀತ್ವದ ಪ್ರತೀಕವಾದ *ಸತಿಯಾಗಿ* ಉಳಿಯುವಂಥ ಕಥೆಯಾಗಿದೆ.

ರೋಮಾಂಚಕ ಲಾವಣಿಗಳ ಪೈಕಿ ನಿಹಾಲ್ದೆ–ಸುಲ್ತಾನನ ಕಥೆ, ಅದರ ನಾಯಕ ಸುಲ್ತಾನ ಹಾಗೂ ಅದರಲ್ಲಿನ ಅತಿ ಮಾನುಷ ಅಂಶಗಳಿಂದಾಗಿ ವಿಶೇಷವಾಗಿ ಉಲ್ಲೇಖಾರ್ಹವಾಗಿದೆ. ರಾಜಾಸ್ಥಾನದ ಇತಿಹಾಸದ ಪರಿಚಯವಿರುವಂಥವರಿಗೆ ಚಿತ್ತೋರಗರಿನ ಮೂರು ಶಕಗಳ ಬಗ್ಗೆ ಅರಿವಿದೆ; ಆದರೆ ಈ ಲಾವಣಿಯ ನಾಯಕ ಸಾಯುವವರೆಗೆ ಐವತ್ತೆರಡು 'ಶಕ'ಗಳನ್ನು ಅಥವಾ ಯುದ್ಧಗಳನ್ನು ಮಾಡುತ್ತಾನೆ. ಸುಲ್ತಾನನು ಸೌಂದರ್ಯ, ಶಕ್ತಿ ಹಾಗೂ ಪೌರುಷದ ಸಾಕಾರಮೂರ್ತಿಯಾಗಿದ್ದಾನೆ. ಪ್ರಕೃತಿ, ಯುದ್ಧಗಳು ಮತ್ತು ನಗರಗಳ ಉಜ್ವಲವಾದ ವಿವರಣೆಗಳಿಂದ ಕೂಡಿರುವ ಈ ಲಾವಣಿಯು ದುಷ್ಟ ದಮನ, ಶಿಷ್ಟರಕ್ಷಣೆಯನ್ನು ನೆಲೆಗೊಳಿಸುತ್ತದೆ. *ರಾಮಾಯಣ*ದಲ್ಲಿನ ರಾಮನಂತೆ ಸುಲ್ತಾನನು ಆದರ್ಶವ್ಯಕ್ತಿ ಹಾಗೂ ಆದರ್ಶ ದೊರೆ, ಏಕಪತ್ನೀವ್ರತಸ್ಥ, ಪೂರ್ಣ ಧೈರ್ಯವಂತ, ದಾನಿ, ಜನರ ಸಂರಕ್ಷಕ ಹಾಗೂ ಪಾಲಕ. ಆತ ತನಗಾಗಿಯೇ ಯಾವುದೇ ಯುದ್ಧ ಮಾಡಲಿಲ್ಲ; ಜನತೆ ಹಾಗೂ ತಾನು ಮನಗಂಡ ಆದರ್ಶಗಳಿಗಾಗಿಯಷ್ಟೇ ಯುದ್ಧ ಮಾಡಿದ.

ಈ ಲಾವಣಿಯು ಜನತೆಯಲ್ಲಿ ಪ್ರಚಾರದಲ್ಲಿದ್ದ ಹಲವು ಕಥೆಗಳು ಹಾಗೂ ಐತಿಹ್ಯಗಳನ್ನೂ, ಪುರಾಣ, *ರಾಮಾಯಣ*, *ಮಹಾಭಾರತ*ಗಳಿಂದ ಕಥೆಗಳನ್ನೂ ಒಳಗೊಂಡಿದೆ. *ಮಹಾಭಾರತ*ದಲ್ಲಿ ಅರ್ಜುನ ಮಾಡುವಂತೆಯೇ ಸುಲ್ತಾನನು ಮತ್ಸ್ಯಭೇದನ ಮಾಡುತ್ತಾನೆ. ಇದೇ ಮಹಾಕಾವ್ಯದಲ್ಲಿ ಭೀಮ ಬಕಾಸುರನ ವಧೆ ಮಾಡುವಂತೆ, ನವಲಗರ್‌ನಲ್ಲಿ ಪ್ರತಿದಿನ ಒಬ್ಬ ಮನುಷ್ಯನನ್ನು ಭಕ್ಷಿಸುತ್ತಿದ್ದ ರಾಕ್ಷಸನನ್ನೂ ವಧೆ ಮಾಡುತ್ತಾನೆ.

ಲಾವಣಿಯ ನಾಯಕಿಯಾದ ನಿಹಾಲ್ದೆಯು ಸೀತೆಯ ಪರಿಶುದ್ಧತೆ ಹಾಗೂ

ಸಹನೆಗಳನ್ನು ಪಡೆದಿರುವಳು; ಪಾರಂಪರಿಕವಾಗಿ ರಾಜಾಸ್ಥಾನೀ ಮಹಿಳೆಯ ವಿಶಿಷ್ಟ ಲಕ್ಷಣವಾದ ಧೈರ್ಯ ಕೂಡ ಆಕೆಯ ವಿಶಿಷ್ಟ ಗುಣವಾಗಿದೆ. ಆಕೆಯು ಆದರ್ಶಮೂರ್ತಿಯೆನ್ನುವರಾದರೂ, ಸಾಮಾನ್ಯ ಹೆಣ್ಣಿನಿಂದ ಬಹಳ ಬೇರೆ ಏನೂ ಅಲ್ಲ; ಈರ್ಷ್ಯೆಯ ಭಾವನೆಗಳಿಂದ ಹೊರತಾದವಳಲ್ಲ.

ರಾಜಾಸ್ಥಾನದ ಪೌರಾಣಿಕ ಲಾವಣಿಗಳು ಪುರಾಣ ಕಥೆಗಳನ್ನು ಆಧರಿಸಿದವಾಗಿದೆ; ಆದರೆ ಅವುಗಳಲ್ಲಿ ವಿವಿಧ ಪ್ರಕರಣಗಳಲ್ಲಿ ವಿವರಿಸಲಾಗಿರುವ ಕಾರ್ಯ ಕಾರಣ ಸಂಬಂಧ ಜನಪದ ಮನಸ್ಸಿನ ಸೃಷ್ಟಿಯಾಗಿವೆ. ಈ ಲಾವಣಿಗಳಲ್ಲಿ ಘಟನಾವಳಿಗಳು ಜನತೆಯ ಸೃಜನಾತ್ಮಕ ಪ್ರತಿಭೆಗೂ ಸಾಕ್ಷಿಯಾಗಿವೆ. ರಾಜಾಸ್ಥಾನದ ವಿವಿಧ ಭಾಗಗಳಲ್ಲಿ ಹಾಡಲಾಗುವ ಪ್ರಮುಖ ಪೌರಾಣಿಕ ಲಾವಣಿಗಳೆಂದರೆ ಲೋಕಮಹಾಭಾರತ, ಅಹ್ಮದೋ, ಧ್ರುವಲೀಲಾ, ಮತ್ತು ಶಿವಾಜಿ ರೋ ಬ್ಯಾವಾಲೋ. ಬಿಕನೇರಿನಲ್ಲಿರುವ ಭಾರತೀಯ ವಿದ್ಯಾಮಂದಿರ ಸಂಶೋಧನ ಸಂಸ್ಥೆಯು ಈ ಎಲ್ಲ ಲಾವಣಿಗಳನ್ನು ಸಂಗ್ರಹಿಸಿ, ಸಂಕಲನ ಮಾಡಿದೆ.

ತ್ಯಾಗ ಹಾಗೂ ಎಲ್ಲ ಪ್ರಾಪಂಚಿಕ ಪ್ರಯತ್ನಗಳ ಅಂತಿಮ ಗುರಿಯನ್ನು ಪ್ರತಿಪಾದಿಸುವ ಎರಡು ಪ್ರಾತಿನಿಧಿಕ ಲಾವಣಿಗಳೆಂದರೆ ಗೋಪೀಚಂದ್ ಮತ್ತು ಭರ್ತೃಹರಿ. ಈ ಎರಡು ಕಥೆಗಳು ಭಾರತದ ಬಹುಪಾಲು ಎಲ್ಲ ಭಾಷೆಗಳಿಗೂ ಸಾಮಾನ್ಯವಾಗಿವೆ ಹಾಗೂ ಬಂಗಾಳ, ಪಂಜಾಬು ಮತ್ತು ಸಿಂಧ್‌ಗಳಲ್ಲಿ ಕೂಡ ತುಂಬ ಜನಪ್ರಿಯವಾಗಿವೆ. ಈ ಲಾವಣಿಗಳನ್ನು ಹಾಡುವ ಗಾಯಕಿಯರು ರಾಜಾಸ್ಥಾನದ ಎಲ್ಲ ಕಡೆಗಳಲ್ಲಿಯೂ ಇರುವರು. ಅವರೇ ಜೋಗಿಗಳು ಮತ್ತು ನಾಥರು. ಇವರೆಲ್ಲ ಉಜ್ಜಯಿನಿಯ ದೊರೆ ಭರ್ತೃಹರಿಯನ್ನು ಆರಾಧಿಸಲು ಆಳ್ವಾರಿನಿಂದ ಮೂವತ್ತೆಂಟು ಕಿಲೋಮೀಟರುಗಳ ದೂರದಲ್ಲಿ ಸುಂದರವಾದ ಸ್ಥಳವೊಂದರಲ್ಲಿ ಪ್ರತಿವರ್ಷ ಮಳೆಗಾಲದಲ್ಲಿ ಸೇರುತ್ತಾರೆ. ದೊರೆ ಭರ್ತೃಹರಿ ಗೋರಕ್‌ನಾಥನ ಶಿಷ್ಯನಾಗಿ ಸನ್ಯಾಸವನ್ನು ಬೋಧಿಸುತ್ತ ಪ್ರಾಪಂಚಿಕ ವಸ್ತುಗಳನ್ನೆಲ್ಲ ತ್ಯಾಗ ಮಾಡಿದವನಾಗಿದ್ದ.

ಈ ಎಲ್ಲ ಲಾವಣಿಗಳೂ ಜನತೆಯ ಸೃಷ್ಟಿ ಹಾಗೂ ಸ್ವತ್ತೇ ಆಗಿರುವ ಕಾರಣ ಅವುಗಳಲ್ಲಿ ಅತಿಮಾನುಷವಾದ ಹಾಗೂ ಅತಿಲೌಕಿಕವಾದ ಅಂಶಗಳ ವಿಪುಲತೆ ಯಿರುವುದು ಆಶ್ಚರ್ಯದ ವಿಷಯವೇನೂ ಅಲ್ಲ. ಇದಕ್ಕೆ ಕಾರಣ ಜನಪದ ಮನಸ್ಸು ವಾಸ್ತವಾಂಶ ಹಾಗೂ ಕಲ್ಪನೆಗಳ ನಡುವೆ ಅನೇಕ ವೇಳೆ ಭೇದ ಕಲ್ಪಿಸುವುದೇ ಇಲ್ಲ; ಮಾನವ ಹಾಗೂ ಅತಿಮಾನವರಿಗೆ ಆತ್ಮವಿದೆ ಎಂದು ಅಂಗೀಕರಿಸಿರುವುದೂ ಆಗಿದೆ. ಧರ್ಮ, ದೇವದೇವತೆಗಳು, ಪೀರರು ಮತ್ತು ಸಿದ್ಧರಾಗಿ ದೈವತ್ವಕ್ಕೇರಿ ಜ್ಞಾನೋದಯ ಪಡೆದಂಥವರು–ಇವರೆಲ್ಲ ಲಾವಣಿಗಳಲ್ಲಿ ಪ್ರಮುಖರಾಗಿದ್ದಾರೆ. ಇವು ರಾಜಾಸ್ಥಾನೀ ಯರ ಸಾಮಾಜಿಕ ವರ್ತನೆ ಹಾಗೂ ಜೀವನದ ಸಾಂಸ್ಕೃತಿಕ ಮಾದರಿಯ ಅಧ್ಯಯನಕ್ಕೆ ಆಸಕ್ತಿದಾಯಕವಾದ ಹಾಗೂ ಬೋಧಪ್ರದವಾದ ವಿಷಯವಾಗಿವೆ.ಕೊನೆಯದಾಗಿ, ಈ ಪ್ರದೇಶದ ಅವಿಭಾಜ್ಯ ಹಾಗೂ ಮುಖ್ಯ ಭಾಗವಾಗಿ ಈ ಲಾವಣಿಗಳಿಗೆ ತಮ್ಮದೇ ಆದ ಸೌಂದರ್ಯ, ಗಹನತೆ ಹಾಗೂ ವೈವಿಧ್ಯವೂ ಇವೆ.

## 'ದೃಶ್ಯ' ಸಾಹಿತ್ಯ

'ಶ್ರವ್ಯ'ವಾದ ವಾಚಿಕ ಸಾಹಿತ್ಯದಂತೆಯೆ ರಾಜಾಸ್ಥಾನದಲ್ಲಿ 'ದೃಶ್ಯ'ವಾದ ಸಾಹಿತ್ಯ ಕೂಡ ವೈವಿಧ್ಯಮಯವಾಗಿದೆ. ರಾಮಲೀಲಾ ಮತ್ತ ರಾಸಲೀಲಾ–ಇವು ಉತ್ತರ ಭಾರತದಲ್ಲೆಲ್ಲ ಪ್ರಖ್ಯಾತವಾಗಿವೆ; ರಾಮಲೀಲೆ ರಾಮನಿಗೆ ಸಂಬಂಧಿಸಿದುದಾದರೆ ರಾಸಲೀಲೆ ಕೃಷ್ಣನಿಗೆ ಸಂಬಂಧಿಸಿದುದಾಗಿದೆ. *ರಾಸ* ಎಂದರೆ ವೃತ್ತಾಕಾರದ ನೃತ್ಯಲೀಲೆ, ಎಂದರೆ ರಂಜಕ ಕ್ರೀಡೆ ಅಥವಾ ನೃತ್ಯ. ಸಂಗೀತ ಮತ್ತು ನೃತ್ಯಗಳನ್ನು ಪದೇ ಪದೇ ಅಥವಾ ಪರ್ಯಾಯವಾಗಿ ಬಳಸಲಾಗುವಂಥ ರಂಜಕ ನೃತ್ಯವು *ರಾಸ* ಮತ್ತು *ಲೀಲೆ*ಯ ಎರಡೂ ಅಂಶಗಳನ್ನೊಳಗೊಂಡಿರಬಹುದು.

ವಾಚಿಕ ಸಾಹಿತ್ಯದ ಈ ವರ್ಗದಲ್ಲಿ *ಖ್ಯಾಲ್* ಅತ್ಯಂತ ಮುಖ್ಯವಾದುದು ಎನ್ನಬಹುದು. ಅದು ಕಾವ್ಯರೂಪದ ನಾಟಕವಾಗಿದ್ದು, ಅದರ ವಸ್ತು ಅನೇಕ ವೇಳೆ ಐತಿಹಾಸಿಕವಾದುದಾಗಿರುತ್ತದೆ. ಅದು ಹಾಡಾಗಿಯೂ ಇರಬಹುದು; ಇದನ್ನು ಪರ್ಯಾಯವಾಗಿ ಸರದಿಯ ಮೇಲೆ ಹಾಡಬಹುದು ಅಥವಾ *'ದಫ್'*–ಸುಮಾರು ಅರವತ್ತು ಸೆಂಟಿಮೀಟರ್ ವ್ಯಾಸದ ಸಣ್ಣ ಮದ್ದಳೆಯಾಕಾರದ್ದಾಗಿರುವುದು–ಅನ್ನು ನುಡಿಸುತ್ತ ಇಬ್ಬರು ಗಾಯಕರು ಹಾಡಬಹುದು.

*'ಖ್ಯಾಲ್'*ಗಳಿಗೆ ರಾಜಾಸ್ಥಾನದಲ್ಲಿ ಸುಮಾರು 300 ವರ್ಷಗಳ ಪರಂಪರೆಯಿದೆ ಎನ್ನಲಾಗಿದೆ. ಅದು ಜನಪದ–ಮನೋರಂಜನೆಯ ಮಾಧ್ಯಮವಾಗಿ ಆಗ್ರಾದ ಸುತ್ತಮುತ್ತಲಲ್ಲಿ ಹುಟ್ಟಿಕೊಂಡಿತು. 'ಖ್ಯಾಲ್' ತನ್ನ ಮೂಲರೂಪದಲ್ಲಿ ಭಾವಗೀತಾತ್ಮಕ ರಚನೆಯಾಗಿದೆ; ಆದರೆ ಅದನ್ನು ರಂಗ ಅಭಿನಯಗಳಿಗೆ ಅಳವಡಿಸಿಕೊಂಡಾಗ ಅದು *ಖೇಲ್* ಅಥವಾ *ಖ್ಯಾಲ್* ಎಂದು ಸುಪರಿಚಿತವಾಯಿತು. ದೇವಿಲಾಲ್ ಸಮಾರ್‌ರವರ ಪ್ರಕಾರ *ಖ್ಯಾಲ್, ನೌಟಂಕಿ, ರಮ್ಮತ್, ಸಾಂಗ್* ಮತ್ತು *ಸಂಗೀತ್* ಇವೆಲ್ಲ ಒಂದೇ ಆಗಿವೆ. ಮಹೇಂದ್ರ ಭಾನವತ್‌ರವರ ಪ್ರಕಾರ *ನಾಟಿಕ್, ಬೈಮಾಲ, ನಿಶಾನಿ, ಲೀಲಾ, ಮಾಸಿಯ, ಲಾವಣಿ, ರಸಿಯ, ಶಿಲೋಕ, ಧರ್ವಾಲ್, ಬಹರ್, ಬೈರ್ತ್ರ, ಟಪ್ಪ* ಮತ್ತು ಇನ್ನೂ ಕೆಲವು ಹೆಸರುಗಳನ್ನು *ಖ್ಯಾಲ್* ಎಂಬ ಅರ್ಥದಲ್ಲಿಯೇ ಬಳಸುವರು.

ರಾಜಾಸ್ಥಾನದಲ್ಲಿ *'ಖ್ಯಾಲ್'*ಗಳ ಮುಖ್ಯ ಪ್ರಕಾರಗಳು ಮತ್ತು ಶೈಲಿಗಳು ಕುಚ್‌ಮನಿ, ಷೇಖಾವತೀ, ಚಿರವೀ, ನನ್‌ಟಂಕೀ, ಅಲಿಭಕ್ಷಿ, ರಾಮತ್, ಕಿಷನ್‌ಗರ್ಹೀ, ಜೈಪುರಿ, ನಾಗೌರಿ, ಮಾರ್ವಾರಿ, ದಂತ–ರಾಮಗರ್ಹಿ, ಹತ್‌ರಸಿ, ಮೇವಾರಿ, ಕರ ಮತ್ತು ತುರ್ರಾ ಕೆಲಾಂಗಿ.

ಈ *ಖ್ಯಾಲ್*ಗಳು ನಾಲ್ಕುನೂರು ವರ್ಷಗಳಿಗೂ ಹೆಚ್ಚಿನ ಅವಧಿಯ ಘಟನೆಗಳಿಗೆ ಸಾಕ್ಷ್ಯಾಧಾರಗಳನ್ನು ಒದಗಿಸುವುದರ ಮೂಲಕ ಇತಿಹಾಸಕಾರರಿಗೆ ಸಹಾಯಕವಾಗಿದೆ ಎನ್ನುತ್ತಾರೆ ದೇವಿಲಾಲ್ ಸಮಾರ್‌ರವರು. ವಿವಿಧ ವಿಷಯಗಳಿಗೆ ಸಂಬಂಧಿಸಿದಂತೆ ರಾಜ್ಯದ ವಿವಿಧೆಡೆಗಳಲ್ಲಿ ಸುಮಾರು 200 *ಖ್ಯಾಲ್*ಗಳು ಪ್ರಚಲಿತವಾಗಿವೆ.

ಬೊಂಬೆಗಳು ಜನತೆಯ ದೃಶ್ಯ ಸಾಹಿತ್ಯದ ಮತ್ತೊಂದು ಪ್ರಖ್ಯಾತ ಪ್ರಕಾರವಾಗಿದೆ. ಮಾರ್ವಾರದ ಬೊಂಬೆ ಆಟಗಾರರು ತಮ್ಮ ಶ್ರೇಷ್ಠಕಲೆಗಾಗಿ ಪ್ರಸಿದ್ಧರು. ಕಾವ್ಯದಲ್ಲಿ ವಿವರಣೆಯ ರೂಪದಲ್ಲಿ ಅಭಿವೃದ್ಧಿಪಡಿಸಲಾಗಿರುವ ಬೊಂಬೆಯಾಟದ ಮುಖ್ಯವಸ್ತು ಹಿಂದಿನಕಾಲದ ರಜಪೂತವೀರರ ಕಲಿತನದ ಕೃತ್ಯಗಳು. ಈ ಆಟದಲ್ಲಿ ಹಲವು ಬಗೆಯ ಹಾಸ್ಯ ಪರಿಣಾಮಗಳನ್ನು ಉಂಟು ಮಾಡಲಾಗಿರುತ್ತದೆ. ನಾಗೌರಿನ ಅಮರಸಿಂಗ್ ರಾಥೋರ್‌ನ ಕಥೆಯು ಬೊಂಬೆಯಾಟಗಾರರಿಗೆ ಪ್ರಿಯವಾದ ವಿಷಯವಾಗಿದೆ. ತೆರೆಯ ಹಿಂದೆ ಕುಳಿತಿರುವ ವ್ಯಕ್ತಿ ತನ್ನ ಕೈಬೆರಳುಗಳಿಗೆ ಕಟ್ಟಿಕೊಂಡಿರುವ ಸೂತ್ರದ ದಾರಗಳನ್ನೆಳೆಯುತ್ತ ಬೊಂಬೆಗಳನ್ನು ಆಡಿಸುತ್ತಿದ್ದರೆ, ಅವನ ಮಡದಿ ಅಥವಾ ಬೇರೆ ಹೆಂಗಸು ಡೋಲಕ್ ಬಡಿದು ಹಾಡುತ್ತ, ತೆರೆಯ ಮೇಲೆ ತೋರಿಸಿದುದರ ಬಗ್ಗೆ ವ್ಯಾಖ್ಯಾನ ಮಾಡುತ್ತಿರುತ್ತಾಳೆ.

ಬೊಂಬೆಯಾಟಗಾರರು ಒಳ್ಳೆಯ ಗಾಯಕರು; ಅವರು ಧೋಲ–ಮಾರು, ಹೀರ–ರಾಂಜಾ, ಸಾವಲಿಂಗ ಹಾಗೂ ಜನರು ಇಷ್ಟಪಡುವಂಥ ಇತರ ನಾಯಕರು ಹಾಗೂ ಪ್ರೇಮಿಗಳಿಗೆ ಸಂಬಂಧಿಸಿದಂಥ ರಾಜಾಸ್ಥಾನೀ ಜನಪದ ಗೀತೆಗಳ ಉತ್ತಮ ಪರಂಪರೆಯನ್ನು ಸಂರಕ್ಷಿಸಿಕೊಂಡು ಬಂದಿದ್ದಾರೆ.

# ಜಾನಪದ ಸಂಗೀತ ಮತ್ತು ನೃತ್ಯ

ಸಂಗೀತ ಮತ್ತು ನೃತ್ಯ ಯಾವುದೇ ಪ್ರದೇಶದ ಜಾನಪದದ ಎರಡು ಪ್ರಮುಖ ಅಂಶಗಳಾಗಿರುತ್ತವೆ. ರಾಜಾಸ್ಥಾನದಲ್ಲಿ ಹಾಡುಗಳು ಜನತೆಯ ಜೀವನದಲ್ಲಿ ಪ್ರಧಾನ ಪಾತ್ರ ವಹಿಸಿವೆ. ಪಠಿಸಲಾದ ಅಥವಾ ಗದ್ಯಾತ್ಮಕವಾದ ಶೈಲಿಯಲ್ಲಿ ಪಠಿಸಲಾದ ಭಾವಗೀತೆಗಳು ಕಟ್ಟುನಿಟ್ಟಾದ ಅರ್ಥದಲ್ಲಿ ಹಾಡುಗಳಲ್ಲ; ಅವನ್ನು **ದುಹ, ಸೊರಥ** ಇತ್ಯಾದಿಯಾಗಿ ಕರೆಯಲಾಗುತ್ತದೆ. ಸಂಗೀತಾತ್ಮಕ ಅಥವಾ ಮಧುರವಾದುದಕ್ಕಿಂತ ಮಿಗಿಲಾಗಿ ಕಾವ್ಯಾತ್ಮಕವಾದ ಹಾಡುಗಳನ್ನು ಜನಪದಗೀತೆ ಎಂದು ಕರೆಯಲಾಗುತ್ತದೆ; ಹಾಡುಗಳು ಎಂದಲ್ಲ.

ನಿಜವಾದ ಜನಪದಗೀತೆಯು ಪಠಿಸುವಂಥದಲ್ಲ. ವಾಸ್ತವವಾಗಿ ಪ್ರತಿಯೊಂದು ಪದದ ಹಿನ್ನೆಲೆಯಲ್ಲಿರುವ ಸಂಗೀತ ಸ್ವರಗಳು ಅಂಥ ಹಾಡುಗಳ ಜೀವಾಳವಾಗಿವೆ. ಜನತೆ ನಿರಂತರವಾಗಿ ಬಳಕೆಯ ಮೂಲಕ ಅಯತ್ನಪೂರ್ವಕವಾಗಿ ಅಳವಡಿಸಿರುವ ಸಂಗೀತಲಯದಿಂದ ಭರಿತವಾದಾಗಲೇ ಜನಪದಗೀತೆಯ ಪದಗಳು ಅರ್ಥಪೂರ್ಣವಾಗುವುದು. ಇದರಿಂದಲೇ ಜನಪದ ಗೀತೆಗಳು ಕಾಲಾತೀತ ಮತ್ತು ಅಮಿತವಾಗಿವೆ. ಸಾಹಿತ್ಯ ಗೀತೆಗಳಂತಲ್ಲದೆ ಇವನ್ನು ಕೆಲವರು ಇಷ್ಟಪಡುವುದು, ಮತ್ತೆ ಕೆಲವರು ಇಷ್ಟ ಪಡೆದಿರುವಂತಿಲ್ಲ, ಅವು ಸಕಲರ ಆಸ್ತಿ; ಹಾಗಾಗಿ ಸಕಲರೂ ಅವನ್ನು ಇಷ್ಟಪಡುತ್ತಾರೆ.

ಜನಪದ ಗೀತೆಗಳು ಕೌಟುಂಬಿಕ ಅಥವಾ ಗೃಹಕೃತ್ಯದ ವ್ಯವಹಾರಗಳು, ಋತುಗಳು, ಹಬ್ಬ ಹರಿದಿನಗಳು, ಸಂಪ್ರದಾಯಸಂಸ್ಕಾರಗಳಿಗೆ ಸಂಬಂಧಿಸಿರುವುದರಿಂದ ಅವನ್ನು ಶ್ರೇಷ್ಠ ಕಾವ್ಯದ ಜೊತೆ ಹೋಲಿಸುವಂತಿಲ್ಲ. ಶ್ರೇಷ್ಠ ಕಾವ್ಯ ಅಥವಾ ಶಾಸ್ತ್ರೀಯ ಸಂಗೀತವು ಆ ವಿಷಯವನ್ನು ಆಳವಾಗಿ ಕಲಿತುದರ ಫಲವಾಗಿರುತ್ತದೆ; ಆದರೆ ಜನಪದಗೀತೆಗಳು ದೈನಂದಿನ ಸತ್ಯಗಳು ಅಥವಾ ಅನುಭವಗಳನ್ನು ನೇರವಾದ ರೀತಿಯಲ್ಲಿ ಸಂವಹನಿಸುವ ಗುರಿಯನ್ನು ಮಾತ್ರ ಹೊಂದಿರುತ್ತವೆ. ಶಾಸ್ತ್ರೀಯ ಸಂಗೀತವು ಬುದ್ಧಿಮತ್ತೆಯೊಡನೆ ತಳುಕು ಹಾಕಿಕೊಂಡಿದ್ದರೆ, ಜನಪದ ಸಂಗೀತ ಸಂಪೂರ್ಣವಾಗಿ ಭಾವನಾತ್ಮಕ ಅಂಶವನ್ನೇ ಅವಲಂಬಿಸಿರುತ್ತದೆ. ಧರ್ಮಪುರುಷರ *ಭಜನೆಗಳು* ಮತ್ತು *ಬನಿಗಳು*, ಹಾಗೂ ಋತುಗಳು, ಹಬ್ಬಹರಿದಿನಗಳು, ಸಂಪ್ರದಾಯ ಕಟ್ಟುಕಟ್ಟಳೆ ಪದ್ಧತಿಗಳಿಗೆ ಸಂಬಂಧಿಸಿದ ಜನಪದ

ಗೀತೆಗಳು ಇದನ್ನು ದೃಢೀಕರಿಸುತ್ತವೆ. ಅವುಗಳನ್ನು ಹಾಡುವ ಸಂದರ್ಭಗಳು ವಿಶೇಷವಾದುವೂ, ನಿರ್ದಿಷ್ಟವಾದುವೂ ಆಗಿರುತ್ತವೆ; ಆದರೆ ಅವನ್ನು ನಿರ್ದಿಷ್ಟ ಪರಿಸರದಲ್ಲಿ ನಿರ್ದಿಷ್ಟ ಘಟನಾವಳಿಗಳ ಸಮಯದಲ್ಲಿ ಹಾಡಲಾಗುವುದರಿಂದ ಅವು ಎಂದಿಗೂ ಹೊಂದಿಕೊಳ್ಳದಿರುವುದಿಲ್ಲ, ಇಲ್ಲವೇ ಭಾವನಾರಹಿತವಾಗುವುದಿಲ್ಲ. ವಿವಾಹವು ಬಹು ಪ್ರಾಚೀನ ಪದ್ಧತಿಯಾಗಿದೆ; ಆದರೆ ಹೆಣ್ಣಿಗಾಗಲೀ ಗಂಡಿಗಾಗಲೀ ಅದರಿಂದ ಬೇಸರವಾಗಿಲ್ಲ. ಅದೇ ರೀತಿ, ಈ ಸಮಾರಂಭದಲ್ಲಿ ಹಾಡುವ ಹಾಡುಗಳಿಂದ ಅವರಿಗೆ ಬೇಸರವಾಗುವುದಿಲ್ಲ. ಏಕೆಂದರೆ ಅಂಥ ಸಂದರ್ಭಗಳಿಗಾಗಿರುವ ಹಾಡುಗಳು ಚಿರಂತನವಾದ, ನಿತ್ಯವಿನೂತನವಾದ ಮಾನವನ ಭಾವನೆಗಳ ಅಭಿವ್ಯಕ್ತಿಗಳಾಗಿವೆ. ಈ ಭಾವನೆಗಳು ಸದಾ ಸ್ವೋಪಜ್ಞವಾದುವೂ, ಸ್ಫೂರ್ತಿದಾಯಕವಾದುವೂ ಆಗಿರುವಂಥವೇ. ಹಾಗಾಗಿ, ಸಂಗೀತದ ಸ್ಫೂರ್ತಿಯ ಮೂಲವೂ ಜನಪದ ಗೀತೆಗಳಲ್ಲಿ ಅಡಗಿದೆ.

ಜನಪದ ಗೀತೆಯ ಕಾವ್ಯಸಂಪದವನ್ನು ಅಧ್ಯಯನ ಮಾಡುವಾಗ ಅದರ ಭಾವನಾ ಮೂಲಗಳು ವೇದಗಳಲ್ಲಿ ಅಡಗಿರುವುದನ್ನು ಗಮನಿಸಬಹುದು. ಸೂರ್ಯ, ಸಂಧ್ಯೆ, ಮಳೆ, ವಸಂತ ಮತ್ತು ಪ್ರಕೃತಿಯ ಇತರ ಘಟನಾವಳಿಗಳ ಬಗ್ಗೆ ಜನಪದಗೀತೆಯಲ್ಲಿರುವಂಥದೇ ಅಂಶವನ್ನು ವೇದಗಳಲ್ಲಿಯೂ ಗಮನಿಸಬಹುದಾಗಿದೆ. ಬೇರೆ ಕಡೆ ಉಲ್ಲೇಖಿಸಲಾಗಿರುವ ರಾಜಾಸ್ಥಾನದ ಸೂರ್ಯಗೀತೆ, ಹಾಗೂ ಮಳೆಹಾಡುಗಳು ಇದನ್ನು ದೃಢೀಕರಿಸುತ್ತವೆ.

## ರಾಜಾಸ್ಥಾನ ಜನಪದಗೀತೆಗಳ ಸಂಗೀತಾಂಶ

ರಾಜಾಸ್ಥಾನೀ ಜನಪದ ಗೀತೆಗಳ ಸಂಗೀತಾಂಶಗಳು ವಿದ್ವಾಂಸರ ಗಮನವನ್ನು ಇನ್ನೂ ಸಾಕಷ್ಟು ಸೆಳೆದಿಲ್ಲ. ಜನಪದ ಗೀತೆಯ ಪದಗಳ ಅರ್ಥವು ಅದರ ವ್ಯವಸ್ಥಿತ ಲಯಕ್ಕೆ ಅನುಗುಣವಾಗಿ ಹಾಡಿದಾಗ ಮಾತ್ರವೇ ಸಂವಹನಗೊಳ್ಳುವದು ಎಂಬುದನ್ನು ಒಪ್ಪಿಕೊಳ್ಳಬೇಕು. ರಾಜಾಸ್ಥಾನದ ಪಾರಂಪರಿಕ ಸವಾರಿ ಒಂಟೆಗೆ ಅಲಂಕರಣದ ಹಗ್ಗವನ್ನು ಸಿದ್ಧಪಡಿಸುವ ಪ್ರಕ್ರಿಯೆಯನ್ನು ವಿವರಿಸುವಂಥ ಸುಪ್ರಸಿದ್ಧ ಜನಪದ ಗೀತೆ 'ಗೋರ್ಬಂಡ್'ಬಗ್ಗೆ ಕೋಮಲ್ ಕೊಠಾರಿ ಉಲ್ಲೇಖಿಸಿರುವರು. ಈ ಗೀತೆಯು ಮುಗ್ಧ ದುಡಿಮೆಯ ಸೌಂದರ್ಯವನ್ನು ಅಭಿವ್ಯಕ್ತಿಗೊಳಿಸುತ್ತದೆ. ಈ ಗೀತೆಯನ್ನು ವಿಶೇಷವಾಗಿ ಕಹ್ರುವದ ತಾಳದಲ್ಲಿ ಹಾಡಿದಾಗ ತುಂಬ ಮನಕರಗಿಸುವಂತಿರುತ್ತದೆ. ಈ ರಾಗದಲ್ಲಿ ಹಾಡಿದಾಗ ಉಂಟಾಗುವ ಆನಂದ ಶೇ.ನೂರು ಭಾಗವಾದರೆ, ಈ ಸಂಗೀತವಿಲ್ಲದಿದ್ದರೆ ಅದೇ ಆನಂದಾನುಭವ ಶೇ.ಹತ್ತರಷ್ಟು ಕೂಡ ಸಾಧ್ಯವಾಗುವುದಿಲ್ಲ. ಇದೇ ಮಾತು 'ಇಂಧನಿ', 'ಲಾವರ್ಜಿ', 'ಜಲ್ಲೋ', 'ಹಿಚಾಕಿ', 'ಓಲ್ಯೋನ್', 'ಸಪ್ನೊ' ಮತ್ತು 'ಕುರ್ಜನ್' ಮೊದಲಾದಂಥ ಎಲ್ಲ ಜನಪದ ಗೀತೆಗಳಿಗೂ ಅನ್ವಯವಾಗುತ್ತದೆ. ಈ ಹಾಡುಗಳ ರಾಗಗಳು ಎಷ್ಟು ಮಾಧುರ್ಯಪೂರ್ಣವೂ ಶೀಘ್ರಗತಿಯವೂ ಆಗಿವೆಯೆಂದರೆ ತಂತೀವಾದ್ಯ ಸಮೇತವಾಗಿ ಮೊದಲ ಸಾಲುಗಳನ್ನು ಹಾಡುತ್ತಿದ್ದಂತೆಯೇ ಶ್ರೋತೃಗಳು ಆನಂದಪರವಶರಾಗಿಬಿಡುವರು.

ಶಾಸ್ತ್ರೀಯ ಸಂಗೀತದ ಸಾಧನಗಳು, ಜನಪದ ಗೀತೆ ಅಥವಾ ಜಾನಪದವನ್ನು ಉಜ್ವಲ ಪರಿಣಾಮಕಾರಿಯಾಗುವಂತೆ ಶ್ರೀಮಂತಗೊಳಿಸಿ, ಪ್ರತಿಯೊಂದು ಜನಪದ ಗೀತೆಯನ್ನು ಶಾಸ್ತ್ರೀಯವಾದುದನ್ನಾಗಿ ಪರಿವರ್ತಿಸಬಹುದಾದರೂ ಶಾಸ್ತ್ರೀಯ ಸಂಗೀತವನ್ನು ಜನಪದಗೀತೆ ಅಥವಾ ಜಾನಪದ ಸಂಗೀತವಾಗಿ ಎಂದಿಗೂ ಮಾರ್ಪಡಿಸಲಾಗುವುದೇ ಇಲ್ಲ.

## ರಾಗಗಳು

ಭಾರತದ ಶಾಸ್ತ್ರೀಯ ಸಂಗೀತ ನಿಕಷವನ್ನು ರಾಜಾಸ್ಥಾನದ ಜನಪದ ಗೀತೆಗಳಿಗೆ ಅನ್ವಯಿಸಿದರೆ ಬಿಲಾವಲ್, ಕಾಫಿ, ಖಮಾಜ್ ಹಾಗೂ ಪೀಲು ರಾಗಗಳನ್ನು–ಕೆಲವನ್ನು ಅವುಗಳ ಪರಿಶುದ್ಧ ರೂಪದಲ್ಲಿ, ಉಳಿದವನ್ನು ಸಂಯೋಗಿಸಿ–ತುಂಬ ವ್ಯಾಪಕವಾಗಿ ಬಳಸುವುದು ಕಂಡುಬರುತ್ತದೆ. ಅನೇಕ ಜನಪದ ಗೀತೆಗಳಿಗೆ ಬಿಲಾವಲ್ ಮತ್ತು ಕಾಫಿ ರಾಗಗಳನ್ನು ಸಂಯೋಜಿಸಲಾಗಿದೆ.

ರಾಜಾಸ್ಥಾನದ ಜನಪದ ಗೀತೆಗಳು ಯಾವುದೇ ಕಟ್ಟುನಿಟ್ಟಾದ ನಿಯಮುಗಳಿಲ್ಲದೆ ಮುಕ್ತವಾಗಿ ರಚನೆಗೊಂಡು ಅವನ್ನು ಹಾಡಲಾಗುತ್ತಿದೆಯಾದರೂ ಅವು ಭಾರತದ ಶಾಸ್ತ್ರೀಯ ಸಂಗೀತದ ಅಂಶಗಳನ್ನು ಈ ರೀತಿಯಲ್ಲಿ ಪಾಲಿಸಿಕೊಂಡು ಬಂದಿರುವ ಅಂಶ ತಿಳಿಯುತ್ತದೆ. ಒಂದು ರೀತಿಯಲ್ಲಿ ಸಂಗೀತದಲ್ಲಿ ಶಾಸ್ತ್ರೀಯತೆಯು ಜನಪದ ಗೀತೆಯ ಸಹಾಯದಿಂದ ಅದರ ರೂಪವನ್ನು ನಿರ್ಧರಿಸಿ ಉತ್ತಮುಪಡಿಸುತ್ತಿರುವುದೇ ಆಗಿದೆ. ಈ ಸಂದರ್ಭದಲ್ಲಿ ಮಾದರಿಯಾದ ಉದಾಹರಣೆಯೆಂದರೆ ರಾಜಾಸ್ಥಾನದಲ್ಲಿ ಪ್ರಖ್ಯಾತವಾಗಿರುವ ಮಾಂಡ್ ಶೈಲಿಯ ಗಾಯನ; ಈ ಶೈಲಿಯು ಜನಪದಗೀತೆಯಲ್ಲಿ ತುಂಬ ಮುಖ್ಯ; ಇದನ್ನು ಶಾಸ್ತ್ರೀಯ ವಲಯಗಳಲ್ಲಿಯೂ ಚೆನ್ನಾಗಿ ಗುರುತಿಸಲಾಗಿದೆ. ಮಾಂಡ್‌ನಲ್ಲಿ ಸುಸ್ವರವಿರುವುದಾದರೂ ಇದನ್ನು ಪೂರ್ಣಪ್ರಮಾಣದ ರಾಗವೆಂದು ಅಂಗೀಕರಿಸಿಲ್ಲ; ಇಲ್ಲವೇ ಮುಕ್ತವಾಗಿ ಹಾಡುವ ಜನಪದಗೀತೆಗಳ ಪೈಕಿ ಒಂದೆಂದೂ ಪರಿಗಣಿಸಿಲ್ಲ. ಮಾಂಡ್ *ತುಮ್ರಿ* ಅಥವಾ *ಗಜಲ್*‌ನ ತುಂಬ ಸಮೀಪಕ್ಕೆ ಬರುವುದಾದರೂ ಅದರ ಗಾಯನವು ಎಷ್ಟರಮಟ್ಟಿಗೆ ಕಟ್ಟುನಿಟ್ಟಾದುದೂ ಖಚಿತವಾದುದೂ ಆಗುತ್ತಿದೆಯೆಂದರೆ ಒಂದಲ್ಲ ಒಂದು ದಿನ ಅದೇ ಮುಖ್ಯವಾದ ಹಾಗೂ ಪರಿಪೂರ್ಣವಾದ ರೂಪವಾಗಿ ಮೈದಳೆಯುವುದು.

ಭಾರತದ ಶಾಸ್ತ್ರೀಯ ಸಂಗೀತಕ್ಕೆ ರಾಜಾಸ್ಥಾನೀ ಜನಪದದ ವಿಶಿಷ್ಟ ಕೊಡುಗೆ ಎಂದರೆ ಮಾಂಡ್. ಅದರ ಪ್ರಶಾಂತ ಹಾಗೂ ಕೋಮಲ ಸ್ವರಗಳು ಈ ಪ್ರದೇಶದಲ್ಲಿರುವ ಪ್ರಕೃತಿಯ ಆಕರ್ಷಕ ಚಿತ್ರವನ್ನು ನಿವೇದಿಸುತ್ತವೆ. ಅದರ ಭಾವಪ್ರದರ್ಶಕತೆಯು ಮರಳ ದಿಬ್ಬಗಳ ನಡುವೆ ತೇಲುತ್ತಿರುವ ಧ್ವನಿಯೊಂದರ ಕಂಪಿತ ಪ್ರತಿಧ್ವನಿಯನ್ನು ಹೋಲುತ್ತದೆ.

## ತಾಳ

ಭಾರತೀಯ ಸಂಗೀತದಲ್ಲಿ ಗಾಯಕ ಮತ್ತು ಶ್ರೋತೃವನ್ನು ಸಂಗೀತದ ಲಯ

ಮತ್ತು ಆನಂದದಲ್ಲಿ ಒಂದುಗೂಡಿಸುವುದೇ ತಾಳ. ವಿವಿಧ ರಾಗ ರಾಗಿಣಿಗಳನ್ನು, ಆರರಿಂದ ಹದಿನಾರರವರೆಗೆ ವಿಸ್ತರಿಸುವಂಥ ಮಾತ್ರೆಗಳಿಂದ ಗುರುತಿಸಬಹುದಾದ ತಾಳದ ಗತಿಗನುಸಾರವಾಗಿ ಹಾಡಲಾಗುವುದು. ಶಾಸ್ತ್ರೀಯವಾದ ಯಾವುದೇ ರಚನೆಯನ್ನು ತಾಳವಿಲ್ಲದೆ ಹಾಡಲಾಗುವುದಿಲ್ಲ; ಹಿಂದೂಸ್ಥಾನೀ ಶಾಸ್ತ್ರೀಯ ಸಂಗೀತದಲ್ಲಿ ತಾಳವನ್ನು ತಬಲ, ಪಖ್ವಾಜ್ ಅಥವಾ ಮೃದಂಗ ಒದಗಿಸುತ್ತದೆ. ಜನಪದ ಸಂಗೀತವನ್ನೂ ಪರಿಣಾಮಕಾರಿಯಾಗಿ ಹಾಡಬೇಕಾದಲ್ಲಿ *ತಾಳ* ಅತ್ಯಗತ್ಯ; ಇದಕ್ಕಾಗಿ ಬಳಸುವ ಅನೇಕ ಉಪಕರಣಗಳ ಪೈಕಿ ಕೆಲವು ಎಂದರೆ *ಡೋಲು, ಡೋಲಕ್, ನಗಾರಿ, ಮಜಿರೆ, ಚಾಂಗ್* ಮತ್ತು *ದಾಫ್*.

ಕೋಮಲ್ ಕೊಠಾರಿಯವರ ಪ್ರಕಾರ ರಾಜಾಸ್ಥಾನೀ ಜನಪದಗೀತೆಗಳು ಡೋಲಕ್, ತಬಲ ಮತ್ತು *ನಗಾರ*ಗಳಲ್ಲಿ ಆರು, ಏಳು ಅಥವಾ ಎಂಟು *ಮಾತ್ರೆಗಳ ತಾಳ*ವನ್ನು ಬಳಸಿಕೊಳ್ಳುತ್ತವೆ. *ಕಹರ್ವ* ತಾಳವನ್ನು ಸಾಮಾನ್ಯವಾಗಿ *ದಾಫ್* ಅಥವಾ *ಚಾಂಗ್*ನಲ್ಲಿ ಬಾರಿಸಲಾಗುವುದು. ಜನಪದ ಗೀತೆಗಳೊಡನೆ ಬಳಸಲಾಗುವ ಸಂಗೀತವಾದ್ಯಗಳು, ಭಾಷೆಯಲ್ಲಿ ವ್ಯಾಕರಣ ಪಡೆದಿರುವಂಥ ಸ್ಥಾನವನ್ನು ಸಂಗೀತದಲ್ಲಿ ಪಡೆದಿರುವ ತಾಳವನ್ನು ಪರಿಪಾಲಿಸಿಕೊಂಡು ಬರುವಲ್ಲಿಯೂ ಸಹಾಯಕವಾಗುತ್ತವೆ.

## ಜನಪದಗೀತೆಗಳ ಗಾಯನ

ರಾಜಾಸ್ಥಾನದಲ್ಲಿ ಜನಪದಗೀತೆಗಳನ್ನು ಹೇಗೆ ಹಾಡಲಾಗುವುದು ? ಮಧ್ಯೆ ಮಧ್ಯೆ *ದುಹ*ಗಳಿಂದ ಕೂಡಿರುವಂಥ ಧೋಲ-ಮರು, ನಾಗಜಿ-ನಾಗ್ವಂತಿ ಮತ್ತು ನಿಹಲ್ದೆ-ಸುಲ್ತಾನ ಮೊದಲಾದ ಲಾವಣಿಗಳನ್ನು ಹೆಚ್ಚು ಕಡಮೆ *ರಾಮಾಯಣ* ಪಠಣ ಅಥವಾ ಉರ್ದು ಗಜಲ್‌ನಂತೆಯೇ ಹಾಡಲಾಗುವುದು. ಹೆಚ್ಚಿನ ಮಟ್ಟಿಗೆ ಪ್ರೇಮಲಾವಣಿಗಳೇ ಆಗಿರುವ ಇವು ತಮ್ಮ ಕ್ರಿಯೆಯ ಪ್ರಬಲ ಶಕ್ತಿ ಹಾಗೂ ಮಧ್ಯಮಧ್ಯದಲ್ಲಿ *ದುಹ*ಗಳ ಸಂಗೀತಾತ್ಮಕ ಪಠಣದಿಂದ ಶ್ರೋತೃಗಳನ್ನು ಮಂತ್ರಮುಗ್ಧರನ್ನಾಗಿಸುತ್ತವೆ. ಚಿತ್ರೀಕರಿಸಿದ ಬಟ್ಟೆ ಪಟ್ಟಿಕೆಗಳ ಮುಂದೆ ಹಾಡಲಾಗುವಂಥ, *ಪಾಬುಜಿ, ರಾಥೋರ್*ರಂಥ ಮಹಾನ್‌ಚೇತನಗಳ *ಪದ*ಗಳು ಅಥವಾ ಗೀತಕಥೆಗಳನ್ನು ಸಹ ಇದೇ ರೀತಿಯಲ್ಲಿ ನೀಡಲಾಗುವುದು.

ಮಾನವನ ಅತ್ಯಂತ ಸೂಕ್ಷ್ಮವಾದ, ಅತ್ಯಂತ ನವಿರಾದ ಭಾವನೆಗಳನ್ನು ಅಭಿವ್ಯಕ್ತಿಸುವ ಜನಪದ ಗೀತೆಗಳು ಕಾವ್ಯ, ಸಂಗೀತಗಳ ಸಂಯೋಜನೆಯಿಂದಾಗಿ ಸಂತೋಷಕರವಾದುವಾಗಿವೆ. 'ಪಾನಿಹರಿ' (ಜಲವಾಹಕರು), ಕುರ್ಜನ್ ಮತ್ತು ಸಪ್ನ-ಇವು ಈ ವರ್ಗದ ಹಾಡುಗಳಾಗಿವೆ.

ಜಾತ್ರೆಗಳು, ಹಬ್ಬ-ಹರಿದಿನಗಳು, ಮೊದಲಾದುವುಗಳಲ್ಲಿ ಹೆಂಗಸರು, ಗಂಡಸರು ಸೇರಿ ಹಾಡುವಂಥ ಜನಪದಗೀತೆಗಳನ್ನು ಜನಸಮೂಹ ಸಂಪೂರ್ಣಗೊಳ್ಳುತ್ತಿದ್ದಂತೆಯೇ ಹಾಡಲಾರಂಭಿಸುವರು. ಆದರೆ ಲಾವಣಿಗಳು, ಪದಗಳು ಮತ್ತು 'ಪಾನಿಹರಿ'ಯಂಥ ವಿರಹವ್ಯಥೆಯ ರಚನೆಗಳ ಗಾಯನ ಭಿನ್ನವಾದುದೂ, ಹೆಚ್ಚು

ಕಠಿಣತಮ ಮತ್ತು ಕಲಾತ್ಮಕವಾದುದೂ ಆಗಿರುತ್ತದೆ.

## ಭಜನೆಗಳು ಮತ್ತು ಬನಿಗಳು

ಭಜನೆಗಳು ಮತ್ತು *ಬನಿ*ಗಳು ಹರಿಜನರು, ಚಮಾರರು, ಭಂಗಿಗಳು, ಬಲಾಯಿಗಳು ಮತ್ತು ರಹಗಾರ್‌ಗಳಲ್ಲಿ ತುಂಬ ಜನಪ್ರಿಯವಾಗಿರುವ ಭಕ್ತಿ ಜನಪದ ಗೀತೆಗಳಾಗಿವೆ. ಈ ಹಾಡುಗಳ ಮೂಲಕವಾಗಿ ಭಾರತೀಯ ಆಧ್ಯಾತ್ಮಿಕ ಪರಂಪರೆ ಹಾಗೂ ತಾತ್ವಿಕ ಸಂಪ್ರದಾಯಗಳು ಸಮಾಜದ ಅತ್ಯಂತ ಕೀಳುಸ್ತರದವರೆಗೂ ಸಾಗುತ್ತವೆ. ಭಜನೆ ಹಾಗೂ *ಬನಿ*ಗಳನ್ನು ***ಏಕತಾರಾ, ಡೋಲಕ್*** ಮತ್ತು ***ಮಜೀರಾ***ಗಳ ಸಹಿತವಾಗಿ ರಾತ್ರಿಯಿಡೀ ಸತ್ಸಂಗಗಳಲ್ಲಿ ಹಾಡಲಾಗುತ್ತದೆ. ಅನೇಕ ವೇಳೆ *ಬನಿ*ಗಳನ್ನು ಆಲಾಪಗಳ ಮೂಲಕ ಎಳೆಯಲಾಗುತ್ತದೆ. ಇದರಿಂದ ಸಾಲುಗಳಿಗೆ ಗಂಭೀರತೆ ಮೂಡುತ್ತದೆ; ಶ್ರೋತೃಗಳು ಅರ್ಥಗ್ರಹಣ ಮಾಡಲು ನೆರವಾಗುತ್ತದೆ. ಕೃಷ್ಣನ ಪರಮಭಕ್ತೆ ಮೀರಾಬಾಯಿ ರಚಿಸಿದ ಭಜನೆಗಳನ್ನು ರಾಜಾಸ್ಥಾನದಲ್ಲಿ ವಿಶೇಷ ಶ್ರದ್ಧಾಭಕ್ತಿಗಳಿಂದ ಹಾಡಲಾಗುತ್ತದೆ.

## ಜನಪದ ಸಂಗೀತ ವಾದ್ಯಗಳು

*ರಾವಣ ಹತ್ತ, ಏಕತಾರಾ* ಮತ್ತು *ಸಾರಂಗಿ*–ವಿವಿಧ ಆಕಾರ, ರೂಪಗಳಲ್ಲಿ ಇರುವುವು–ಇವು ಜನಪದಗೀತೆಗಳೊಡನೆ ಬಳಸಲಾಗುವ ತಂತಿವಾದ್ಯಗಳು. ***ಸಾರಂಗಿ*** ತನ್ನ ಸುಮಧುರ ಸ್ವರಗಳೊಡನೆ ಗಾಯಕನ ಪ್ರತಿಧ್ವನಿಯಾಗಿ ಕಾರ್ಯ ನಿರ್ವಹಿಸುತ್ತದೆ. ಜನಪದ ವಾದ್ಯಗಾರರು ಈ ವಾದ್ಯವನ್ನು ಅಪರಿಪೂರ್ಣವಾಗಿ ಬಳಸುವ ರಾದರೂ ರಾಜಾಸ್ಥಾನದ ಜನಪದಗೀತೆಗಳನ್ನು ಇದು ಶಾಸ್ತ್ರೀಯಮಟ್ಟಕ್ಕೆ ನಿಕಟವಾಗಿ ತರುತ್ತದೆ. ಜೈಸಾಲ್ಮೇರ್‌ನ ಲಂಗರು ಒಂದು ಬಗೆಯ ಸಾರಂಗಿಯ–*ಸಿಂಧೀ* ಸಾರಂಗಿ– ಹಿಮ್ಮೇಳದೊಡನೆ ಹಾಡುತ್ತಾರೆ.

***ರಾವಣಹತ್ತ***ವು ಕೂಡ ಒಂದು ಬಗೆಯ ತಂತಿವಾದ್ಯವಾಗಿದ್ದು, ಇದನ್ನು ಚಾರಣನೇ ಬಳಸುತ್ತಾನೆ. ಬಡಿಗೆಗೆ ಕಟ್ಟಲಾಗಿರುವ *ಗುಂಗ್ರೂ*ಗಳನ್ನು ತಂತಿಗಳಿಗೆ ಉಜ್ಜಿದಾಗ ಅವು ಹಾಡಿಗೆ ತಾಳವನ್ನೂ ಒದಗಿಸುತ್ತವೆ.

***ಕಮೈಚಿ*** ಎಂಬುದು ಇಪ್ಪತ್ತೇಳು ತಂತಿಗಳಿರುವ ಒಂದು ತಂತಿವಾದ್ಯ; ಆದರೆ ಇದರ ಆಕಾರ *ಸಾರಂಗಿ*ಗಿಂತ ಭಿನ್ನವಾಗಿದೆ.

***ಜಂತರ್*** ಎಂಬುದು ವೀಣೆಯನ್ನು ಹೋಲುವಂಥ ಒಂದು ತಂತಿವಾದ್ಯ. ಇದನ್ನು ಮೇವಾರದ ಕೆಲವು ಪ್ರದೇಶಗಳಲ್ಲಿ, ಕತ್ತಿಗೆ ನೇತು ಹಾಕಿಕೊಂಡು, ನಿಂತ ಭಂಗಿಯಲ್ಲಿ ಬಾರಿಸುವರು. ಮೇವಾರದ ರಾವ್‌ಗಳು ಮತ್ತು ಭಟ್‌ಗಳು ಬಳಸುವ ಮತ್ತೊಂದು ವಾದ್ಯವೇ *ರವಾಜ್*. ಇದಕ್ಕೆ ಹನ್ನೆರಡು ತಂತಿಗಳಿರುತ್ತವೆ; ***ಗಾಜ್***(ಬಡಿಗೆ) ಬದಲು ***ನಖಾದ*** ಸಹಾಯದಿಂದ ಇದನ್ನು ನುಡಿಸುವರು.

***ತಂದೂರೊ, ವೀಣೋ, ಚಂತರೋ*** ಅಥವಾ ***ನಿಶಾನ್***–ಇವು ಕೂಡ ಜನಪದ ಗಾಯಕರು ಬಳಸುವ ತಂತಿವಾದ್ಯಗಳು. ಚಂತರೋ ಅಥವಾ ನಿಶಾನ್–ಇದು

ರಾಮದೇವಜಿಯ ಭಕ್ತರ ಪೈಕಿ ತುಂಬ ಜನಪ್ರಿಯವಾಗಿರುವ ವಾದ್ಯವಾಗಿದೆ.

ಈ ತಂತಿವಾದ್ಯಗಳಲ್ಲದೆ ಬಾಯಿಂದ ಬಾರಿಸುವ ಹಲವು ಬಗೆಯ ವಾದ್ಯಗಳಿವೆ. *ಬಾನ್ಸುರಿ, ಆಲ್ಗೋಜ* (ಒಂದೇ ಕೊಳಲಿನಂತೆ ವರ್ತಿಸುವ ಜೊತೆ ಕೊಳಲುಗಳು), *ಸತಾರಾ, ಶೆಹನಾಯಿ, ಟೊಟೊ, ಪುಂಗಿ* (ಹಾವಾಡಿಗರು ಮತ್ತು ಜೋಗಿಗಳು ಬಾರಿಸುವರು), *ನಾದ, ಬಂಕಿಯ, ಶಂಖ*, ಮತ್ತು *ಸಿಂಗಿ* (ಸನ್ಯಾಸಿಗಳು, ಫಕೀರರು ಉಪಯೋಗಿಸುವರು) – ಇವು ಆ ಪೈಕಿ ಸೇರಿವೆ. ಈ ಹಿಂದೆ ಉಲ್ಲೇಖಿಸದಿರುವ ತಾಳ ವಾದ್ಯಗಳ ಪೈಕಿ ಕೆಲವು *ಮದಲ*, ಮೃದಂಗ, *ನೌಬತ್, ಚಾಂಗ್ರಿ, ಧುನ್ಸೋ, ದಫ್ರ, ಖಂಜರಿ, ಧಿಬ್ಸೋ ಅಪಾಂಗ್, ಮಾಟ್ಕಿ* ಮತ್ತು *ಡಮರು*.

## ವೃತ್ತಿಗಾಯಕ ಸಮುದಾಯಗಳು

ಇತರರ ಮನರಂಜನೆಗಾಗಿ ಹಾಡುವ ಆನುವಂಶಿಕ ವೃತ್ತಿಯನ್ನುಳ್ಳ ಸಮುದಾಯಗಳನೇಕವು ರಾಜಾಸ್ಥಾನದಲ್ಲಿವೆ. ಇವುಗಳ ಪೈಕಿ ಕೆಲವು: ಧೋಲಿಗಳು (ಹಿಂದೂಗಳು ಮತ್ತು ಮುಸ್ಲಿಮರು–ಇಬ್ಬರೂ), ಧಾಧೀಗಳು, ಮಿರಾಸಿಗಳು, ಮಂಗಮಾರರು, ಫೆದಲಿಗಳು, ಕಲಾವತರು ಮತ್ತು ಕವ್ವಾಲರು, ಟಾಂಗರು, ಪಟಾರರು ಹಾಗೂ ಕಾಂಚರಿಗಳು–ಕ್ರಮವಾಗಿ ಹಿಂದೂ ಹಾಗೂ ಮುಸ್ಲಿಂ ವೇಶ್ಯೆಯರು–ನಾಟರು, ರಾವಲರು ಹಾಗೂ ಭವಾಯಿಗಳು.

ಈ ಸಮುದಾಯಗಳು ಇಂದಿಗೂ ತುಂಬ ಕೀಳು ಸ್ಥಿತಿಯಲ್ಲಿರುವುವು. ಗ್ರಾಮಗಳಲ್ಲಿನ ಊಳಿಗಮಾನ್ಯ ಪರಂಪರೆಯಿಂದಾಗಿ ಇವರು ತಮ್ಮ ಕೀಳರಿಮೆಯ ಭಾವನೆಯನ್ನು ತೊಡೆದುಹಾಕಲು ಸಾಧ್ಯವಾಗಿಲ್ಲ. ಆದಾಗ್ಯೂ ಈ ಜನಾಂಗಗಳು ಜನಪದ ಗೀತೆಗಳ ಸಂರಕ್ಷಣೆ ಹಾಗೂ ಜನಪ್ರಿಯಗೊಳಿಸುವ ಕಾರ್ಯದಲ್ಲಿ ತುಂಬ ಮಹತ್ವದ ಕಾಣಿಕೆ ನೀಡಿವೆ.

ಉದಯಪುರದಲ್ಲಿರುವ ಭಾರತೀಯ ಲೋಕಕಲಾ ಮಂಡಲದ ದಾಖಲೀಕರಣ ವಿಭಾಗವು ಜನಪ್ರಿಯ ಗೀತೆಗಳ ಬೃಹತ್ ಸಂಗ್ರಹವನ್ನು, ಬಳಸಲಾಗುವ ಸಂಗೀತ ವಾದ್ಯಗಳೊಡನೆ ಅವುಗಳ ರಾಗಗಳ ಸಮೇತವಾಗಿ ಸಂಗ್ರಹಿಸಿರುವುದು ಸಮಾಧಾನ ಕರವಾದ ವಿಷಯವಾಗಿದೆ. ಈ ಹಾಡುಗಳ ಪೈಕಿ ಹೆಚ್ಚಿನವುಗಳಿಗೆ ಸ್ವರ ಸಂಖ್ಯಾಮಾನ ವನ್ನು ಸಿದ್ಧಪಡಿಸಿ, ರಾಜಾಸ್ಥಾನ ಸ್ವರಲಹರಿ ಮಾಲೆಯಲ್ಲಿ ಪ್ರಕಟಿಸಲಾಗಿದೆ.

## ಪ್ರಾದೇಶಿಕ ನೃತ್ಯ ಪ್ರಕಾರಗಳು

ದೇವೀಲಾಲ್ ಸಮಾರ್‌ರವರು ರಾಜಾಸ್ಥಾನದ ಜನಪದ ನೃತ್ಯಗಳನ್ನು ಈ ಪ್ರದೇಶದ ಪ್ರಾಕೃತಿಕ ವಿಭಾಗಗಳಿಗೆ ಅನುಗುಣವಾಗಿ–ಎಂದರೆ ಬೆಟ್ಟಗಾಡು, ಮರು ಭೂಮಿ, ಷೇಕಾವತಿ ಸೇರಿದಂತೆ ಪೂರ್ವದ ಮೈದಾನ ಪ್ರದೇಶ–ಎಂದು ವಿಭಜಿಸಿರುವರು.

## ಗುಡ್ಡಗಾಡು ಪ್ರದೇಶ

ಭಿಲ್ಲರು ಮತ್ತ ಮೀನರೇ ಪ್ರಧಾನವಾಗಿ ಇರುವ ಬೆಟ್ಟಪ್ರದೇಶವು ಸಮುದಾಯ ಗೀತೆಗಳು ಮತ್ತು ನೃತ್ಯಗಳಿಗೆ ಪ್ರಖ್ಯಾತವಾಗಿವೆ. ಸ್ವಾತಂತ್ರ್ಯಪ್ರಿಯವಾದ ಈ ಬುಡಕಟ್ಟುಗಳವರು ಪ್ರಕೃತಿಯ ಮಡಿಲಿನಲ್ಲಿಯೇ ಇದ್ದು, ಹಾಡು ಮತ್ತು ನೃತ್ಯ ಇವೆರಡೂ ಅವರ ಜೀವನದ ಅವಿಭಾಜ್ಯ ಅಂಗವಾಗಿದೆ. ಈ ನೃತ್ಯಗಳಲ್ಲಿ ಹೆಂಗಸರು ಮತ್ತು ಗಂಡಸರು ಯಾವುದೇ ಉಪಾಧಿಯಿಲ್ಲದೆ ಪಾಲ್ಗೊಳ್ಳುವರು. ಭಿಲ್ಲರು ಮತ್ತು ಮೀನರ ನೃತ್ಯಗಳು ಅನೇಕವಿವೆ; ಹಬ್ಬ-ಹರಿದಿನಗಳಲ್ಲಿ, ಮದುವೆಗಳಲ್ಲಿ ಈ ನೃತ್ಯಗಳನ್ನು ಮಾಡುವರು. ಗೂಮಾರ್ ವೃತ್ತಾಕಾರದ ನೃತ್ಯವಾಗಿದ್ದು, ಇದರಲ್ಲಿ ಹೆಂಗಸರು, ಗಂಡಸರು ತಾವು ಹಾಡುವ ಹಾಡಿನ ಲಯಕ್ಕೆ ಅನುಗುಣವಾಗಿ ನರ್ತಿಸುವರು. ಈ ಹಾಡುಗಳು ಕೆಲವು ಘಟನೆಗಳಿಗೆ ಸಂಬಂಧಿಸಿದುವಾಗಿವೆ; ಆದರೆ ನೃತ್ಯಕ್ಕೂ ವಾದ್ಯಗಳ ಸಂಗೀತಕ್ಕೂ ಯಾವುದೇ ಹೊಂದಾಣಿಕೆ ಇರುವುದಿಲ್ಲ. ರಾಗ ತುಂಬ ಸರಳವಾಗಿರುತ್ತದೆ; ಅಂಗಾಂಗಗಳ ಚಲನೆ ನೃತ್ಯ ಮುಂದುವರಿದಂತೆ ತುಂಬ ಆಕರ್ಷಕವೂ ಚುರುಕಾದುದೂ ಆಗುತ್ತದೆ.

ಗರ್ ಕೂಡ ಹೋಳಿ ಸಂದರ್ಭದಲ್ಲಿ ಮಾಡುವಂಥ ಸಮುದಾಯ ನೃತ್ಯವೇ ಆಗಿದೆ. ಇದು ಕೇವಲ ಪುರುಷರ ನೃತ್ಯ. ಥಾಲಿಗಳೊಡನೆ ದೊಡ್ಡ ಡೋಲು ಬಡಿಯು ವಾಗ ಈ ನೃತ್ಯ ಮಾಡಲಾಗುವುದು. ಅದರ ಲಯ ಅಧಿಕಗೊಂಡಂತೆ ನೃತ್ಯವು ರೋಮಾಂಚಕಾರಿಯಾಗುತ್ತದೆ ಹಾಗೂ ನರ್ತಿಸುವವರು ತಮ್ಮ ಕೈಯಲ್ಲಿ ಹಿಡಿದ ಕೋಲುಗಳನ್ನು ಬಡಿಯುತ್ತ ತಮ್ಮ ಚಲನೆಯನ್ನು ತೀವ್ರಗೊಳಿಸುವರು.

ಹೋಳಿಯ ಸಮಯದಲ್ಲಿ ಮತ್ತೊಂದು ನೃತ್ಯದಲ್ಲಿ ಗೆರ್ ಮತ್ತು ಗೂಮರ್‌ಗಳ ಸಂಯೋಗವಿದೆ. ಅದನ್ನು ಗೂಮರ್ ಹಬ್ಬ ಎಂದು ಕರೆಯಲಾಗುವುದು; ಅದು ತುಂಬ ಉತ್ಸಾಹದಾಯಕವಾಗಿರುವುದು. ಗಂಡಸರು, ಹೆಂಗಸರು ತಮ್ಮ ಉತ್ತಮ ಉಡುಪು ಧರಿಸಿ, ಸಂತೋಷದಿಂದ, ಸ್ವೇಚ್ಛೆಯಿಂದ ನೃತ್ಯದಲ್ಲಿ ಪಾಲ್ಗೊಳ್ಳುವರು; ಇದೊಂದು ನಯನಮನೋಹರ ದೃಶ್ಯವಾಗಿರುತ್ತದೆ.

ಭಿಲ್ಲರು ಮತ್ತು ಮೀನರಲ್ಲಿ ಮದುವೆಯ ತರುವಾಯ ವಧುವಿನ ಬೀಳ್ಕೊಡು ಗೆಯ ಸಮಯ ನೃತ್ಯಕ್ಕೆ ತುಂಬ ಮುಖ್ಯವಾದ ಸಂದರ್ಭವಾಗಿರುತ್ತದೆ. ವರನ ಕಡೆಯವರು ಕತ್ತಿಗಳನ್ನು ಹಿಡಿದು ಥಾಲಿಗಳು ಮತ್ತು ಮದ್ದಳೆಗಳ ಹಿಮ್ಮೇಳದಲ್ಲಿ ಕುಣಿಯುತ್ತಾರೆ. ವಧುವಿನ ಕಡೆಯ ಹೆಂಗಸರು ತಮ್ಮ ಕೈಗಳಲ್ಲಿ ಬುಟ್ಟಿಗಳು ಹಾಗೂ ಕಸಪೊರಕೆಗಳನ್ನು ಹಿಡಿದು ಹಿಂದಕ್ಕೂ ಮುಂದಕ್ಕೂ ಚಲಿಸುವರು.

ನೇಜವು ಖೇರ್ವಾರ ಹಾಗೂ ದುಂಗ್ರಾಪುರಗಳಲ್ಲಿ ಮೀನರು ಮಾಡುವ ನರ್ತನ ಕ್ರೀಡೆಯಾಗಿದ್ದು, ಇದನ್ನು ಸಾಮಾನ್ಯವಾಗಿ ಹೋಳಿಯಾದ ಮೂರನೆಯ ದಿನ ಆಡುವರು. ಮಹಿಳೆಯರು ಒಂದು ದೊಡ್ಡ ಕಂಬ ನೆಟ್ಟು, ಅದರ ತುದಿಗೆ ಒಂದು ತೆಂಗಿನ ಕಾಯಿ ಕಟ್ಟುವರು. ಗಂಡಸರು ಕಂಬಹತ್ತಿ ತೆಂಗಿನಕಾಯಿ ಕಿತ್ತುಕೊಂಡು ಹೋಗುವುದನ್ನು ತಡೆಗಟ್ಟುವ ಸಲುವಾಗಿ ಸಣ್ಣ ಕಡ್ಡಿಗಳು ಮತ್ತು ಚಾವಟಿಗಳನ್ನು

ಹಿಡಿದುಕೊಂಡು, ಹೆಂಗಸರು ಕಾಯುತ್ತಿರುವರು. ನೃತ್ಯಗಾತಿಯರು ಬೆನ್ನಿನ ಮೇಲೆ ದೊಣ್ಣೆಗಳಿಂದ ಹೊಡೆಯುತ್ತ, ಚಾವಟಿಗಳಿಂದ ಬಾರಿಸುತ್ತ ಅವರನ್ನು ಅಟ್ಟುವರು.

ಉದಯಪುರದ ಭಿಲ್ಲರ ಗೌರಿ ನೃತ್ಯವು ಸಂಪೂರ್ಣವಾಗಿ ಧಾರ್ಮಿಕ ನೃತ್ಯ. ಇದನ್ನು ಅವರು ತಮ್ಮ ಇಷ್ಟದೇವವಾದ ಭೈರವನನ್ನು ತೃಪ್ತಿಪಡಿಸುವ ಸಲುವಾಗಿ ಶ್ರಾವಣ–ಭಾದ್ರಪದಗಳಲ್ಲಿ ಮಾಡುವರು. ಈ ನೃತ್ಯವು ಶಿವನ ಜೀವನವನ್ನು ಆಧರಿಸಿ ದುದಾಗಿದ್ದು ಬೆಳಗಿನಿಂದ ಸಂಜೆಯುವರೆವಿಗೂ ಸಾಗುತ್ತದೆ. ಭಿಲ್ಲರು ಮಳೆಗಾಲದಲ್ಲಿ ತಮ್ಮ ಮನೆಗಳಿಂದ ದೂರವಿರುತ್ತಾರೆ. ಈ ಸಮಯುವನ್ನು ಅವರು ಶಿವನ ಒಂದು ವಿಶೇಷಣವಾದ 'ಭೂಧಿಯ'ನ ಕಥೆಗಳಿಗೆ ಸಂಬಂಧಿಸಿದ ಅಂಶಗಳನ್ನು ನೃತ್ಯದ ಮೂಲಕ ಪ್ರದರ್ಶಿಸಲು ಉಪಯೋಗಿಸಿಕೊಳ್ಳುತ್ತಾರೆ. ಈ ನೃತ್ಯವು ತನ್ನ ವೈವಿಧ್ಯ, ವರ್ಣಮಯತ್ವಗಳಿಂದ ದಕ್ಷಿಣ ಭಾರತದ ಕಥಕ್ಕಳಿಯನ್ನು ನೆನಪಿಗೆ ತರುತ್ತದೆ. ಭಿಯಾನ್‌ವಾಡ್, ಬಂಜಾರ, ಖಾಡ್ಲಿಯ ಭೂತ ಮತ್ತು ಹುಲಿ–ಹಂದಿಕಾಳಗ–ಇವು ಗೌರಿಗೆ ಹೆಚ್ಚಿನ ಆಕರ್ಷಣೆ ಹಾಗೂ ಪರಿಣಾಮಗಳನ್ನು ಉಂಟುಮಾಡುತ್ತವೆ.

ಬಂಜಾರರು ಎಲ್ಲ ಬಗೆಯ ಸಾಮಾನು ಸರಂಜಾಮುಗಳನ್ನು ತಮ್ಮ ಎತ್ತಿನ ಗಾಡಿ ಗಳಲ್ಲಿ ಸ್ಥಳದಿಂದ ಸ್ಥಳಕ್ಕೆ ಸಾಗಿಸುವ ರಾಜಾಸ್ಥಾನದ ಅಲೆಮಾರಿ ಬುಡಕಟ್ಟಿನವರು. ಈಚೀಚೆಗೆ ಅವರು ಬೆಟ್ಟಗಾಡು ಪ್ರದೇಶಗಳಲ್ಲಿ ನೆಲಸಿದ್ದಾರೆ. ಒಂದು ಜನಾಂಗವಾಗಿ ಅವರು ನೃತ್ಯಪ್ರಿಯರು. ಅವರ ಮಹಿಳೆಯರ ಉಡುಪುಗಳು ಸುಂದರವೂ, ವರ್ಣ ಮಯವೂ ಆಗಿದ್ದು, ಸಾಮಾನ್ಯವಾಗಿ ಅವರು ಜೊತೆ–ಜೊತೆಯಾಗಿ ನರ್ತಿಸು ವರು. ನರ್ತನಕ್ಕೆ ಗಂಗೌರ್ ಉತ್ಸವವು ತುಂಬ ದೊಡ್ಡ ಸಂದರ್ಭ; ಬಂಜಾರರು ***ಡೋಲಕ್***‌ನ ಬಡಿತಕ್ಕೆ ನರ್ತಿಸುವರು; ಡೋಲಕ್ ಇಲ್ಲದಿರುವಾಗ ***ಥಾಲಿ*** ಮತ್ತು ***ಕಟೋರಿ***ಗಳನ್ನು ಬಡಿಯುತ್ತ ಸಂಗೀತವೇರ್ಪಡಿಸುವರು.

ಬಗೇರಿಯುಗಳದು ಮತ್ತೊಂದು ಅಲೆಮಾರಿ ಬುಡಕಟ್ಟು; ಪ್ರಾಯಃ ಇವರು ಅತ್ಯಂತ ಬಡವರು; ಕಸಪೊರಕೆಗಳನ್ನು ಮಾರುವರು; ತಿರುಪೆ ಮಾಡುವವರು. ಗಂಡಸರು ಕುಣಿಯುವುದಿಲ್ಲ. ಆದರೆ ವರ್ಣಮಯ ಸಂಗೀತಕ್ಕೆ ಅನುಗುಣವಾಗಿ ಹೆಂಗಸರು ಸುಂದರವಾಗಿ ನರ್ತಿಸುವರು. ಸಾಮಾನ್ಯವಾಗಿ ಬಳಸುವ ವಾದ್ಯವೆಂದರೆ ***ಚಾಂಗ್***. ಬಗೇರಿಯ ಮಹಿಳೆಯರು ಮನೆಯಿಂದ ಮನೆಗೆ ಭಿಕ್ಷೆ ಬೇಡುತ್ತ, ನರ್ತಿಸುತ್ತಾ ಸಾಗುವರು.

ಭಿಲ್ಲರು ಮತ್ತು ಮೀನರಂತೆ ಮತ್ತೊಂದು ಗುಡ್ಡಗಾಡು ಬುಡಕಟ್ಟು ಗರೇಸಿಯ ಗಳದು. ಸಮುದಾಯ ನೃತ್ಯದೊಡನೆ ಇವರು ಹೋಳಿ ಮತ್ತು ಗಂಗೌರ್ ಹಬ್ಬಗಳನ್ನು ಆಚರಿಸುವರು. ಗರ್ವವು ಗಂಗೌರಿನ ಮನೋಹರವಾದ ನೃತ್ಯವಾಗಿದ್ದು, ಇದರಲ್ಲಿ ಹೆಂಗಸರು ಮಾತ್ರವೇ ಪಾಲ್ಗೊಳ್ಳುವರು. ವೆಲಾರ್ ಗಂಗೌರ್‌ನ ಮತ್ತೊಂದು ನೃತ್ಯ ವಾಗಿದ್ದು, ಇದರಲ್ಲಿ ಗಂಡಸರು ಹಾಗೂ ಹೆಂಗಸರು ಪಾಲ್ಗೊಳ್ಳುವರು. ನರ್ತಕರು ಹೆಚ್ಚಿನ ಸಂಖ್ಯೆಯಲ್ಲಿದ್ದು, ಅವರ ಚಲನೆಯಲ್ಲಿ ಏಕರೂಪತೆ ಹಾಗೂ ಲವಲವಿಕೆ ಈ ನೃತ್ಯದ ಗಮನಾರ್ಹ ಅಂಶಗಳಾಗಿದ್ದು, ಇದು ಭಿಲ್ಲರ ಗೌರಿಯನ್ನು ಹೋಲುತ್ತದೆ.

ಗರೇಸಿಯಗಳ ಗೇರ್ ನೃತ್ಯವು ಭಿಲ್ಲರದಂತೆಯೇ ಇರುವುದಾದರೂ, ಇದರಲ್ಲಿ

ಹೆಂಗಸರು ಪಾಲ್ಗೊಳ್ಳಲು ಅವಕಾಶವಿರುವುದಿಲ್ಲ. ನರ್ತಕನು *ದಂಡಿ* (ದಂಡ)ಗಳನ್ನು ಹಿಡಿದುಕೊಂಡಿರುತ್ತಾರೆ. ದೊಡ್ಡ ನಗಾರಿ ಮತ್ತು *ಥಾಲಿಯ* ಸಹಾಯದಿಂದ ತಾಳ ಒದಗಿಸಲಾಗುತ್ತದೆ. ತುಂಬ ಜೀವಂತವಾಗಿರುವ, ಉತ್ಸಾಹಪೂರ್ಣವಾಗಿರುವ ಹೋಳಿ ನೃತ್ಯ ಇದಾಗಿದೆ.

ಗರೇಸಿಯಗಳ ಮತ್ತೊಂದು ಹೋಳಿ ನೃತ್ಯವೇ *ಚಾಂಗ್*. ಒಬ್ಬ *ಚಾಂಗ್* ನುಡಿಸುತ್ತಿರುತ್ತಾನೆ. ತಮ್ಮ ಕೈಯಲ್ಲಿ ದಂಡಗಳನ್ನು ಹಿಡಿದಿರುವ ಅನೇಕ ನರ್ತಕರು ಅವ್ಯವಸ್ಥೆಯ ಗುಂಪಿನಲ್ಲಿ ಚಲಿಸುತ್ತ, ನೆಗೆಯುವರು. ಈ ನರ್ತನದ ವೈಶಿಷ್ಟ್ಯವೆಂದರೆ, ನರ್ತಕರು ರೋಮಾಂಚಕಾರಿಯಾದ, ಆದರೆ ಅಶ್ಲೀಲವಾದ ಹಾಡುಗಳನ್ನು ಹಾಡುತ್ತ ಲಯಬದ್ಧವಾಗಿ ನೆಗೆಯುವುದೇ ಆಗಿದೆ. ಹೆಂಗಸರು ನೃತ್ಯದಲ್ಲಿ ಪಾಲ್ಗೊಳ್ಳುವುದಿಲ್ಲ; ಆದರೆ ನೆಗೆಯುವ ಪುರುಷ ನರ್ತಕರೊಡನೆ ಹಾಡುತ್ತಾ ಅವರು ಸಾಗುವರು.

ಕಾಲ್ಬೇಲಿಯಾಗಳು ಹಾವಾಡಿಗರು; ಪಾರಂಪರಿಕವಾಗಿಯೇ ಇವರು ಸಂಗೀತ-ನರ್ತನಗಳಲ್ಲಿ ಆಸಕ್ತರು. ಅವರು ಒಂಟಿಯಾಗಿಯೂ, ಕೆಲವೊಮ್ಮೆ ಜೋಡಿಯಾಗಿಯೂ ನರ್ತನ ಮಾಡುವರು; ಕಾಲ್ಬೇಲಿಯ ಹಾಗೂ ಅವನ ಮಡದಿ ತಮ್ಮ ಉತ್ಪತ್ತಿಯನ್ನು ಹೆಚ್ಚಿಸಿಕೊಳ್ಳಲು ನರ್ತಿಸುವರು. ಇಂಡೋನಿ, ಶಂಕರಿಯ ಹಾಗೂ ಪಾನಿಹರಿ-ಇವು ಅವರ ಜನಪ್ರಿಯ ನರ್ತನಗಳು. ಇಂಡೋನಿ ಮತ್ತು ಪಾನಿಹರಿ -ಇವೆರಡೂ ಜನಪ್ರಿಯವಾದ ಜನಪದ ಗೀತೆಗಳಾಗಿದ್ದು, ನರ್ತನಗಳು ಅವನ್ನಾಧರಿಸಿವೆ. ಇಂಡೋನಿಯು ವರ್ತುಲಾಕಾರದಲ್ಲಿ ಮಾಡುವಂಥ ಸಾಮೂಹಿಕ ನೃತ್ಯವಾಗಿದೆ. ತಾಳಕ್ಕಾಗಿ ಬಳಸಿಕೊಳ್ಳುವ ವಾದ್ಯಗಳೆಂದರೆ ಪುಂಗಿ ಮತ್ತು ಖಂಜರಿ. ಹಾವಾಡಿಗರ ಮಡದಿಯರ ಉಡುಪುಗಳು ವರ್ಣಮಯವೂ, ಕಸೂತಿ ಹಾಕಿದುವೂ ಆಗಿದ್ದು, ನರ್ತನಕ್ಕೆ ಸೊಗಸುಗಾರಿಕೆಯನ್ನುಂಟು ಮಾಡುತ್ತವೆ.

ಶಂಕರಿಯದಲ್ಲಿ ದಂಪತಿಗಳು ನರ್ತಿಸುವರು; ಇದು ಪ್ರೇಮಕಥೆಯನ್ನಾಧರಿಸಿದೆ; ಚಲನವಲನಗಳಲ್ಲಿ ತುಂಬ ಕಲಾತ್ಮಕವಾಗಿರುತ್ತದೆ.

ಪಾನಿಹರಿಯಲ್ಲಿ ಕೂಡ ಜೋಡಿಯೇ ನರ್ತಿಸುವುದು; ಅದು ತನ್ನ ಶ್ರೋತೃಗಳ ಮೇಲೆ ತನ್ನದೇ ಆದ ಮೋಹಕತೆಯನ್ನು ಬೀರುತ್ತದೆ.

ಮೇವಾರದ ಅದ್ಭೋಪರು ಕಡುಬಡತನದಲ್ಲಿ ಇರುವವರಾದರೂ ಅವರ ಹೆಂಗಸರಿಗೆ ಮಧುರವಾದ ಕಂಠ ದೈವದತ್ತವಾಗಿದೆ; ಅವರು ಭಿಕ್ಷೆ ಬೇಡುವಾಗ ಹಾಡುತ್ತಾರೆ; ವೃತ್ತಿಪರ ಮನರಂಜಕರಾಗಿ ನರ್ತಿಸುವುದೂ ಉಂಟು.

ಸಂಗೀತಗಾರರು ಹಾಗೂ ನರ್ತಕರ ಜನಾಂಗವಾದ ಭವಾಯಿಗಳ ಪೈಕಿ ಜಾಟರು, ಚಮಾರರು, ರಾಯಗರಗಳು, ಭಿಲ್ಲರು, ಮೀನರು ಮತ್ತು ಕುಮ್ಹಾರರು ಸೇರಿರುವರು. ಅವರ ನೃತ್ಯಗಳು ದೈಹಿಕವಾಗಿ ಕಸುವುಳ್ಳದ್ದಾಗಿದ್ದು, ನರ್ತಕರು ಉತ್ತಮ ದೇಹ ದಾರ್ಢ್ಯ ಪಡೆಯುವಲ್ಲಿ ನೆರವಾಗುವುದು. ಅವರ ಮಡದಿಯರು ಯಜಮಾನರಿಗೆ-ಆಶ್ರಯದಾತರಿಗೆ-ಮನರಂಜನೆಯುಂಟು ಮಾಡಲು ನೃತ್ಯದಲ್ಲಿ ಪಾಲ್ಗೊಳ್ಳುವುದಿಲ್ಲ.

ರಾಜಾಸ್ಥಾನದ ಜನಪದ ಕಲೆಗಳ ಸಂರಕ್ಷಣೆಗಾಗಿ ತುಂಬ ಕೆಲಸ ಮಾಡಿರುವಂಥ

ದೇವಿಲಾಲ್ ಸಮರ್‌ರವರು ಭವಾಯಿಗಳ ಕನಿಷ್ಠ ಹನ್ನೆರಡು ನೃತ್ಯಗಳನ್ನು ಪಟ್ಟಿ ಮಾಡಿರುವರು. ಅವುಗಳ ಪೈಕಿ ಕೆಲವು ವಿನೋದದವು; ಮತ್ತೆ ಕೆಲವು ಅವರ ದೈಹಿಕ ತರಬೇತಿಯ ಪ್ರದರ್ಶಕಗಳಾಗಿವೆ. ರಾಜಾಸ್ಥಾನದ ಪ್ರೇಮಲಾವಣಿಗಳು ಕೂಡ ಅವರ ನೃತ್ಯದ ವಸ್ತುಗಳಾಗಿವೆ. ಮಡಿಕೆ ನೃತ್ಯ, ಸೀಸೆ ನೃತ್ಯ, ಮತ್ತು ಕತ್ತಿ ನೃತ್ಯ–ಇವು ದೇಹದ ತೀವ್ರ ಚಲನೆಯ ಸಮತೋಲನದ ಚಮತ್ಕಾರಗಳಾಗಿವೆ.

## ಮರುಭೂಮಿ ಪ್ರದೇಶ

ಗೂಮಾರ್–ಜುಮಾರ್ ಎಂದೂ ಕರೆಯಲಾಗುವುದು–ಅನ್ನು ರಾಜಾಸ್ಥಾನದ ಸ್ತ್ರೀಯರ ರಾಷ್ಟ್ರೀಯ ನೃತ್ಯ ಎಂದು ವಿವರಿಸಬಹುದು. ನೂರಾರು ಮಹಿಳೆಯರು ಸೇರಿ ಬೃಹತ್ ವೃತ್ತಾಕಾರದಲ್ಲಿ ನರ್ತಿಸುವಂಥ ಸಾಮೂಹಿಕ ನೃತ್ಯ ಇದಾಗಿದೆ. ಉದಯಪುರ, ಜೋಧ್‌ಪುರ ಮತ್ತು ಕೋಟಾ–ಬುಂಡಿ ಪ್ರದೇಶಗಳಲ್ಲಿ ಹಬ್ಬದ ದಿನಗಳಲ್ಲಿ ಮಧ್ಯಮವರ್ಗದ ಕುಟುಂಬಗಳಲ್ಲಿ ವಿಭಿನ್ನ ಬಗೆಗಳಲ್ಲಿ ನೃತ್ಯ ನಡೆಯುವುದರಿಂದ ಇದು ತುಂಬ ಜನಪ್ರಿಯವಾಗಿದೆ ಎಂಬ ಅಂಶ ಮನದಟ್ಟಾಗುತ್ತದೆ. ಉದಯಪುರದಲ್ಲಿ ಇದು ಪಕ್ಕದ ಗುಜರಾತಿನ ಗಾರ್ವವನ್ನು ಹೋಲುತ್ತದೆ; ತುಂಬ ಸಂಗೀತಮಯವಾಗಿದೆ. ಜೋಧಪುರದಲ್ಲಿ ಅಂಗಾಂಗಗಳ ಚಲನೆ ಚುರುಕಿನ ರೀತಿಯದಾಗಿದೆ. ಕೋಟ–ಬುಂಡಿಯ ಗೂಮರ ತುಂಬ ತುಂಬ ಜೀವಕಳೆಯಿಂದ ಕೂಡಿದುದೂ ಚಿತ್ತಾಕರ್ಷಕವಾದುದೂ ಆಗಿದೆ. ಈ ನೃತ್ಯದ ಜೊತೆಗೆ ಸಾಗುವ ಹಾಡಿನ ರಾಗವು ಸುಮಧುರವಾದುದೂ ಮನಸೆಳೆಯುವಂಥದೂ ಆಗಿದೆ.

ಬಿಕನೀರಿನ ಸಿದ್ಧಜಾಟರ ಅಗ್ನಿನೃತ್ಯವು ತನ್ನ ಕೌತುಕಕಾರಿಯಾದ, ಅಚ್ಚರಿ ಮೂಡಿಸುವ ಪ್ರಭಾವದಿಂದಾಗಿ ಗಮನಾರ್ಹವಾಗಿದೆ. ಬಿಕನೀರಿನ ಮಹಾರಾಜ ಗಂಗಾ ಸಿಂಗ್‌ರವರು ಕಟರಿಯಾಸಾರ್, ಭಾಮ್ಲು, ದಿಕಮ್ದೇಸರ್ ಮತ್ತು ಇತರ ಗ್ರಾಮಗಳಲ್ಲಿ ವಾಸಿಸುತ್ತಿದ್ದ ಈ ಅಗ್ನಿನರ್ತಕರ ಮಹಾನ್ ಪೋಷಕರಾಗಿದ್ದರು.

ಅಗ್ನಿನರ್ತಕರು ಗುರು ಗೋರಖನಾಥರ ಶಿಷ್ಯ ಗುರು ಜಸನಾಥನ ಅನುಯಾಯಿಗಳು. ಈ ಅಗ್ನಿನೃತ್ಯವು ಗೋರಖನಾಥರ ಹಿಂಬಾಲಕರಾದ ಯೋಗಿಗಳ ಮಾದರಿ ಪವಾಡದಂತೆಯೇ ಇದೆ.

ತಮಟೆಗಳನ್ನು ಬಡಿಯುತ್ತ, *ಭೇರ್* ಬಾರಿಸುತ್ತ, ಹಾಡನ್ನು ಹಾಡುತ್ತ ಈ ನರ್ತಕರು ಉತ್ಸವಾಗ್ನಿಯನ್ನು ಏರ್ಪಡಿಸುವರು. ಗೊಂದಲದ ಸಂಗೀತದಿಂದ ಸ್ಫೂರ್ತಿಗೊಂಡು, ಮುದುಕರೂ, ಮಕ್ಕಳೂ ಸೇರಿದಂತೆ ನರ್ತಕರು ಬೆಂಕಿಗೆ ನೆಗೆದು, ಅದರ ಮೇಲೆ ನರ್ತಿಸುತ್ತಾರೆ. ನರ್ತನ ವಿಶಿಷ್ಟಗತಿ ತಲುಪಿದಂತೆ ಅವರು ಉರಿಯುವ ಕೆಂಡಗಳನ್ನು ಎತ್ತಿ ಬೇರೆಯವರ ಮೇಲೆ ಎಸೆಯುವರಾದರೂ ಯಾವುದೇ ಹಾನಿಯಾಗುವುದಿಲ್ಲ. ಈ ನರ್ತನ ಅರ್ಧ ಗಂಟೆ ಮುಂದುವರಿಯುತ್ತದೆ; ನರ್ತಕರಿಗೆ ಸುಟ್ಟ ಗಾಯಗಳನ್ನುಂಟು ಮಾಡುವುದಿಲ್ಲ ಎಂದೂ ಹೇಳಲಾಗುತ್ತದೆ.

ಜಾಲೋರಿನ ನಗಾರಿನರ್ತಕರು ವೃತ್ತಿಪರರಾದವರು. ರಾಜಾಸ್ಥಾನದ ಜನಪ್ರಿಯ ನೇತಾರ ಹಾಗೂ ಮಾಜಿ ಮುಖ್ಯಮಂತ್ರಿ ದಿವಂಗತ ಜೈನಾರಾಯಣ್ ವ್ಯಾಸ

ಇವರನ್ನು ಪ್ರಾಮುಖ್ಯಕ್ಕೆ ತಂದರು. ವಿವಾಹಗಳ ಸಂದರ್ಭದಲ್ಲಿ ಮಾಡಲಾಗುವ ಈ ಪುರುಷರ ನೃತ್ಯವು ವಿವಿಧ ಜನಪದ ನೃತ್ಯಗಳ ಸಂಯೋಗವಾಗಿದೆ. ನಾಲ್ಕೈದು ನಗಾರಿಗಳನ್ನು ಏಕಕಾಲದಲ್ಲಿ ಬಾರಿಸಲಾಗುವುದು; ನರ್ತಕರ ಪೈಕಿ ಒಬ್ಬ ತನ್ನ ಹಲ್ಲುಗಳಲ್ಲಿ ಒಂದು ಕತ್ತಿ ಹಿಡಿದಿರುತ್ತಾನೆ, ಮತ್ತೊಬ್ಬ ತನ್ನ ಕೈಗಳಲ್ಲಿ ದೊಣ್ಣೆಗಳನ್ನು ಹಿಡಿದಿರುತ್ತಾನೆ. ಮೂರನೆಯವನು ತನ್ನ ಕೈಗಳಿಂದ ಕರವಸ್ತ್ರವನ್ನು ಬೀಸುತ್ತಿರುತ್ತಾನೆ. ಉಳಿದವರು ನರ್ತನದ ಲಯಕ್ಕೆ ಅನುಗುಣವಾಗಿ ಸುಮ್ಮನೆ ಚಲಿಸುತ್ತಾರೆ.

ತೇರಾತಾಲಿಯು ಮರುಭೂಮಿಯ ವಿಶಿಷ್ಟ ನೃತ್ಯ ಪ್ರಕಾರವಾಗಿದೆ; ದೀದ್ವಾನ ಹಾಗೂ ಪೋಕಾರನ್ ಅದರ ಕೇಂದ್ರಗಳಾಗಿವೆ. ಈ ನೃತ್ಯ ಪ್ರಕಾರವನ್ನು ಪಾಲಿಸುವವರನ್ನು ಕಾಮಾಡ್‌ಗಳೆನ್ನುವರು; ಸಾಮಾನ್ಯವಾಗಿ ಒಂದು ತಂಡದಲ್ಲಿ ಇಬ್ಬರು ಗಂಡಸರು, ಇಬ್ಬರು ಹೆಂಗಸರಿರುತ್ತಾರೆ. ಪುರುಷರು ಏಕತಾರಾವನ್ನು ಬಾರಿಸುತ್ತಾ ಹಾಡಿದರೆ, ಹೆಂಗಸರು ತಮ್ಮ ದೇಹಗಳ ವಿವಿಧ ಭಾಗಗಳಿಗೆ ಕಟ್ಟಲಾಗಿರುವ *ಮಂಜೀರ*ಗಳಿಂದ ವಿವಿಧ ಸಂಗೀತಸ್ವರಗಳನ್ನು ಹೊರಡಿಸಲು ಅಗತ್ಯವಾದ ದೇಹದ ಬಾಗುಬಳುಕುಗಳು ಹಾಗೂ ಭಂಗಿಗಳು ವಿವರಣೆಗೂ ನಿಲುಕಲಾರದಷ್ಟು ಕಠಿಣವಾಗಿದೆ.

ಮಾರವಾರದಲ್ಲಿ ವಿವಾಹಗಳ ಸಮಯದಲ್ಲಿ ನಾಲ್ಕೈದು ಜನ ನರ್ತಕರು *ಡೋಲು* ಮತ್ತು *ತುರ್ಹಿ*ಯ ಹಿಮ್ಮೇಳದಲ್ಲಿ ಮಾಡುವ ನೃತ್ಯವೇ ಕಚ್ಚಿ ಘೋರಿ ನೃತ್ಯ. ಇದು ಯೋಧರು ಕುದುರೆ ಸವಾರಿ ಮಾಡುವ ದೃಶ್ಯವನ್ನು ಪ್ರದರ್ಶಿಸುತ್ತದೆ.

ಮಾರವಾರದವರೇ ಆದ ಕನ್-ಗುಜರೀ ನರ್ತಕರು ಭಿಕ್ಷುಕರು; ತಮ್ಮನ್ನು ರಾಧಾ-ಕೃಷ್ಣರ ಅವತಾರಗಳೆಂದು ಹೇಳಿಕೊಳ್ಳುವರು. *ರಾವಣಹತ್ತ*ದ ಮಟ್ಟುಗಳಿಗೆ ಹಾಡುತ್ತ, ತುಂಬ ಕಲಾತ್ಮಕವಾದ ರೀತಿಗಳಲ್ಲಿ ಚಲಿಸುತ್ತ ಮನೆಯಿಂದ ಮನೆಗೆ ಸಾಗಿ ಭಿಕ್ಷೆ ಬೇಡುವರು.

ಭೋಪರು ಗಾಯಕ ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಇದನ್ನು ಐದು ಪಂಗಡಗಳಾಗಿ ವಿಭಜಿಸಲಾಗಿದೆ. ಇವರು ಕೂಡ ನರ್ತಿಸುತ್ತಾರೆ; ಗೋಗಾಜಿ, ಮಾತಾಜಿ ಮತ್ತು ಭೈರೋಜಿಯ ಪಂಗಡಗಳವರು ನರ್ತಿಸುತ್ತ ಎಂಥ ಭಾವಾವೇಶಕ್ಕೆ ಒಳಗಾಗುತ್ತಾರೆಂದರೆ, ಕೆಲವೊಮ್ಮೆ ಅವರು ಪ್ರಜ್ಞಾಹೀನರಾಗುವುದೂ ಉಂಟು.

## ಪೂರ್ವ ಪ್ರದೇಶ

ರಾಜಾಸ್ಥಾನದ ಪೂರ್ವಭಾಗವು ಉತ್ತರಪ್ರದೇಶದ ಬ್ರಜ್ ಪ್ರದೇಶದ ನೆರೆಯಲ್ಲಿದೆ; ಪ್ರಾಯಃ ಈ ಸಂಬಂಧದಿಂದಾಗಿಯೇ ಅಲ್ಲಿ ರಾಸ-ಲೀಲೆ, ರಾಮ-ಲೀಲೆ, ನೌಟಂಕಿ ಮತ್ತಿತರ ನೃತ್ಯ ಪ್ರಕಾರಗಳ ಶ್ರೀಮಂತ ಪರಂಪರೆಯನ್ನು ಪಾಲಿಸಿಕೊಂಡು ಬರಲಾಗಿದೆ.

ಗಿಂಡಾರ್‌ನ ಸಾಮುದಾಯಿಕ ನೃತ್ಯವು ಹೋಳಿಯ ಸಮಯದಲ್ಲಿ ಇಡೀ ರಾತ್ರಿ ನಡೆಯುತ್ತದೆ. ಇದೊಂದು ಪ್ರಜಾಸತ್ತಾತ್ಮಕ ನೃತ್ಯ; ದರಲ್ಲಿ ಸವರ್ಣೀಯ ಹಿಂದುಗಳು ಹಾಗೂ ಹರಿಜನರು ವೃತ್ತಾಕಾರದಲ್ಲಿ ಕೈಗೂಡಿಸುತ್ತಾರೆ; ಮಧ್ಯಭಾಗದಲ್ಲಿ

ಮರದ ವೇದಿಕೆಯ ಮೇಲೆ *ನಗಾರ*ವನ್ನು ನುಡಿಸಲಾಗುವುದು. ತಗ್ಗುಸ್ವರದಿಂದ ಆರಂಭಗೊಳ್ಳುವ *ನಗಾರ*ಗಳು ತಾರಸ್ವರವನ್ನು ತಲುಪುತ್ತವೆ. *ನಗಾರ*ದ ಪ್ರತಿಯೊಂದು ಬಡಿತಕ್ಕೆ ನರ್ತಕರು ತಮ್ಮ ದೊಣ್ಣೆಗಳನ್ನು ಬಡಿಯುವರು ಹಾಗೂ ತಮ್ಮ ಕಾಲಿಗೆ ಕಟ್ಟಲಾಗಿರುವ '*ಗುಂಗ್ರೂ*'ಗಳ ನಾದ ಮಾಡುವರು.

ಕಂಜಾರರು ಹಾಗೂ ಸಾಂಸಿಗಳು ರಾಜಾಸ್ಥಾನದ ಹಿಂದಿನ ಅಪರಾಧಿ ಬುಡಕಟ್ಟಿನವರಾಗಿದ್ದು, ಈ ಬುಡಕಟ್ಟಿನ ಮಹಿಳೆಯರು ಉತ್ತಮ ನರ್ತಕಿಯರು. ಆದರೂ ಸಾಂಸಿ ಮಹಿಳೆಯರ ನೃತ್ಯಗಳು ಅಸ್ತವ್ಯಸ್ತವಾದುವು, ವೈಯಕ್ತಿಕವಾದುವು, ಅಶ್ಲೀಲವಾದುವು; ಅತ್ಯಲ್ಪ ಹಣಕ್ಕೂ ಇವರು ನರ್ತಿಸುವರು. ಕಂಜಾರ ಮಹಿಳೆಯರು ಮುಸ್ಲಿಮರಾದರೂ ಹಿಂದೂಗಳಂತೆ ಕಾಣುವರು; ಅಗ್ಗದ ಹಲವು ಬಗೆಯ ಆಭರಣಗಳು ಹಾಗೂ ಮಣಿಗಳಿಂದ ಅಲಂಕರಿಸಿಕೊಳ್ಳುವರು. ಅವರು ಚೆನ್ನಾಗಿ ಹಾಡುತ್ತಾರೆ, ಉತ್ಸಾಹಪೂರ್ಣವಾಗಿ ನರ್ತನ ಮಾಡುತ್ತಾರೆ; ಪುರುಷರು *ಚಾಂಗ್* ಮತ್ತು *ಡೋಲಕ್* ಬಾರಿಸುವರು. ಅವರ ನೃತ್ಯಗಳ ಪೈಕಿ ಒಂದನ್ನು ಲಾಠಿಗಳೊಡನೆ ಮಾಡುವರು. ಅವರು ಹೋಳಿ ಮತ್ತು ದಿವಾಳಿಯಂಥ ಹಬ್ಬಗಳಲ್ಲಿ ಜೀವನ ನಿರ್ವಹಣೆಗಾಗಿಯೂ ನೃತ್ಯಮಾಡುವರು.

ನಾಯಕರು, ಚಮಾರರು ಮತ್ತು ಮೆಹ್ತಾರರು–ಇವರೆಲ್ಲ ಹರಿಜನರು–ಇವರ ನೃತ್ಯಗಳು ತುಂಬ ಆಕರ್ಷಕವಾದುವೂ, ಜೀವಪೂರ್ಣವೂ, ಸತ್ವಶಾಲಿಯಾದುವೂ ಆಗಿರುತ್ತವೆ. ಈ ಜನಾಂಗಗಳ ಪೈಕಿ ಸುಧಾರಣಾವಾದಿಗಳು ಜನರನ್ನು ಇಂಥ ಮನೋರಂಜಕ ಪ್ರಕಾರಗಳಿಂದ *ಕಥೆಗಳು* ಮತ್ತು *ಭಜನೆ–ಕೀರ್ತನೆ*ಗಳತ್ತ ಸಾಗುವಂತೆ ಮಾಡಿರುವರು.

ಪೂರ್ವರಾಜಾಸ್ಥಾನದ ಕಚ್ಚಿ ಘೋರಿ ನೃತ್ಯವು ವಾಸ್ತವವಾಗಿಯೂ ಸಮರನೃತ್ಯವೇ ಆಗಿದೆ. ಇದರಲ್ಲಿ ವರ್ತುಲಾಕಾರವಾಗಿ ಸುತ್ತುವಂಥ, ಬಟ್ಟೆ ಅಥವಾ ಕಾಗದದ 'ಕುದುರೆ'ಗಳ ಸವಾರರು ಒಬ್ಬರಿಗೊಬ್ಬರು ಏಟುಗಳನ್ನು ಹೊಡೆಯುವರು; ಕತ್ತಿ ಮತ್ತು ಗುರಾಣಿಯ ಉಪಯೋಗವನ್ನು ಪ್ರದರ್ಶಿಸುವರು. ಈ ನರ್ತಕರನ್ನು ವಿವಾಹಗಳಲ್ಲಿ ಪ್ರದರ್ಶಿಸಲು ಆಹ್ವಾನಿಸಲಾಗುವುದು. ಷೇಕಾವತೀ ಪ್ರದೇಶದಲ್ಲಿ ಗನೇರಿ, ನೇಬ್ವಾ ಹಾಗೂ ರಾಮಘರ್ (ಶಿಕಾರ್)ನ ಕಚ್ಚಿಘೋರ್ ನೃತ್ಯಗಾರರು ಪ್ರಸಿದ್ಧರಾಗಿದ್ದಾರೆ.

# ಜಾನಪದ ವಿನೋದಗಳು

ನಿಸರ್ಗ ಒರಟಾಗಿದ್ದರೂ ಈ ನ್ಯೂನತೆಯನ್ನು ವಿವಿಧ ರೂಪಗಳಲ್ಲಿ, ವಿಶೇಷವಾಗಿ ವಾಸ್ತುಶಿಲ್ಪ ಮತ್ತು ಕಲೆಗಳಲ್ಲಿ, ಕಂಡುಬರುವ ತನ್ನ ಸೃಜನಶೀಲ ಸಹಜ ಕೌಶಲದಿಂದ ತುಂಬಿಕೊಳ್ಳಲು ಮಾನವ ಪ್ರಯತ್ನಿಸುತ್ತ ಬಂದ ಪ್ರದೇಶವಾಗಿದೆ, ರಾಜಾಸ್ಥಾನ. ಕ್ಷಾಮದಿಂದ ಮತ್ತು ಸಸ್ಯವರ್ಗಗಳಿಲ್ಲದಿರುವುದರಿಂದ ತೀವ್ರ ದುಷ್ಪರಿಣಾಮಗಳಿಗೆ ಒಳಗಾಗಿರುವ ಪಶ್ಚಿಮ ರಾಜಾಸ್ಥಾನದ ಪ್ರದೇಶಗಳಲ್ಲಿ, ಸ್ತ್ರೀಪುರುಷರು ಧರಿಸುವ ಬಣ್ಣಬಣ್ಣದ ಉಡುಪುಗಳೇ ಕಣ್ಣಿಗೆ ಹಬ್ಬವನ್ನುಂಟುಮಾಡುತ್ತವೆ. ಜೋಧಪುರ, ಬಿಕನೀರ್ ಮತ್ತು ಜೈಸಾಲ್ಮೆರ್‌ಗಳಲ್ಲಿ ಕಂಡುಬರುವ ವರ್ಣವೈವಿಧ್ಯ ಮೋಹಕವಾಗಿದೆ. ಮೌಖಿಕ ಮತ್ತು ಲಿಖಿತ–ಇವೆರಡೂ ಸಾಹಿತ್ಯಗಳನ್ನು, ಹಾಗೂ ಶಿಕ್ಷಣಲಬ್ಧ ಮತ್ತು ಜನಪದ–ಇವೆರಡೂ ಕಲೆಗಳನ್ನು ರಾಜಾಸ್ಥಾನಿಗಳು ಅಭಿವೃದ್ಧಿಪಡಿಸಿಕೊಂಡಿರುವುದಕ್ಕೆ, ಸೌಂದರ್ಯವನ್ನು ಸೃಷ್ಟಿಸಬೇಕೆಂಬ ಅವರ ಸಹಜ ಪ್ರೇರಣೆಯೇ ಕಾರಣ.

ರಾಜಮನೆತನಗಳಿಗೆ ಸೇರಿದ ಅಧಿಕಾರಿಗಳ ಸಭಾಂಗಣಗಳ ಸುತ್ತಲೇ ಬದುಕು ಕೇಂದ್ರೀಕೃತವಾಗಿರುವ ನಗರಗಳಲ್ಲಿ ಸಂಗೀತ, ನೃತ್ಯ ಮತ್ತು ವರ್ಣಚಿತ್ರಕಲೆಗಳ ಅಭಿಜಾತ ರೂಪಗಳು ಸಾಮಂತರ ಪೋಷಣೆಯಲ್ಲಿ ಉಚ್ಛ್ರಾಯ ಸ್ಥಿತಿಗೆ ಏರಿದವು. ಕ್ರಮೇಣ ಈ ರೂಪಗಳು ವಿವಿಧ ಕಲಾತ್ಮಕ ಸೂಕ್ಷ್ಮತೆಗಳನ್ನು ಅಭಿವೃದ್ಧಿಪಡಿಸಿಕೊಂಡು, ಇವುಗಳ ಪ್ರದರ್ಶನ ಕೇವಲ ವೃತ್ತಿಪರ ಸಂಬಂಧವನ್ನು ತಳೆಯಿತು. ಫಲಿತಾಂಶವಾಗಿ ಇವುಗಳನ್ನು ಪ್ರದರ್ಶಿಸುವ ಕಲಾವಿದರು ತಮ್ಮದೇ ಪ್ರತ್ಯೇಕ ಸಮುದಾಯಗಳನ್ನು ರಚಿಸಿಕೊಂಡರು. ಕಲಾಪೋಷಕರಾದ ಸಾಮಂತರು ತಮ್ಮ ಜೀವನವನ್ನು ಹೆಚ್ಚುಹೆಚ್ಚಾಗಿ, ಸಂತೋಷ ಹಾಗೂ ಇಂದ್ರಿಯಸುಖಗಳಿಗೇ ಮೀಸಲಾಗಿಟ್ಟುದುದರಿಂದ, ಉತ್ತಮವಾದ ಮತ್ತು ಸಚ್ಚಾರಿತ್ರ್ಯದಿಂದ ಕೂಡಿದ ಜೀವನದಲ್ಲಿ ಉತ್ತೇಜನ–ಪ್ರೋತ್ಸಾಹಗಳನ್ನು ಈ ಕಲೆಗಳಿಗೆ ನೀಡಬಾರದೆಂದೂ, ಸಾಮಂತರ ಮನೋರಂಜನೆಗಾಗಿಯೇ ಇವುಗಳ ಶಿಕ್ಷಣವೆಂದೂ ಸಾಮಾನ್ಯವಾಗಿ ಜನರು ಭಾವಿಸತೊಡಗಿದರು. ಹೀಗಾಗಿ ಕಲೆ ಜೀವನದಿಂದ ಅಥವಾ ಸಾಮಾನ್ಯ ಜನರಿಂದ ಪ್ರತ್ಯೇಕವಾಯಿತು.

ಆದರೆ ಇದು ಮುಖ್ಯ ಪಟ್ಟಣಗಳಿಗೆ ಮತ್ತು ನಗರಗಳಿಗೆ ಮಾತ್ರ ಸೀಮಿತವಾದ, ವಾಸ್ತವವಾಗಿ ನಗರಗಳಿಗೇ ಸಂಬಂಧಿಸಿದ ಬೆಳವಣಿಗೆಯಾಗಿತ್ತು. ಸಮೂಹ

ಮನೋರಂಜನೆಗಿಂತ ಹೆಚ್ಚಾಗಿ ಸಾಮುದಾಯಿಕ ಮಾಧ್ಯಮವಾಗಿಯೇ ಕಲೆ ಮುಂದುವರಿದುಕೊಂಡು ಬಂತು. ಹಳ್ಳಿಗಳ ಮೇಲೆ ಪಟ್ಟಣಗಳು ಪ್ರಭಾವ ಬೀರತೊಡಗಿದ, ಸುಮಾರು ಇತ್ತೀಚಿನ ಅವಧಿಯವರೆಗೂ ಇದೇ ಪರಿಸ್ಥಿತಿಯಿತ್ತು. ಹೀಗಾಗಿ ಪ್ರದರ್ಶಕ ಕಲೆಗಳು ಗ್ರಾಮೀಣ ಜನಸಮುದಾಯದ ಸಾಮಾನ್ಯ ಪರಂಪರೆಯಾಗಿ ಉಳಿದುಬರಲಿಲ್ಲ. ನಿರ್ದಿಷ್ಟ ಸಮುದಾಯಗಳಿಗೆ ಸೇರಿದ ಕಲಾವಿದರೇ ಅವುಗಳನ್ನು ಸಂರಕ್ಷಿಸಿಕೊಂಡು ಬಂದಂತಾಗಿದೆ. ಗ್ರಾಮಗಳಲ್ಲಿ ಸಾಮಾಜಿಕವಾಗಿ ಮೇಲಿನ ಸ್ತರಗಳಲ್ಲಿರುವವರು ಕಲಾವಿದರನ್ನು ಸ್ವತಃ ತಮಗಿಂತ ಅಥವಾ ಇತರರಿಗಿಂತ ಕೆಳಗಿನ ಮಟ್ಟದವರೆಂದು ಭಾವಿಸಿದರು. ಹಬ್ಬಹರಿದಿನಗಳಂದು ಗ್ರಾಮೀಣ ಪ್ರೇಕ್ಷಕ ವರ್ಗದ ಮನರಂಜಿಸುವ ಕಲಾವಿದರಲ್ಲಿಯೇ ಬೇರೆ ಬೇರೆ ಗುಂಪುಗಳಾದುವು. ಕಲಾಪ್ರದರ್ಶನಗಳನ್ನು ನೀಡುವವರು, ಇಂಥ ಪ್ರದರ್ಶನಗಳಿಂದ ರಂಜನೆ ಪಡೆಯುವವರಿಗಿಂತ ಕೆಳಗಿನವರು ಎಂಬ ಭಾವನೆ ಉಂಟಾಯಿತು. ಈ ವಿಚಾರ ಯಾವ ಹಂತವನ್ನು ತಲುಪಿತೆಂದರೆ, ಪ್ರದರ್ಶನ ನೀಡುವ ಕಲಾವಿದರನ್ನು, ರಾಜ್ಯದಲ್ಲಿನ ಎರಡು 'ಅಸ್ಪೃಶ್ಯ' ಸಮುದಾಯಗಳಾದ ಭಾಂಡರು ಮತ್ತು ಭವಾಯಿಗಳಂತೆ ಗುರುತಿಸಲಾಯಿತು. ಬ್ರಾಹ್ಮಣರು, ರಜಪೂತರು, ಬನಿಯಗಳು ಹಾಗೂ ಎರಡು ರೈತ ಸಮುದಾಯಗಳನ್ನು ರೂಪಿಸಿದ ಜಾಟರು ಮತ್ತು ಗುಜರರು ಕೂಡ ಯಾವುದೇ ನೃತ್ಯ ಪರಂಪರೆಯನ್ನು ಹೊಂದಿರಲಿಲ್ಲ.

ಆದರೂ ಶೂದ್ರರು ಮತ್ತು ಆದಿವಾಸಿಗಳಲ್ಲಿ ತರತಮಭೇದದ ಯಾವುದೇ ಮನೋಭಾವಗಳಿರಲಿಲ್ಲ. ಈ ಕಾರಣದಿಂದಾಗಿಯೇ, ಭಿಲ್, ಮೀನ, ಬಾಲ್ದಿಯ, ನಾಟ್, ಬಂಜಾರ, ಸನ್ಸಿ, ಕಂಜಾರ್, ಧೋಲಿ, ಭೋಪ, ಮಿರಾಸಿ ಮತ್ತು ನಾಯಕ್‌ಗಳಂತಹ ಸಾಮುದಾಯಿಕ ಜನಪದ ನೃತ್ಯಗಳ ಉತ್ಕೃಷ್ಟ ಪರಂಪರೆಗಳಳು ಇನ್ನೂ ಉಳಿದುಬಂದಿವೆ. ರಾಜಾಸ್ಥಾನದ ಅನೇಕ ಜನಪದ ನೃತ್ಯರೂಪಗಳು ಈ ಸಮುದಾಯಗಳವರ ಸಂಪತ್ತಾಗಿವೆ. ಈ ಜನರು ಕಲೆಗಳನ್ನು ತಮ್ಮ ಬದುಕಿನ ಮುಖ್ಯ ಭಾಗವಾಗಿ ಪರಿಗಣಿಸಿದ್ದಾರೆ; ಕೇವಲ ಜೀವನೋಪಾಯದ ಮಾಧ್ಯಮವಾಗಿ ಅಲ್ಲ, ಸಂತೋಷ-ರಂಜನೆಗಳಿಗಾಗಿಯೂ ಇವುಗಳನ್ನು ಬಳಸುತ್ತಿದ್ದಾರೆ.

## ಜನಪದ ಕಲೆ

ಹಬ್ಬ ಹರಿದಿನಗಳಂದು ಮತ್ತು ಸಮಾರಂಭದ ಸಂದರ್ಭಗಳಲ್ಲಿ ಮಹಿಳೆಯರು 'ಮೆಹಂದಿ'ಯನ್ನು ಬಳಸುವುದು ಜನರ ಮುಖ್ಯ ಕಲಾಸಂಪ್ರದಾಯಗಳಲ್ಲಿ ಒಂದಾಗಿದೆ. 'ಮೆಹಂದಿ' ಯಿಂದ ಅಲಂಕೃತವಾಗಿರುವ ಅಂಗೈಗಳು, ಪಾದಗಳು ಮತ್ತು ಬೆರಳುಗಳನ್ನು ಅತ್ಯಂತ ಮೋಹಕವೆಂದು ಪರಿಗಣಿಸಲಾಗಿದೆ. ಪ್ರಿಯತಮೆಯ 'ಮೆಹಂದಿ' ಅಂಗೈಗಳನ್ನು ಅನೇಕ ಜನಪದ ಗೀತೆಗಳು ಉಲ್ಲೇಖಿಸಿವೆ.

ಹಬ್ಬಗಳು, ಸಮಾರಂಭಗಳು ಹಾಗೂ ವರ್ಷದ ವಿವಿಧ ಋತುಗಳಿಗೆ ಅನುಸಾರವಾಗಿ 'ಮೆಹಂದಿ' ವಿನ್ಯಾಸಗಳನ್ನು ವರ್ಗೀಕರಿಸಬಹುದು. ಅವುಗಳ ಆಶಯುಗಳು, ರೇಖಾ ಮಾದರಿಗಳು ಮತ್ತು ಚುಕ್ಕಿಗಳು ಸ್ವಾರಸ್ಯಕರ ಅಧ್ಯಯನಕ್ಕೆ

ಒಂದು ವಸ್ತುವಾಗಿದೆ. 'ಮೆಹಂದಿ' ವಿನ್ಯಾಸಗಳು ಕಾಲದೊಡನೆ ಬದಲಿಸಿವೆ; ಮೊದಲು ಅವು ಚಚ್ಚೌಕ ಅಥವಾ ಅಷ್ಟಭುಜಾಕೃತಿಯುವಾಗಿದ್ದುವು; ಈಗ ವೃತ್ತಾಕಾರವಾಗಿವೆ. 'ಮೆಹಂದಿ' ವಸ್ತುಗಳಲ್ಲಿ ಮಾನವಾಕೃತಿಗಳು, ಹೂವುಗಳು, ಹಕ್ಕಿಗಳು ಮತ್ತು ಪ್ರಾಣಿಗಳು ಸೇರಿವೆ.

'ಮಂಡನ' ಎಂಬುದು 'ಮೆಹಂದಿ'ಯಷ್ಟೇ ಜನಪ್ರಿಯವಾದ ಇನ್ನೊಂದು ಕಲೆ. ಹಬ್ಬಹರಿದಿನಗಳಂದು ಮತ್ತು ಸಮಾರಂಭದ ಸಂದರ್ಭಗಳಲ್ಲಿ, ಮಹಿಳೆಯರು ನೆಲದ ಮೇಲೆ, ಹಾಗೂ ಗೋಡೆಗಳ ಮೇಲೆ, ವಿಧ್ಯುಕ್ತ ಅಲಂಕಾರವಾಗಿ 'ಮಂಡನ'ಗಳನ್ನು ಬಿಡಿಸುತ್ತಾರೆ. 'ಮಂಡನ'ಗಳನ್ನು ಸೀಮೆಸುಣ್ಣದ ದ್ರಾವಣದಲ್ಲಿ ತಯಾರಿಸಲಾಗುತ್ತದೆ. ಸಗಣಿಯಿಂದ ಸಾರಿಸಿದ ನೆಲದ ಮೇಲೆ, ಕಡುಕೆಂಪು ಬಣ್ಣದಲ್ಲಿ 'ಮಂಡನ' ಬಿಡಿಸುತ್ತಾರೆ. ಮುಖ್ಯ ಆಶಯವನ್ನು ಎತ್ತಿ ತೋರಿಸಲು, ರಕ್ತಕೆಂಪು ಬಣ್ಣವನ್ನು ಬಿಟ್ಟು ಇನ್ನಾವುದೇ ಬಣ್ಣವನ್ನೂ ಬಳಸುವುದಿಲ್ಲ.

'ಮಂಡನ'ದ ಮೂಲ ವಿನ್ಯಾಸದಲ್ಲಿ, ಯಾವ ಋತುವಿನಲ್ಲಿ ಯಾವ ನಿರ್ದಿಷ್ಟ ಹಬ್ಬ ಬರುತ್ತದೆಂಬ ಸೂಚನೆ ಸಿಗುತ್ತದೆ. ಉದಾಹರಣೆಗೆ, ದೀಪಾವಳಿ ಸಮಯದಲ್ಲಿ ಬಿಡಿಸಲಾಗುವ *'ಮಂಡನ'*ಗಳಲ್ಲಿ *'ಭರಡಿ'*ಯು (ರಾಗಿಯ ರಥ) ಚಿತ್ರವಿರುತ್ತದೆ. ರಾಗಿ ಈ ಕಾಲದಲ್ಲಿಯೇ ಪಕ್ವವಾಗುತ್ತದೆ. *'ಪಪ್‌ಡಿ'* ದೌತಿಮಣಿಗಳು, ತೂಕ ಹಾಗೂ ಮಾಪನಗಳಂತಹ ಇತರ ಸಂಬಂಧಿಸಿದ ವಸ್ತುಗಳೂ 'ಮಂಡನ'ದ ವಿಷಯವಾಗಿರುತ್ತವೆ.

## ಜನಪದ ನೃತ್ಯಗಳು

ರಾಜಾಸ್ಥಾನದ ಜನಪದ ನೃತ್ಯಗಳಲ್ಲಿ ಎರಡು ಗುಂಪುಗಳು: ವೃತ್ತಿಪರ ನೃತ್ಯಗಳು ಹಾಗೂ ಸ್ವಪ್ರೇರಿತವಾಗಿರುವ ಸಮೂಹ ನೃತ್ಯಗಳು. ಜನಪದ ಕಲಾವಿದರು ಪ್ರದರ್ಶನ ನೀಡುವ ವೃತ್ತಿಪರ ಜನಪದ ನೃತ್ಯಗಳ ಮೇಲೆ ನಗರದ ಪ್ರಭಾವವಿದೆ. ಆದರೆ, ಹಳ್ಳಿಗರು ಸ್ವಪ್ರೇರಣೆಯಿಂದ ಪ್ರದರ್ಶಿಸುವ ನೃತ್ಯಗಳಲ್ಲಿ 'ಕಲೆಗಾಗಿ ಕಲೆ' ಎಂಬ ಮನೋಧರ್ಮ ಅಂತರ್ಗತವಾಗಿರುವುದೆಂದು ಹೇಳಬಹುದು. ಈ ನೃತ್ಯಗಳಿಗೆ ಸಂಬಂಧಿಸಿದಂತೆ, ಮೇಲು-ಕೀಳು, ಧನಿಕ-ಬಡವ ಅಥವಾ ಜಾತಿ-ಪಂಥಗಳೆಂಬ ಯಾವುದೇ ಸೀಮಿತಗಳಿಲ್ಲ. ಆದರೂ, ಈ ಶ್ರೀಮಂತ ಪರಂಪರೆಗಳನ್ನು ಅವುಗಳ ಮೂಲ ಹಾಗೂ ಉತ್ಕೃಷ್ಟ ರೂಪಗಳಲ್ಲಿ ಉಳಿಸಿಕೊಳ್ಳಲು ಆಶ್ರಯ-ಪ್ರೋತ್ಸಾಹಗಳು ಅಗತ್ಯವಾಗಿರುವ ಗ್ರಾಮೀಣ ಕಲಾವಿದರ ಸಂಸ್ಕೃತಿ ಮತ್ತು ಕಲೆಗಳ ಮೇಲೆ, ತೀವ್ರ ವೇಗದ ನಗರೀಕರಣ ಹಾಗೂ ಆಧುನಿಕ ಸುಧಾರಣಾ ಚಳವಳಿಗಳು ಅಗಾಧ ಪ್ರಭಾವ ಬೀರಿವೆ. ದೇವೀಲಾಲ್ ಸಮರ್ ಅವರ ಅಭಿಪ್ರಾಯದಂತೆ, ತಾವು ತಿಳಿದಿರುವ ಕಲೆ ತಾವು ಮಾತ್ರ ತಿಳಿದಿರುವ ಕಲೆ; ಆದ್ದರಿಂದ ಅದು ಮೌಲಿಕವಾದುದು ಎಂಬ ಅರಿವು ಹಾಗೂ ಪ್ರಜ್ಞೆಗಳು ಈ ಜನರಲ್ಲಿ ಮೂಡುವಂತೆ ಮಾಡಬೇಕಾದುದು ಅಗತ್ಯವಾಗಿದೆ.

## ಜನಪದ ಗೀತೆಗಳು

ಜನಪದ ವಿನೋದಗಳಲ್ಲಿ ಅತ್ಯಂತ ಸ್ವಾಭಾವಿಕ ಹಾಗೂ ಜನಪ್ರಿಯ ಮಾಧ್ಯಮವಾಗಿ ಜನಪದ ಗೀತೆಗಳ ಸ್ಥಾನವೇನೆಂಬುದನ್ನು ಕುರಿತು ಬೇರೊಂದೆಡೆ ನಾವು ಚರ್ಚಿಸಿದ್ದೇವೆ. ಜನಪದ ಗೀತೆಗಳ ಸಾರಾಂಶ ಹಾಗೂ ಸಂಗೀತ–ಅಂಶಗಳ ಶ್ರೀಮಂತಿಕೆ ಮತ್ತು ವೈವಿಧ್ಯಗಳಿಗೆ ಅವು ಹೊಂದಿರುವ ಪ್ರತ್ಯೇಕ ವಿಷಯಗಳೇ ಕಾರಣವೆನ್ನ ಬಹುದು. ಮಹಿಳೆಯರು ಹಾಡುವ ಜನಪದ ಗೀತೆಗಳನ್ನು ಕುರಿತಂತೆ ತಕ್ಕಮಟ್ಟಿನ ಒಳ್ಳೆಯ ಕೆಲಸ ಈಗಾಗಲೇ ನಡೆದಿದೆ. ಆದರೂ ಜಾನಪದ ಹಾಗೂ ಜನಪದ ವಿನೋದಗಳಿಗೆ ಸಂಬಂಧಪಟ್ಟಂತೆ ಜನಪದ ಗೀತೆ ಎಷ್ಟು ಮುಖ್ಯವಾದ ಭಾಗವಾಗಿದೆ ಯೆಂದರೆ, ಅದರ ಎಲ್ಲ ಮುಖಗಳ ಬಗೆಗೆ ವ್ಯಾಪಕವಾದ ವೈಜ್ಞಾನಿಕ ಅಧ್ಯಯನ ನಡೆಯಬೇಕಾದುದು ಅಗತ್ಯವಾಗಿದೆ.

ಜೈಸಲ್ಮೇರದ ಲಂಗರು ರಾಜಾಸ್ಥಾನದ ಜನಪದ ಸಂಗೀತದ ಮುಖ್ಯ ಅಂಶ ವೊಂದನ್ನು ನಮ್ಮ ಮುಂದಿರಿಸುತ್ತಾರೆ. ತಮ್ಮ ಅಪೂರ್ವ ಸಾರಂಗಿಗಳ ನಾದಕ್ಕೆ ಹೊಂದುವ ಅಪೂರ್ವ ಶೈಲಿಯಲ್ಲಿಯೆ ಅವರು ಹಾಡುತ್ತಾರೆ. ಅವರ ಸಂಗೀತಕ್ಕೆ, ಅವರೆಲ್ಲಿಂದ ಬಂದರೋ ಆ 'ಮರಳಿನ ಸಮುದ್ರ' ದ ಎಲ್ಲ ರಭಸ ಹಾಗೂ ಹೊಸತನಗಳಿವೆ. ಲಂಗರು, ತಮ್ಮ ಆಶ್ರಯದಾತರಿಗೆ ಮನೋರಂಜನೆ ನೀಡಲು ಆಗಾಗ ಅವರನ್ನು ಸಂದರ್ಶಿಸುವುದುಂಟು.

ಮುಸ್ಲಿಮ್ ಸಮುದಾಯಕ್ಕೆ ಸೇರಿದ ಮಿರಾಸಿಗಳು 'ಮಂಡ್'ಅನ್ನು ಹಾಡುವ ಉತ್ಕೃಷ್ಟ ಪರಂಪರೆಯನ್ನು ಹೊಂದಿದ್ದಾರೆ. 'ಮಂಡ್' ಎಂಬುದು ಶಾಸ್ತ್ರೀಯ ಸಂಗೀತಕ್ಕೆ ತುಂಬ ಸಮೀಪ ಬರುವಂತಹ, ಹಾಡುಗಾರಿಕೆಯ ಜನಪದ ಶೈಲಿ. ಮಿರಾಸಿ ಮಹಿಳೆಯರೂ ಸುಸಂಸ್ಕೃತ ಗಾಯಕಿಯರಾಗಿದ್ದು, ಉತ್ಸವ ಸಂದರ್ಭಗಳಲ್ಲಿ ಅವರು ಶ್ರೀಮಂತರಿಗೆ ಮನರಂಜನೆ ನೀಡುತ್ತಾರೆ. 'ಧುಮಲ್', 'ಗುಮರ್', 'ಬಂಜಾರಿ' ಮತ್ತು 'ಗೋಹರಿ'ಗಳು ಪ್ರಖ್ಯಾತವಾದ ರಾಜಾಸ್ಥಾನಿ ಲೋಕಗೀತೆಗಳಾಗಿರುತ್ತವೆ.

## ಜನಪದ ಕಾವ್ಯ

*ಪಬುಜಿ–ಕೀ–ಫಡ್* ಎಂಬುದು ಚಾರಣರಾದ ಭೋಪರು ಸಂಗೀತಕ್ಕೆ ಅಳವಡಿಸಿದ ಉತ್ಕೃಷ್ಟವಾದ ಒಂದು ಜನಪದ ಕಾವ್ಯ. ಇದು, ನಾಯಕರು, ರೈಬಾರಿಗಳು, ಭೋಮಿಯಗಳು ಹಾಗೂ ಮತ್ತಿತರರು, ದೇವರೆಂದು ಪೂಜಿಸುವ ರಾಥೋರ್ ನಾಯಕನಾದ ಪಬುಜಿಯ ಸಾಹಸಕಾರ್ಯಗಳನ್ನು ವರ್ಣಿಸುವ ಸ್ತೋತ್ರರೂಪದ ಕಾವ್ಯ. ನಿಜವಾಗಿ ಅನುಸೂಚಿತ ಜಾತಿಗಳಿಗೆ ಸೇರಿರುವ ಭೋಪುರು ಈಗ ತಮ್ಮನ್ನು ಸೋಲಂಕಿ ರಜಪೂತರೆಂದು ಕರೆದುಕೊಳ್ಳುತ್ತಾರೆ. ಭೋಪರಿಗೆ ತಮ್ಮದೇ ಆ ಯಾವುದೇ ನೆಲೆಯಿಲ್ಲ. ಗ್ರಾಮದಿಂದ ಗ್ರಾಮಕ್ಕೆ ಅಲೆದಾಡುತ್ತ, ಗ್ರಾಮೀಣ ಪ್ರೇಕ್ಷಕರೆದುರು *ಫಡ್* ಹಾಡುತ್ತ ಅವರು ತಮ್ಮ ಜೀವನೋಪಾಯ ಗಳಿಸುತ್ತಾರೆ. ಇದು

ರಾತ್ರಿಯಿಡೀ ನಡೆಯುವಂತಹ ಸಂಗೀತ ಹಾಗೂ ನೃತ್ಯವಾಗಿದ್ದು, ಇದಕ್ಕೆ ಅವರು ಬಳಸುವ ವಾದ್ಯಗಳಾದ *ರಾವನ್‌ಹತ್ಥ* ಹಾಗೂ *ಅಪನ*ಗಳು ಹೆಚ್ಚು ಮಾಧುರ್ಯ ವನ್ನೂ ಛಂದೋಬದ್ಧತೆಯನ್ನೂ ನೀಡುತ್ತವೆ.

ಭಟ್ ಸಮುದಾಯದವರೂ ಪಬುಜಿಯ ಸ್ತೋತ್ರಗೀತೆ ಹಾಡುತ್ತಾರೆ; ಆದರೆ ಭೋಪರು ಹಾಡುವ ಗೀತೆಗಳು ಅಥವಾ ಹಾಡುಗಳೇ ಹೆಚ್ಚು ಪರಿಣಾಮಕಾರಿ ಹಾಗೂ ಸ್ವಾರಸ್ಯಕರವಾಗಿರುತ್ತವೆ. ಆದ್ದರಿಂದ ಜನರು, ಕೆಲಮಟ್ಟಿಗೆ *ರಾಮಾಯಣ* ಅಥವಾ *ಶ್ರೀಮದ್ಭಾಗವತ*ವನ್ನು ಕೇಳಿ ಪುಣ್ಯ ಸಂಪಾದಿಸುವ ಸಲುವಾಗಿ ಹಾಗೂ ಕೆಲಮಟ್ಟಿಗೆ ಮನೋರಂಜನೆಗಾಗಿ, *ಫದ್* ಹಾಡಲು ಭೋಪರನ್ನೇ ತಮ್ಮೂರುಗಳಿಗೆ ಆಹ್ವಾನಿಸುತ್ತಾರೆ. ಪಬುಜಿ ಗೀತೆಗಳ ಸಂಖ್ಯೆ 50ನ್ನೂ ಮೀರಿದ್ದು ಇವುಗಳನ್ನು 'ಪಬುಜಿಯ ಪವಾಡಗಳು' ಎಂದೂ ಕರೆಯಲಾಗಿದೆ.

ಪಬುಜಿಯ ಜೀವನದ ಮುಖ್ಯ ಘಟನೆಗಳನ್ನು ಚಿತ್ರಿಸಲಾದ ಬಟ್ಟೆಯ ಸಚಿತ್ರ ಸುರುಳಿಯನ್ನು ಬಳಸಿ, *ಫದ್* ಹಾಡುಗಾರಿಕೆಗೆ ಚಲಚ್ಚಿತ್ರ ದರ್ಶಕದ ಪ್ರಭಾವವನ್ನು ನೀಡಲಾಗುತ್ತದೆ. ಪಬುಜಿಯ ಸಾಹಸಕಾರ್ಯಗಳ ದೃಶ್ಯಗಳನ್ನು ತೋರಿಸಲು, ಬಿದಿರಿನ ಕೋಲಿಗೆ ಸುತ್ತಲಾಗಿರುವ, ಸಾಮಾನ್ಯವಾಗಿ ಒಂಬತ್ತು ಮೀಟರ್ ಉದ್ದ ಮತ್ತು ಒಂದೂವರೆ ಮೀಟರ್ ಅಗಲವಾಗಿರುವ *ಫದ್* ಅನ್ನು ಗೋಡೆಯ ಮೇಲೆ ಹರಡುತ್ತಾರೆ. ಈ ಸಾಹಸಕಾರ್ಯಗಳೇ ಭೋಪ ಮತ್ತವನ ಹೆಂಡತಿ ಭೋಪಿ ಹಾಡುವ ಗೀತೆಗಳ ಮುಖ್ಯ ವಸ್ತು. ಕಥೆ ಹಾಗೂ ಛಂದೋಬದ್ಧ ಸಂಗೀತಗಳ ವಿಶಿಷ್ಟ ಗತಿ ಹೆಚ್ಚುತ್ತ ಹೋದಂತೆ, ತುಂಬ ಚುರುಕಾಗಿರುವ ಕಾಲ್ಚಳಕವನ್ನು ಪ್ರದರ್ಶಿಸುವ ಮತ್ತು ಸ್ವಲ್ಪ ಮಟ್ಟಿಗೆ ಅಭಿನಯದಿಂದ ಕೂಡಿದ ಜೋಡಿನೃತ್ಯ ನಡೆಯುತ್ತದೆ. *ಪಬುಜಿ–ಕೀ–ಫದ್* ಗಾಯಕರು, ಪಬುಜಿಯ ಹುಟ್ಟೂರಾದ, ಜೈಸಲ್ಮೇರ್ ಜಿಲ್ಲೆಯ ರುನೇಚದ ಹತ್ತಿರವಿರುವ ಕೋಡ್‌ಮಂಡ್‌ದಲ್ಲಿ ಪ್ರತಿವರ್ಷ ಒಟ್ಟು ಸೇರಿ ಸಾವಿರಾರು ಭಕ್ತರನ್ನು ರಂಜಿಸುತ್ತಾರೆ.

## "ಖ್ಯಾಲ್" ಗಳು

ಅತ್ಯಂತ ಮುಖ್ಯವಾದ ಜನಪದ ವಿನೋದವೇ *ಖಯಾಲ್*ಗಳು; ಸಾವಿರಾರು ಗ್ರಾಮೀಣ ಪ್ರೇಕ್ಷಕರು *ಖಯಾಲ್*ಗಳಿಂದ ಪುಕ್ಕಟೆ ಮನೋರಂಜನೆ ಪಡೆಯುತ್ತಾರೆ. ಇವುಗಳಲ್ಲಿ ಜನಪದ ಸಂಗೀತ ನಾಟಕಗಳೂ ನೃತ್ಯನಾಟಕಗಳೂ ಸೇರಿರುತ್ತವೆ. ಕೆಲವು ಜನಪ್ರಿಯ *ಖಯಾಲ್*ಗಳಲ್ಲಿ, 4000 ಅಥವಾ ಅದಕ್ಕೂ ಹೆಚ್ಚು ವರ್ಷಗಳ ಹಿಂದಿನ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಂಪ್ರದಾಯಗಳು ಇಂದಿಗೂ ಉಳಿದು ಬಂದಿವೆ. ತಮ್ಮ ಗಮನಕ್ಕೆ ಬಂದಿರುವ, ಹಾಗೂ ವಿನೋದದ ಜನಪ್ರಿಯ ಮಾಧ್ಯಮ ವಾಗಿಯಷ್ಟೇ ಅಲ್ಲ, ಆಧುನಿಕ ವಿನೋದ ಕಾರ್ಯಕ್ರಮಗಳ ಪರಿಚಯ ಆಗಿರದಂತಹ ಪ್ರದೇಶ ಗಳಲ್ಲಿ ಕೂಡ, ಈಗಲೂ ಸಾಮಾಜಿಕ ಮತ್ತು ಸಾಂಸ್ಕೃತಿಕ ಶಿಕ್ಷಣದ ಮಾಧ್ಯಮವಾಗಿ ಉಳಿದಿರುವ 200ಕ್ಕೂ ಹೆಚ್ಚು *ಖಯಾಲ್*ಗಳ ಬಗ್ಗೆ ದೇವಿಲಾಲ್ ಸಮರ್ ಅವರು ಬರೆಯುತ್ತಾರೆ.

ಭಾರತದ ಬೇರಾವ ಪ್ರದೇಶದಲ್ಲಿಯೂ ರಾಜಾಸ್ಥಾನದಲ್ಲಿ ಪ್ರಚಲಿತವಾಗಿರುವಷ್ಟು ಹೆಚ್ಚು ಸಂಖ್ಯೆಯ ಜನಪದ ನಾಟಕ ರೂಪಗಳಾಗಲಿ, *ಖಯಾಲ್*‌ಗಳಾಗಲಿ ಇಲ್ಲ. ಇವು ಸ್ವಭಾವತಃ ಸರಳ ಮತ್ತು ಗ್ರಾಮೀಣವಾಗಿದ್ದರೂ ತಮಗೆ ತಾವೇ ಸಮಗ್ರವೆನಿಸಿದ ತಂತ್ರವನ್ನು ಹೊಂದಿವೆ. ರಂಗಭೂಮಿ, ಪ್ರೇಕ್ಷಕವರ್ಗ ಮತ್ತು ಅಭಿನಯ ಶೈಲಿಗಳ ದೃಷ್ಟಿಯಿಂದ, ತಮ್ಮದೇ ಆದ ಪರಂಪರೆಗಳನ್ನು ಅಭಿವೃದ್ಧಿ ಪಡಿಸಿಕೊಂಡುದರಿಂದಾಗಿ ಈ *ಖಯಾಲ್*‌ಗಳು ಜನರ ಪರಿಪೂರ್ಣ ವಿನೋದ ಗಳೆನಿಸಿವೆ.

*ಖಯಾಲ್* ರಂಗಭೂಮಿ ಯಾವಾಗಲೂ ಮುಕ್ತಪ್ರದೇಶದಲ್ಲಿ, ಸಾಮಾನ್ಯವಾಗಿ ಗ್ರಾಮದ ಕೇಂದ್ರ ಸ್ಥಳದಲ್ಲಿ, ಇರುತ್ತದೆ. ಉದಾಹರಣೆಗೆ, ಶ್ರೀಮಂತ ಗ್ರಾಮಸ್ಥನ ಮನೆಯ ವಿಶಾಲವಾದ ಅಂಗಳ, ಅಥವಾ ಯಾವುದಾದರೂ ದೇವಾಲಯದ ಹೊರಭಾಗದಲ್ಲಿರುವ ವೇದಿಕೆ. ಭಿಲ್ಲರು ಮತ್ತು ರಸಧಾರಿಗಳಾಡುವ 'ಗೌರಿ' ನೃತ್ಯನಾಟಕವನ್ನು ಬಿಟ್ಟುಳಿದಂತೆ, ಬಹುಮಟ್ಟಿಗೆ ಎಲ್ಲ *ಖಯಾಲ್*‌ಗಳ ಪ್ರದರ್ಶನಕ್ಕೂ ಎತ್ತರವಾಗಿರುವ ರಂಗಭೂಮಿ ಅಗತ್ಯವಾಗಿರುತ್ತದೆ. ನಾಲ್ಕೂ ಕಡೆಗಳಿಂದ ಅಲ್ಲವಾದರೂ, ಕನಿಷ್ಠ ಮೂರು ಕಡೆಗಳಿಂದ ಹೆಚ್ಚು ಸಂಖ್ಯೆಯ ಪ್ರೇಕ್ಷಕರಿಗೆ ವೀಕ್ಷಿಸಲು ಸಾಧ್ಯವಾಗುವಂತೆ *ಖಯಾಲ್* ರಂಗಭೂಮಿ ಇರಬೇಕು.

ಬೆಳಕಿಗಾಗಿ ಈಗ ಪೆಟ್ರೋಮ್ಯಾಕ್ಸ್‌ನ್ನು ಹಳೆಯ *ಮಶಾಲು*ಗಳ ಬದಲು ಬಳಸಲಾಗುತ್ತಿದೆ. ಗ್ರಾಮದ ಗಾಣಿಗನು ಒದಗಿಸುವ ಎಣ್ಣೆಯಿಂದ ಉರಿಯುವ *ಮಶಾಲ*ನ್ನು ಗ್ರಾಮದ ಕ್ಷೌರಿಕನು ಮೇಲ್ಗಡೆ ಹಿಡಿದಿರುತ್ತಿದ್ದ.

ಈ ವ್ಯವಸ್ಥೆಗಳು, ಪ್ರೇಕ್ಷಕರು ಹಾಗೂ ಪ್ರದರ್ಶನ ನೀಡುವ ಕಲಾವಿದರ ನಡುವೆ ಅಪೂರ್ವ ಸಾಮರಸ್ಯವನ್ನು ಸ್ಥಾಪಿಸುತ್ತವೆ. ಕೆಲವು ಸಲ ಪ್ರದರ್ಶನ ಪೋಷಾಕಿ ನಲ್ಲಿರುವ ನಟನೇ ಪ್ರೇಕ್ಷಕರ ನಡುವೆ ಓಡಾಡುತ್ತಾನೆ, ಕುಳಿತುಕೊಳ್ಳುತ್ತಾನೆ. ಅವರ ಜೊತೆ ಹರಟೆ ಹೊಡೆಯುತ್ತಾನೆ, ಅವರೊಂದಿಗೆ *ಚಿಲಮ್* ಅಥವಾ ಬೀಡಿ ಸೇದುತ್ತಾನೆ. ಯಾರು ಯಾರ ಜೊತೆ ತಮಾಷೆಯಾಗಿ ಕಾಲಕಳೆಯುತ್ತಿದ್ದನೋ ಆ ಪ್ರೇಕ್ಷಕ ಸಮೂಹದಿಂದಲೇ ಹೊರಟ ನಟನು ಒಮ್ಮೆಲೇ ಅತ್ಯಂತ ಸಹಜವೆನಿಸುವಂತೆ ವೇದಿಕೆಯನ್ನೇರಿ ತನ್ನ ಪಾತ್ರವನ್ನು ಅಭಿನಯಿಸತೊಡಗುತ್ತಾನೆ. ದೃಶ್ಯಗಳು, ಪಾತ್ರಗಳು ಮತ್ತು ಅವರ ವೇಷಭೂಷಣಗಳು ಯಥಾರ್ಥವಾಗಿರುವುದಕ್ಕಿಂತ ಹೆಚ್ಚಾಗಿ ಸಾಂಕೇತಿಕವಾಗಿರುತ್ತವೆ. ಆದರೆ ಸಂಕೇತಗಳು ಎಷ್ಟು ಪ್ರಭಾವಿ ಹಾಗೂ ಆಕರ್ಷಕವಾಗಿರುತ್ತವೆಂದರೆ *ಖಯಾಲ್*‌ಗಳು ಯಾವುದೇ ಪೂರ್ವಾಭ್ಯಾಸ ಮತ್ತು ಯಾವನೇ ನಿರ್ದೇಶಕನಿಲ್ಲದೆ, ಹಾಗಿಂದ ಹಾಗೆ ಪ್ರದರ್ಶಿಸಲಾಗುವ ಪರಿಣಾಮಕಾರಿ ನಾಟಕಗಳಂತಿರುತ್ತವೆ.

ಈ ಜನಪದ ನಾಟಕಗಳ ಕಥೆಗಳು ಪ್ರಖ್ಯಾತವೂ ಜನಪ್ರಿಯವೂ ಆಗಿರುವುದೇ ಇದಕ್ಕೆ ಕಾರಣ. ಉದಾಹರಣೆಗೆ, 'ಢೋಲಾ-ಮಾರು', 'ಸುಲ್ತಾನ್- ನಿಹಾಲ್ದೆ', 'ಭರ್ತೃಹರಿ', 'ಅಮರ್‌ಸಿಂಗ್ ರಾಥೋರ್' ಇತ್ಯಾದಿ. ಆದ್ದರಿಂದ ಈ ಕಲಾವಿದರು ರಂಗಸಜ್ಜಿಕೆಯ ಬಗ್ಗೆ ಸಾಕಷ್ಟು ಲಕ್ಷ್ಯ ವಹಿಸದಿದ್ದರೂ ಪ್ರದರ್ಶನಗಳು

ಯಶಸ್ವಿಯಾಗುತ್ತವೆ. ಸಹಜವಾಗಿಯೇ, ಹವ್ಯಾಸಿ ಕಲಾವಿದರಿಗೆ ಇಂಥ ರಂಗ ಭೂಮಿಯ ಮೇಲೆ ಯಶಸ್ಸು ಗಳಿಸುವ ಅವಕಾಶ ಇರುವುದಿಲ್ಲ. ಈ ನಾಟಕಗಳಲ್ಲಿ ಗ್ರಾಮೀಣ ಸಂಗೀತ ಮತ್ತು ನೃತ್ಯಗಳದೇ ಮೇಲುಗೈ ಆಗಿದ್ದು, ಮೂಲಕಥೆ ಹಾಗೂ ಸಂಭಾಷಣೆಗಳು ಗೌಣವಾಗಿಬಿಡುತ್ತವೆ. ನಾಟಕವನ್ನು ಕಾಲ, ಅನುಕ್ರಮ ಮತ್ತು ಸಂಭಾಷಣೆಗಳ ಯಾವುದೇ ಮಿತಿಗಳಿಗೊಳಪಡದಂತೆ ಮಾಡುವ ಸಂಗೀತ ಹಾಗೂ ನೃತ್ಯಗಳ ಹರ್ಷೋನ್ಮಾದದಲ್ಲಿ ಪ್ರೇಕ್ಷಕರು ಸಂಪೂರ್ಣವಾಗಿ ಮೈಮರೆಯುತ್ತಾರೆ.

ಕಾವ್ಯಗುಣ ಮತ್ತು ಸಂಭಾಷಣೆಗಳ ದೃಷ್ಟಿಯಿಂದ ರಾಜಾಸ್ಥಾನದ ಜನಪದ ನಾಟಕಗಳನ್ನು ಮೂರು ಗುಂಪುಗಳಾಗಿ ಮಾಡಬಹುದು. ಭವಾಯಿಗಳ ನೃತ್ಯನಾಟಕಗಳೂ ಇತರ ನಾಟಕಗಳೂ ಮೊದಲ ಗುಂಪಿಗೆ ಸೇರುತ್ತವೆ. ಇವುಗಳಲ್ಲಿ ದೊಂಬರಾಟ-ಚಮತ್ಕಾರಗಳಿಗೂ ಅವಕಾಶವುಂಟು. '*ರಸಧಾರಿ*'ಗಳು, '*ತುರ್ರ-ಕಲಂಗಿ*', '*ರಮ್ಮತ್*' ಮತ್ತು '*ಕುಚಮನ್*' ಹಾಗೂ '*ಚಿರಾವ*' ಕಾವ್ಯಾತ್ಮಕ ನಾಟಕಗಳು ಎರಡನೆಯ ಗುಂಪಿಗೆ ಸೇರುತ್ತವೆ. ಸಂಭಾಷಣೆಗಳಿಲ್ಲದೆ, ಆದರೆ ಕೇವಲ ಸಂಗೀತ, ನೃತ್ಯ ಮತ್ತು ಮೂಕಾಭಿನಯಗಳಿರುವ ಭಿಲ್ಲರ 'ಗೌರಿ' ಮತ್ತು ಇತರ ಜನಪದ ನಾಟಕಗಳು ಮೂರನೆಯ ಗುಂಪಿಗೆ ಸೇರುತ್ತವೆ.

ಹೀಗಾಗಿ, ಭವಾಯಿಗಳು ಆಡುವ ಜನಪದ ನಾಟಕಗಳು ಒಂದು ದೃಷ್ಟಿಯಲ್ಲಿ ನಾಟಕಗಳೇ ಅಲ್ಲ. ಕೆಲವು ಸಲ ಪರಸ್ಪರ ಸಂಬಂಧವೂ ಇಲ್ಲದ ಯಾವುದಾದರೂ ಜನಪ್ರಿಯ ಜನಪದ ಗೀತೆಗಳನ್ನು ಕಥೆಯ ರೂಪದಲ್ಲಿ ಮಂಡಿಸುವುದಷ್ಟೇ ಇವುಗಳ ಉದ್ದೇಶವಾಗಿರುತ್ತದೆ. ಇವು, ದೊಂಬರಾಟ-ಚಮತ್ಕಾರಗಳ ಜೊತೆಗೆ, ಸಂಗೀತ ಮತ್ತು ನೃತ್ಯಗಳಿಂದ ತುಂಬಿದ, ಜನರಿಗೆ ವಿನೋದ ನೀಡುವ ಆಟಗಳಲ್ಲದೆ ಇನ್ನೇನೂ ಅಲ್ಲ. ಆದರೆ, ಭವಾಯಿಗಳಿಗೆ ತಮ್ಮದೇ ಆಶ್ರಯದಾತರು ಮತ್ತು 'ಯಜಮಾನರು' ಇರುವುದರಿಂದಾಗಿ, ಅವರ ಪ್ರದರ್ಶನಗಳು ಜನರ ಆಯ್ಕೆ ಅಥವಾ ಅವರ ಇಷ್ಟಗಳನ್ನು ಪ್ರತಿಬಿಂಬಿಸುವುದಿಲ್ಲ. ಮಣ್ಣಿನ ಹೂಜಿಗಳನ್ನು ತಲೆಯ ಮೇಲಿಟ್ಟುಕೊಂಡು ಸಮತೋಲನ ಉಳಿಸಿಕೊಳ್ಳುವುದೂ ಒಳಗೊಂಡಂತೆ, ಕಲಾವಿದನಿಗೆ ಎಷ್ಟು ಸಾಧ್ಯವೋ ಅಷ್ಟೂ ದೊಂಬರಾಟ-ಚಮತ್ಕಾರಗಳನ್ನು ಪ್ರದರ್ಶಿಸಬೇಕೆಂಬುದೇ ಕಲಾವಿದರ ಸ್ವಂತ ಅಪೇಕ್ಷೆ ಹಾಗೂ ಅವರ 'ಯಜಮಾನ' ರ ಸ್ವಾರ್ಥಮೂಲ ತತ್ತ್ವವಾಗಿರುತ್ತದೆ.

ಇನ್ನೊಂದೆಡೆ, ಕಾವ್ಯಾತ್ಮಕ *ಖಯಾಲ್*ಗಳು ಬಹುಮಟ್ಟಿಗೆ ಸಾಮಾಜಿಕ ವಸ್ತುವನ್ನು ಹೊಂದಿದ ನಾಟಕಗಳಾಗಿರುತ್ತವೆ. ಜನಪದ ವಿನೋದ ಮಾಧ್ಯಮ ಹಾಗೂ ಜನಸಾಮಾನ್ಯರ ಅಭಿರುಚಿಯನ್ನು ಪ್ರತಿನಿಧಿಸುವ ಕಲೆ-ಹೀಗೆ ಎರಡೂ ಆಗಿ ಇವು ಸಶಕ್ತ ನಾಟಕಗಳೆನಿಸಿವೆ. ಇವು ಯಾವುದೇ ಒಂದು ನಿರ್ದಿಷ್ಟ ಸಮುದಾಯಕ್ಕೆ ಸೇರದೆ ಇರುವುದರಿಂದ, ಹಾಗೂ ಇವು ಸಾಹಿತ್ಯ ತೀವ್ರತೆ ಮತ್ತು ಕಾವ್ಯ ಪ್ರತಿಭೆಗಳಿಂದ ಕೂಡಿದ ರಚನೆಗಳಾಗಿರುವುದರಿಂದ ಅತ್ಯಂತ ಜನಪ್ರಿಯವಾಗಿವೆ. ವೇದಿಕೆಯ ಮೇಲೆ ಇಬ್ಬರು ಪ್ರಮುಖ ನಟರು ಪ್ರಶ್ನೋತ್ತರ ಅಧಿವೇಶನ ನಡೆಸುತ್ತಾರೆ; ಕಾವ್ಯಮಯವಾದ ಸಂಭಾಷಣೆ ನಡೆಸುತ್ತ ಅನೇಕ ನಟನಟಿಯರ

ಅಗತ್ಯವಿರುವಂತಹ ಪ್ರದರ್ಶನವನ್ನು ಅವರಿಬ್ಬರೇ ನೀಡುತ್ತಾರೆ.

*ರಸಧಾರಿಗಳು* ಈ ವರ್ಗಕ್ಕೇ ಸೇರುವ ನಾಟಕಗಳಾಗಿರುತ್ತವೆ. ಇವು ತಮ್ಮ ಮೂಲ ರೂಪದಲ್ಲಿ 'ಕೃಷ್ಣಲೀಲೆ'ಯ ವರ್ಣನೆಯಾಗಿದ್ದು, ಅನಂತರ ಇತರ ವಸ್ತುಗಳನ್ನು ಅಳವಡಿಸಿಕೊಂಡವು. ಸುಮಾರು 40ವರ್ಷಗಳ ಹಿಂದೆ, ಮೇವಾರದ ಮೋತೀಲಾಲ್ ಜಾಟ್ ಎಂಬುವನು ಬರೆದ ಮೊದಲ ನಾಟಕದ ಸ್ಫೂರ್ತಿಯಿಂದಲೇ ಅನಂತರ *ರಸಧಾರಿ*ಗಳು ರಚನೆಯಾದವು. ಈ ಶೈಲಿಯ ನಾಟಕಗಳು, ಮಾರ್ವಾರದಲ್ಲಿಯೂ, ಮುಖ್ಯವಾಗಿ 'ಬೈರಾಗಿ' ಸಾಧುಗಳ ಪ್ರಯತ್ನಗಳ ಪರಿಣಾಮವಾಗಿ ಜನಪ್ರಿಯತೆ ಗಳಿಸಿದವು. ಇದು ಎಲ್ಲರೂ ಆಡಬಹುದಾದ ಸಮುದಾಯ ನೃತ್ಯ ನಾಟಕವಾಗಿತ್ತು. ಆದರೆ ಕೆಲವರು ಜೀವನ ನಿರ್ವಹಣೆಗಾಗಿಯೇ ಈ ನಾಟಕಗಳನ್ನು ಅಭಿನಯಿಸ ತೊಡಗಿದಾಗ, ಕ್ರಮೇಣ ವೃತ್ತಿ ಕಲಾವಿದರ ಪಂಗಡಗಳು ಸಂಘಟನೆಗೊಂಡು ಈ ಕಲೆಗಳ ಏಕಸ್ವಾಮ್ಯವನ್ನು ಹೊಂದಿದವು.

*ರಸಧಾರಿ*ಗಳಿಗೆ ರಂಗಭೂಮಿಯ ಅಗತ್ಯವಿಲ್ಲ. ಇವುಗಳ ವಸ್ತುಗಳು ಬಹುಮಟ್ಟಿಗೆ ಧಾರ್ಮಿಕವಾದವು. ಉದಾಹರಣೆಗೆ ರಾಮ, ಕೃಷ್ಣ, ಹರಿಶ್ಚಂದ್ರ ಮತ್ತು ರಾಜಾ ಮೋರ್ಧ್ವಜರ ಕಥೆಗಳು; ಶೈಲಿಯಲ್ಲಿ ಹಾಡು ಮತ್ತು ನೃತ್ಯಗಳದ್ದೇ ಮೇಲುಗೈ.

*ತುರ್ರ–ಕಲಂಗಿ* ಎಂಬುದು ಇದೇ ವರ್ಗಕ್ಕೆ ಸೇರುವ ಜನಪದ ನಾಟಕದ ಇನ್ನೊಂದು ರೂಪ. ಸುಮಾರು 400 ವರ್ಷಗಳ ಹಿಂದೆ ಇದ್ದರೆನ್ನಲಾದ ಇಬ್ಬರು ಸಂತ ಪರಿಣತರಿಂದ ಇದರ ಶೈಲಿ ರೂಪುಗೊಂಡಿದೆ. *ತುರ್ರ* ಶಿವನ ಸಂಕೇತವಾಗಿದ್ದರೆ, *ಕಲಂಗಿ* ಅವನ ಶಕ್ತಿಯಾಗಿರುವ ಪಾರ್ವತಿಯ ಸಂಕೇತ. ಇವರೆಡು ಸಂಕೇತಗಳಿಂದ ಎರಡು ಪ್ರತ್ಯೇಕ 'ಸಂಪ್ರದಾಯಗಳು' ಉಗಮಗೊಂಡವು. ಕೆಲವೊಮ್ಮೆ ಇವು ವಿಭಿನ್ನ ಸೈದ್ಧಾಂತಿಕ ವಿಚಾರಗಳನ್ನು ನಿರೂಪಿಸಲು ಪಂಡಿತರು ನಡೆಸುವ ಕಾವ್ಯಮಯ ಚರ್ಚೆ ಅಥವಾ ವಾದವಿವಾದವಾದುದೂ ಉಂಟು. ಮಾಳ್ವ ಗಡಿಪ್ರದೇಶಗಳಲ್ಲಿ ಈ ಸಂಪ್ರದಾಯಗಳು ತುಂಬ ಜನಪ್ರಿಯವಾದವು.

ಈ ಸ್ಪರ್ಧೆಗಳು ಅಥವ *ದಂಗಲ್*ಗಳೇ ಕ್ರಮೇಣ ರಂಗಪ್ರದರ್ಶನಗಳ ರೂಪವನ್ನು ತಳೆದವು. ಈ ಶೈಲಿಯಲ್ಲಿ ರಚನೆಯಾಗಿ ರಂಗಪ್ರದರ್ಶನಗೊಂಡ ನೃತ್ಯ–ನಾಟಕಗಳು ಕ್ರಮೇಣ *ತುರ್ರ* ಅಥವಾ *ಕಲಂಗಿ*ಯ ಎಲ್ಲ ಲಕ್ಷಣಗಳನ್ನೂ ಕಳೆದುಕೊಂಡವು; ಜನರ ಅಭಿರುಚಿಗೆ ತಕ್ಕ ಎಲ್ಲ ವಸ್ತುಗಳನ್ನೂ ಅಳವಡಿಸಿಕೊಂಡವು. ಆದರೆ ಈವರೆಗೂ ಇವು *ತುರ್ರ– ಕಲಂಗಿ* ಎಂಬ ಹೆಸರನ್ನೇ ಉಳಿಸಿಕೊಂಡಿವೆ. ಇದಕ್ಕೆ ಹಾಡಿನ ಶೈಲಿಯೇ ಕಾರಣ. ಘೋಸುಂದ, ಚಿತ್ತೋರಗಢ, ನಿಂಬಾಹೆರ ಮತ್ತು ನೀಮಾಚ್‌ಗಳು ಈ ಶೈಲಿಯ ಪ್ರಧಾನ ಕೇಂದ್ರಗಳಾದುವು; ಹಾಗೂ ಸೋನಿ ಜಯುದಯಾಳನ *ತುರ್ರ– ಕಲಂಗಿ ಖಯಾಲ್*ಗಳು ತುಂಬ ಜನಪ್ರಿಯವಾದವು.

ಈಚಿನ ವರ್ಷಗಳಲ್ಲಿ ಈ ಶೈಲಿ ಅವನತಿಗೊಂಡುದಕ್ಕೆ ಸಿನೆಮವೇ ಕಾರಣ ಎನ್ನಲಾಗಿದೆ. ಆರೋಗ್ಯಕರ ಧಾರ್ಮಿಕ ಆಶಯಗಳಿಂದ ಉಗಮಗೊಂಡ *ತುರ್ರ – ಕಲಂಗಿ* ಸ್ಪರ್ಧೆಗಳನ್ನು ಅನಂತರ ವೈಯಕ್ತಿಕ ದ್ವೇಷಕ್ಕೆ ಅವಕಾಶ ಮಾಡಿಕೊಡುವ ಸಾಧನವಾಗಿ ನಡೆಸತೊಡಗಿದರು; ಕೆಲವು ಸಲ, ಪ್ರದರ್ಶನ ಕಾಲದಲ್ಲಿ ಶಾಂತಿ–

ಸುವ್ಯವಸ್ಥೆಯನ್ನು ಕಾಪಾಡಲು ಪೋಲೀಸರನ್ನೂ ಕರೆಸಬೇಕಾಗಿ ಬರುತ್ತಿತ್ತು. ಸಂಗೀತ ಸಂಪತ್ತು, ರಂಗಭೂಮಿಯ ಮೇಲೆ ನೃತ್ಯ ಸಹಿತ ನಾಟಕ ಪ್ರದರ್ಶನ ಹಾಗೂ ವಾದ್ಯ ಸಂಗೀತದ ಗಹನತೆಗಳಿಂದಾಗಿ, ಜಯಪುರದ ಕುಚಾಮನ್ ಮತ್ತು ಶೇಖಾವತಿ ಪ್ರದೇಶಗಳ *ಖಯಾಲ್*ಗಳು ಗಮನಾರ್ಹವಾಗಿವೆ. 'ಚಾಂದ್–ಮಲಯಗಿರಿ', 'ರಿದ್‌ಮಲ್' ಮತ್ತು 'ಮಿರನ್–ಮಂಗಲ್' ಗಳೂ ಸೇರಿದಂತೆ ಕುಚಾಮನ್‌ನ ಲಚೀ ರಾವ್ ಅನೇಕ *ಖಯಾಲ್*ಗಳನ್ನು ರಚಿಸಿದ್ದಾನೆ.

ಶೇಖಾವತಿಯ *ಖಯಾಲ್*ಗಳು ಕುಚಾಮನ್‌ನ *ಖಯಾಲ್*ಗಳಿಗಿಂತ ಪ್ರಾಚೀನ ವೆಂದು ನಂಬಲಾಗಿದೆ. ರಚನೆ ಹಾಗೂ ಹಾಡು, ನೃತ್ಯ, ವೇಷಭೂಷಣಗಳು ಮತ್ತು ಬಯಲುರಂಗಮಂದಿರ ವ್ಯವಸ್ಥೆ–ಇವೆಲ್ಲದರಲ್ಲಿಯೂ ಕುಚಾಮನ್‌ನ ಖಯಾಲ್ ಗಳು ತಮ್ಮ ಮೇಲೆ ಉಂಟಾದ ಆಧುನಿಕ ಪ್ರಭಾವವನ್ನು ತೋರಿಸುತ್ತವೆ. ಆದರೆ ಶೇಖಾವತಿಯ *ಖಯಾಲ್*ಗಳು, ಕಾವ್ಯಮಯ ರಚನೆ, ಸಂಗೀತ, ಅಭಿನಯ ಗಳೆಲ್ಲದರಲ್ಲಿಯೂ ತಮ್ಮ ಮೂಲರೂಪವನ್ನು ಉಳಿಸಿಕೊಂಡಿವೆ.

ಖಂಡೇಲ ಮತ್ತು ಚಿರಾವಗಳಂತಹ ಸ್ಥಳಗಳು ಅನೇಕ 'ಖಯಾಲ್' ರಚಕರಿಗೂ ನಟರಿಗೂ ಆಶ್ರಯ ನೀಡಿದವು. '*ನಗಾರ*'ವನ್ನು ನುಡಿಸುವುದರಿಂದಾಗಿ ರಾಣಾ ಎಂಬ ಹೆಸರು ಪಡೆದ ನಾನು ಎಂಬ ಒಬ್ಬ ಮಿರಾಸಿ ಶೇಖಾವತಿ ಪ್ರದೇಶದಲ್ಲಿ '*ಖಯಾಲ್*'ನ ನಿಜವಾದ ಪ್ರವರ್ತಕನಾಗಿದ್ದ. 'ಸಂವತ್' 1965ರ ಸುಮಾರಿಗೆ ಅವನು ನಿಧನ ಹೊಂದಿದ. ಅವನಿಗೆ ಸಮಾಜ ಮತ್ತು ಸಂಸ್ಕೃತಿಗಳಿಗೆ ಸಂಬಂಧಿಸಿದ ಹಿಂದೂ ಸಂಪ್ರದಾಯಗಳು ಚೆನ್ನಾಗಿ ತಿಳಿದಿದ್ದವು. ತನ್ನ ಈ ಜ್ಞಾನವನ್ನು ಅವನು 'ಖಯಾಲ್'ಗಳ ರಚನೆಯಲ್ಲಿ ವ್ಯಾಪಕವಾಗಿ ಬಳಸಿಕೊಂಡಿದ್ದಾನೆ. ಇವು ಸಂಖ್ಯೆಯಲ್ಲಿ 25ಕ್ಕಿಂತಲೂ ಹೆಚ್ಚಾಗಿವೆ. ಈ ಪ್ರದೇಶದ ಇನ್ನೊಬ್ಬ *ಖಯಾಲ್* ರಚಕನೇ ಉಜಿರ. 'ಮಧ್ವನಲ್ – ಕಾಮ್‌ಕಂಡ್ಲ', 'ಹದಿ ರಾಣಿ', 'ನಿಹಾಲ್ದೆ – ಸುಲ್ತಾನ್', 'ನರ್ಸಿ ಭಗತ್' ಮತ್ತು 'ಪದ್ಮಾವತಿ' ಗಳಂತಹ ಸುಪ್ರಸಿದ್ಧ ಕಥೆಗಳೂ ಸೇರಿದಂತೆ ಸುಮಾರು 15 ಖಯಾಲ್‌ಗಳನ್ನು ರಚಿಸಿದ ಕೀರ್ತಿಗೆ ಉಜಿರ ಪಾತ್ರನಾಗಿದ್ದಾನೆ.

ಚಪ್ಪರದ ಕೆಳಗೆ, ಪೆಟ್ರೋಮ್ಯಾಕ್ಸ್ ದೀಪದಿಂದ ಬೆಳಗುವ ಸ್ಥಳದಲ್ಲಿ, ಒಂದು ಕಡೆಯಿಂದ ಇನ್ನೊಂದು ಕಡೆಗೆ ಒಯ್ಯಬಹುದಾದ *ತಖ್ತ*ಗಳೆಂಬ ಎರಡು ದೊಡ್ಡ ವೇದಿಕೆಗಳ ಎಲ್ಲ ಬದಿಗಳಲ್ಲಿಯೂ, ಗ್ರಾಮದ ಚೌಕದಲ್ಲಿ ತುಂಬಿತುಳುಕುವ ಗ್ರಾಮೀಣ ಪ್ರೇಕ್ಷಕ ಸಮೂಹವನ್ನು ಊಹಿಸಿಕೊಳ್ಳಿ. 'ಸಾರಂಗಿ' ಯ ಸ್ವರಕ್ಕೆ ಸರಿಹೊಂದುವಂತೆ ಉಚ್ಚಸ್ವರದಲ್ಲಿ ಹಾಡುವ ಕಲಾವಿದರು '*ನಗಾರ*'ಗಳನ್ನು ನುಡಿಸುತ್ತಿರುವಾಗ, ಅವರ ಧ್ವನಿ, ರಾತ್ರಿಯ ಮೌನದಲ್ಲಿ, ಆ ಬರಡು ಭೂಮಿಯಲ್ಲಿ ಪ್ರತಿಧ್ವನಿಸುತ್ತವೆ. ಹೀಗೆ ಶೇಖಾವತಿಯ ಸಾವಿರಾರು ಜನರ ಮನೋರಂಜನೆಗಾಗಿ '*ಖಯಾಲ್*'ಗಳ ಪ್ರದರ್ಶನ ನಡೆಯುತ್ತದೆ.

ಚೆನ್ನಾಗಿ ಹಾಡುವವರಿಂದ, ಗಂಭೀರ ಶಾರೀರವಿರುವವರಿಂದ ಹಾಗೂ ರಾಗ – ರಾಗಿಣಿಗಳ ಪರಿಚಯವಿರುವವರಿಂದ ಈ ಸಂಗೀತ ನಾಟಕಗಳು ಪ್ರದರ್ಶಿಸಲ್ಪಡುತ್ತವೆ. ಈಗಲೂ ಚಿರಾವದಲ್ಲಿ ನಾನುವಿನ ಸಂತತಿಯವರಿದ್ದಾರೆ;

ಅವರು ತಮ್ಮ ಪೂರ್ವಜರು ರಚಿಸಿದ 'ಖಯಾಲ್'ಗಳನ್ನು ಆಡುತ್ತಾರೆ.

ಬಿಕನೀರ್ ಪ್ರದೇಶದಲ್ಲಿನ *'ಖಯಾಲ್'*ಗಳನ್ನು *'ರಮ್ಮತ್'*ಗಳೆಂದು ಕರೆಯುತ್ತಾರೆ. ಇವುಗಳನ್ನು ಸ್ವಾಮಿಗಳು ಹೆಚ್ಚಾಗಿ ಪ್ರದರ್ಶಿಸುತ್ತಾರೆ. ಮೊದಮೊದಲು ಇವು ಕೇವಲ ಸಂಗೀತ ಕಾರ್ಯಕ್ರಮಗಳಾಗಿದ್ದವು. ಆದರೆ ಬರಬರುತ್ತ ನೃತ್ಯ ಹಾಗೂ ಅಭಿನಯಗಳೂ ಸೇರಿ, ಪರಿಣಾಮವಾಗಿ *ರಮ್ಮತ್*ಗಳು *ಖಯಾಲ್*ಗಳಾಗಿ ಮಾರ್ಪಟ್ಟವು. ಇವು ತುಂಬ ಜನಪ್ರಿಯವಾದವು. ಹಿಂದನ್ಮೇಸಿ ಎಂಬುದೊಂದು ಹಳೆಯ *ರಮ್ಮತ್*. ಆದರೆ ಮೋತಿಲಾಲ್‌ನಿಂದ ರಚಿತವಾದ 'ಅಮರ್ ಸಿಂಗ್ ರಾಥೋರ್' ಅನಂತರದ *ಖಯಾಲ್* ಆಗಿದೆ. ಇಂದು *ರಮ್ಮತ್* ಮತ್ತು *ಖಯಾಲ್* ಗಳು ಸಮಾನಾರ್ಥಕವಾಗಿವೆ. ಇವುಗಳನ್ನು *'ನಗಾರ'*, ಹಾರ್ಮೋನಿಯಮ್, 'ಸಾರಂಗಿ', 'ಢೋಲಕ್' ಹಾಗೂ *'ಮಂಜಿರ'* ಗಳೊಡನೆ ಪ್ರದರ್ಶಿಸಲಾಗುತ್ತದೆ. *'ಖಯಾಲ್'*ಗಳನ್ನು ರಂಗದ ಮೇಲೆ ಪ್ರದರ್ಶಿಸಲು ಪ್ರಶಸ್ತ ಕಾಲವೆಂದರೆ ಹೋಳಿಹಬ್ಬ ಬರುವಂತಹ ಫಾಲ್ಗುಣಮಾಸ.

ರಾಜಾಸ್ಥಾನದ ಎಲ್ಲೆಡೆ *'ಖಯಾಲ್'*ಗಳು ಜನಪ್ರಿಯವಾಗಿವೆ. ಜೈಸಲ್ಮೇರ್, ಅಲ್ವರ್, ಕೋಟ ಮತ್ತ ಝುಂಲವಾರ್‌ಗಳು ತಮ್ಮವೇ ಆದ *ಖಯಾಲ್*ಗಳನ್ನು ಹೊಂದಿದ್ದು, ಇವು, ತಮ್ಮ ಸಾಮಾನ್ಯ ಮಾದರಿ ಹಾಗೂ ತಂತ್ರಗಳಿಗೆ ಸಂಬಂಧಿಸಿದಂತೆ ಇತರ ಪ್ರದೇಶಗಳ *ಖಯಾಲ್*ಗಳಿಗಿಂತ ಭಿನ್ನವಾಗಿಲ್ಲ. ಆದರೆ ಭರತಪುರದ *ನೌಟಂಕಿ*ಗಳು ವಿಶೇಷ ಉಲ್ಲೇಖಕ್ಕೆ ಅರ್ಹವಾಗಿವೆ. ಸುಸಜ್ಜಿತ ರಂಗಮಂಟಪ ಮತ್ತು ವರ್ಣರಂಜಿತ ತೆರೆಗಳನ್ನು ಬಳಸುವ ಈ ರೂಪ ಈಗ ಬಹುಮಟ್ಟಿಗೆ ಉಳಿದೇ ಇಲ್ಲ.

ಆದರೆ, *ನೌಟಂಕಿ*ಗಳ ವೈಶಿಷ್ಟ್ಯವಿದ್ದುದು *ನಾಗರ*ಗಳ ನುಡಿಸುವಿಕೆಯಲ್ಲಿ ಹಾಗೂ ಎತ್ತರ ಮತ್ತು ಉದ್ದ ಜಿಗಿತಗಳಿಂದ ಕೂಡಿದ ಲವಲವಿಕೆಯ ನೃತ್ಯದಲ್ಲಿ. ಇದರಿಂದಾಗಿ, ಇವಕ್ಕೆ 'ತಖ್ತ–ತೋಡ್' ಅಥವಾ 'ತಖ್ತ–ಹೊಯ್ಯು' ಎಂಬ ಹೆಸರು ಬಂದಿದೆ. ಪ್ರದರ್ಶನಾನಂತರ ನೃತ್ಯಗಾರ ತುಂಬ ದಣಿದಿರುತ್ತಾನೆ. *ನೌಟಂಕಿ*ಯ ಕಥೆಗಳು ರಾಮ ಮತ್ತು ಕೃಷ್ಣರ ಜೀವನಗಳನ್ನು ಕುರಿತಿರುತ್ತವೆ. ಆದರೆ ತೇಜ ಜಾಟ್, ದುಂಗ್ಜಿ, ಜವಾಹರಜಿ ಹಾಗೂ ಗೋಪೀಚಂದರ ಕಥೆಗಳನ್ನಾಧರಿಸಿದ *ನೌಟಂಕಿ*ಗಳೂ ಸಾಮಾನ್ಯವಾಗಿದ್ದವು.

## ರಾಮಲೀಲಾ ಮತ್ತು ರಾಸಲೀಲಾ

*ರಾಮಾಯಣ*, *ಮಹಾಭಾರತ*ಗಳು ಜನಪ್ರಿಯ ಜನಪದ ವಿನೋದಗಳಿಗೆ ಸಂಬಂಧಿಸಿದಂತೆ, ಎಂದೂ ಬಿಟ್ಟುಬಿಡಲಾರದಂತಹ ಪ್ರಮುಖ ಮೂಲಗಳಾಗಿವೆ. ಜನಪದ ನಾಟಕಗಳಿಗೂ, ಈ ಮಹಾಕಾವ್ಯಗಳಲ್ಲಿ ಮತ್ತು ಪುರಾಣಗಳಲ್ಲಿ ಬರುವ ಧಾರ್ಮಿಕ ಕಥೆಗಳು ವಸ್ತುವಾಗಿವೆ. ನೃತ್ಯಗಾರರು ಮತ್ತು ಇತರ ಪ್ರದರ್ಶನ ಕಲಾವಿದರು, ವಿವಿಧ ದೇವದೇವಿಯರ, ಸಂತರ ಹಾಗೂ ದೆವ್ವಗಳ ಮುಖವಾಡಗಳನ್ನು ಧರಿಸಿ, ಬಿಕನೀರ್, ಶೇಖಾವತಿಗಳಲ್ಲಿ ಗಣೇಶ ಚತುರ್ಥಿ

ಯಂತಹ ಹಬ್ಬದ ದಿನಗಳಲ್ಲೂ ಜೈಪುರ್, ಭರತಪುರಗಳಲ್ಲಿ ನರಸಿಂಹ ಚತುರ್ದಶಿಯಂದೂ ಪ್ರದರ್ಶನ ನೀಡುವುದು ಈ ಅಭಿಪ್ರಾಯಕ್ಕೆ ಪುಷ್ಟಿ ನೀಡುತ್ತದೆ.

ರಾಜಾಸ್ಥಾನ ತನ್ನದೇ ಆದ ರಾಮಲೀಲಾ ತಂಡಗಳನ್ನು ಹೊಂದಿದೆ. ಈ ತಂಡಗಳು ದಸರಾದಲ್ಲಿ ಮಾತ್ರವಲ್ಲದೆ, ತಮಗೆ ಹಾಗೂ ಒಂದು ನಿರ್ದಿಷ್ಟ ಬಡಾವಣೆಯ ನಿವಾಸಿಗಳಿಗೆ ಸೂಕ್ತವೆನಿಸಿದ ಯಾವುದೇ ಕಾಲದಲ್ಲಿ ರಾಮಲೀಲಾ ಪ್ರದರ್ಶನ ನೀಡುತ್ತವೆ. ಹಾರ್ಮೋನಿಯಮ್ ನುಡಿಸುತ್ತಾ ಗಾಯಕ ರಾಮಾಯಣವನ್ನು ಹಾಡುತ್ತಾನೆ. ಆಗ ನಟರು ತೆರೆಗಳಿರುವ ರಂಗಭೂಮಿಯ ಮೇಲೆ 'ಲೀಲಾ' ವನ್ನು ಪ್ರದರ್ಶಿಸುತ್ತಾರೆ. ನಡುವೆ ಉರಿಯುವ ಜ್ವಾಲೆಯಿರುವ ಹಿತ್ತಾಳೆ ತಗಡೊಂದನ್ನು, ಹಣ ಸಂಗ್ರಹಿಸಲು 'ಆರತಿ' ಯಂತೆ, ಅನೇಕ ಸಲ ಪ್ರೇಕ್ಷಕ ಸಮೂಹದ ನಡುವೆ ಒಯ್ಯಲಾಗುತ್ತದೆ. ಇದೇ ವಿಧಾನದಿಂದ ರಾಮಲೀಲಾ ತಂಡಗಳ ಸದಸ್ಯರು ತಮ್ಮ ಜೀವನ ನಿರ್ವಹಣೆಗೆ ಹಣ ಸಂಗ್ರಹಿಸುತ್ತಾರೆ. ಆಲ್ವರ್ ಹಾಗೂ ಭರತಪುರಗಳಲ್ಲಿ ಪ್ರದರ್ಶಿಸಲ್ಪಡುವ ರಾಮಲೀಲಾಗಳು ಅತ್ಯಂತ ಪ್ರಭಾವಶಾಲಿ ಮತ್ತು ಕಲಾತ್ಮಕವಾಗಿರುತ್ತವೆ.

ರಾಸಲೀಲಾ ಕೃಷ್ಣನ ಕಥೆಯನ್ನು, ಮುಖ್ಯವಾಗಿ ಗೋಕುಲದ ಗೋವಳಿಗರು ಹಾಗೂ ಗೌಳಿಗಿತ್ತಿಯರೊಡನೆ ಅವನು ನಡೆಸುವ ಕ್ರೀಡೆಗಳನ್ನು, ನಿರೂಪಿಸುತ್ತದೆ. ಪ್ರದರ್ಶನವು ಮುಖ್ಯವಾಗಿ ಹಾಡು-ನೃತ್ಯಗಳಿಂದಲೇ ಕೂಡಿರುವುದರಿಂದ ರಾಸಲೀಲಾಗೆ ರಂಗಭೂಮಿಯ ಅಗತ್ಯವೇ ಇಲ್ಲ. ಫುಲೇರದ ಸಮೀಪವಿರುವ ಹಿನ್ದೋಣಿಡ, ರಜರಿ ಮತ್ತು ಅಸಲ್‌ಪುರದ ರಾಸಲೀಲಾ ತಂಡಗಳು, ರಾಸಲೀಲಾದಲ್ಲಿನ ತಮ್ಮ ಪರಿಣತಿಗಾಗಿ ಇಡೀ ರಾಜಾಸ್ಥಾನದಲ್ಲಿಯೇ ಗಮನಾರ್ಹವಾಗಿವೆ. ಕೃಷ್ಣನ ಜನ್ಮಸ್ಥಳವೂ ಅವನು ತನ್ನ ಶೈಶವವನ್ನು ಕಳೆದ ಸ್ಥಳವೂ ಆಗಿರುವ ಬ್ರಜ್ ಪ್ರದೇಶಕ್ಕೆ ತುಂಬ ಸನಿಹವಿರುವ ಭಾರತಪುರದಲ್ಲಿ ರಾಯ್ ಸಮುದಾಯವು, ರಾಸಲೀಲಾ ಪ್ರದರ್ಶಿಸುವ ವೃತ್ತೀಯ ಸಮುದಾಯವಾಗಿದೆ. ರಾಸಲೀಲಾದಲ್ಲಿ ಬಳಸಲಾಗುವ ವಾದ್ಯಗಳೆಂದರೆ ಹಾರ್ಮೋನಿಯಮ್, ಧೋಲಕ್ ಮತ್ತು ಸಣ್ಣ 'ನಗಾರ' ಗಳು.

## ಸೂತ್ರದ ಬೊಂಬೆಯಾಟಗಳು

ಜನಪದ ನಾಟಕಗಳ ಬೆಳವಣಿಗೆಯಲ್ಲಿ ಸೂತ್ರದ ಬೊಂಬೆಯಾಟಗಳಿಗೆ ಪ್ರಮುಖ ಸ್ಥಾನವಿದೆಯೆಂದು ಹೇಳಲಾಗಿದೆ. ಈ ಪ್ರದರ್ಶಕ ಕಲೆಯಲ್ಲಿ ರಾಜಾಸ್ಥಾನ ಮಹಾನ್ ಪರಂಪರೆಯನ್ನು ಹೊಂದಿದೆ. ಬೊಂಬೆಯಾಟಗಳ ಮೇಲೆ, ಹಾಡು, ನೃತ್ಯ ಮತ್ತು ಅಭಿನಯಗಳು ಒಟ್ಟಾಗಿ ತಮ್ಮ ಪ್ರಭಾವ ಬೀರಿವೆ. ರಾಮಚರಣ್ ಮಹೇಂದ್ರ ಅವರ ಅಭಿಪ್ರಾಯದಲ್ಲಿ, ಸೂತ್ರದ ಬೊಂಬೆ-ನೃತ್ಯ ಏಕಾಂಕನಾಟಕದ ಎಲ್ಲ ಗುಣಲಕ್ಷಣಗಳನ್ನೂ ಹೊಂದಿದೆ. ಈ ನೃತ್ಯವು ಏಕಾಂಕ ನಾಟಕದ ವಿಕಾಸದಲ್ಲಿ ಪ್ರಧಾನ ಪಾತ್ರ ವಹಿಸಿದೆ.

ರಾಜಾಸ್ಥಾನದ ಸೂತ್ರದ ಬೊಂಬೆಯಾಟ ರಂಗಭೂಮಿಯು ಅತಿ ಕಮ್ಮಿ ವೆಚ್ಚದ

ವಿನೋದ ಮಾಧ್ಯಮವಾಗಿದೆ. ಆದ್ದರಿಂದ ಇದು ರಾಜಾಸ್ಥಾನದಲ್ಲಿ ಮಾತ್ರವಲ್ಲದೆ ಉತ್ತರ ಭಾರತದ ಎಲ್ಲ ಗ್ರಾಮೀಣ ಪ್ರದೇಶಗಳಲ್ಲಿಯೂ ಅತ್ಯಂತ ಪ್ರಶಸ್ತವಾದ ಹಾಗೂ ಜನಪ್ರಿಯತೆ ಗಳಿಸಿದ ವಿನೋದವೆನಿಸಿದೆ. ಸೂತ್ರದ ಬೊಂಬೆಯಾಟಕ್ಕೆ ಬೇಕಾದುದೆಂದರೆ, ಎರಡು ಮಂಚಗಳು, ಒಂದು ಲಾಟೀನು ಮತ್ತು ಒಂದು ಬುಟ್ಟಿ ತುಂಬ ಬೊಂಬೆಗಳು. ಬೊಂಬೆಯಾಟ ಪ್ರದರ್ಶಿಸುವವರನ್ನು ಭಾಟರು ಎನ್ನುತ್ತಾರೆ. ಇವರು ಕುಚಾಮನ್, ಪರ್ಬತ್ಸರ್, ದೀಡ್ವಾನ ಮತ್ತು ನವಾನ್‌ಗಳಲ್ಲಿದ್ದಾರೆ. ಇವೆಲ್ಲ ನಾಗಪುರ ಜಿಲ್ಲೆಗೆ ಸೇರಿವೆ. ಇವರು ಸಾಮಾನ್ಯವಾಗಿ ಚಳಿಗಾಲದಲ್ಲಿ ತಮ್ಮೂರು ಬಿಟ್ಟು ಉತ್ತರಭಾರತದ ನಗರಗಳತ್ತ ಹೊರಡುತ್ತಾರೆ. ಇವರು ಗುಂಪುಗಳಾಗಿದ್ದು ಪ್ರತಿ ಗುಂಪಿನಲ್ಲಿಯೂ 10 ರಿಂದ 15 ರವರೆಗೆ ಕುಟುಂಬಗಳಿರುತ್ತವೆ. ತಮ್ಮೆಲ್ಲ ವಸ್ತುಗಳನ್ನೂ ಬೆನ್ನ ಮೇಲೆ ಹೊತ್ತುಕೊಂಡು ಸಂಚರಿಸುವ ಭಾಟರು ರಸ್ತೆ ಬದಿಯಲ್ಲಿ ಅಥವಾ ನಗರದ ಯಾವುದಾದರೂ ಸಾರ್ವಜನಿಕ ಸ್ಥಳದಲ್ಲಿ ಡೇರೆ ಹಾಕಿಕೊಂಡು, ಕೈಗಳಲ್ಲಿ ಬೊಂಬೆಗಳನ್ನು ಹಿಡಿದು, ಪ್ರದರ್ಶನ ವ್ಯವಸ್ಥೆ ಮಾಡುವವರನ್ನು ಹುಡುಕುತ್ತ ಸುತ್ತಮುತ್ತ ಅಲೆಯುತ್ತಾರೆ.

ವಾಸ್ತವವಾಗಿ ವಲಸೆಗಾರರಾದ ಈ 'ಪುತ್ಲಿವಾಲಾ' ಗಳು ಅಥವಾ ಬೊಂಬೆಯಾಟ ಕಲಾವಿದರು ತುಂಬ ಬಡವರಾಗಿರುತ್ತಾರೆ. ಮಳೆ ಚೆನ್ನಾಗಿ ಬಂದರೆ, ರಾಜಾಸ್ಥಾನದ ರೈತರು ತಮ್ಮ ಹೊಲಗಳಲ್ಲಿ ಇವರಿಗೆ ತುಂಬ ಕೆಲಸ ಕೊಡುತ್ತಾರೆ. ಇಲ್ಲವಾದರೆ, ಭಿಕ್ಷೆ ಬೇಡುವುದು ಅಥವಾ ದುಬಾರಿ ಬಡ್ಡಿ ಕೊಡಲೊಪ್ಪಿ ಹಣ ಸಾಲ ಮಾಡುವುದು ಇವರಿಗೆ ಅನಿವಾರ್ಯವಾಗುತ್ತದೆ. ಆದರೆ ಇವರದು ಪರಿಣತಿ ಪಡೆದವರ ಹಾಗೂ ಜನಪ್ರಿಯ ವಿನೋದ ಪ್ರದರ್ಶನ ನೀಡುವವರ ಸಮುದಾಯ. ಇವರಿಗೆ ಒಳ್ಳೆಯ ಸಂಗೀತ ಮತ್ತು ಕಾವ್ಯ ಪ್ರಜ್ಞೆಯಿದೆ. ಇವರು ಪ್ರಾಚೀನ ರಾಜಾಸ್ಥಾನೀ ಕಾವ್ಯಗಳ ಉತ್ಕೃಷ್ಟ ಭಾಗಗಳನ್ನೂ ಬಾಯಿಪಾಠಮಾಡಿ ಸದಾ ನೆನಪಿನಲ್ಲಿಟ್ಟುಕೊಳ್ಳಬಲ್ಲವರು. ಇವುಗಳನ್ನೇ ಭಾಟರು ತಮ್ಮ ಬೊಂಬೆಯಾಟ ಪ್ರದರ್ಶನಗಳಲ್ಲಿ ಮತ್ತೆ ಮತ್ತೆ ಹಾಡುತ್ತಾರೆ.

ಸೂತ್ರದ ಬೊಂಬೆಗಳು ಮರದಿಂದ ತಯಾರಾಗಿರುತ್ತವೆ. ತಂಡದ ಮುಖ್ಯಸ್ಥನು ಒಂದು ದಾರದ ಮೂಲಕ, ತನ್ನ ಚುರುಕಾದ ಬೆರಳುಗಳಿಂದ ಬೊಂಬೆಗಳನ್ನು ನಿಯಂತ್ರಿಸಿ, ಮಾನವನ ವಿವಿಧ ಮನೋಭಾವನೆಗಳನ್ನು ಬೊಂಬೆಗಳೇ ಅಭಿವ್ಯಕ್ತಿಸು ವಂತೆ ಮಾಡುತ್ತಾನೆ. ಸಂಗೀತದಲ್ಲಿಯೆ ಅಳವಡಿಸಲಾದ ಪ್ರಶ್ನೋತ್ತರಗಳು ಮತ್ತು ಸಂಭಾಷಣೆಗಳನ್ನು ಪುತ್ಲಿವಾಲನ ಮಡದಿ ನಡೆಸುತ್ತಾಳೆ. ಬೊಂಬೆಗಳ ನೃತ್ಯ ಮತ್ತಿತರ ಚಲನೆಗಳಿಗನುಸಾರವಾಗಿ ಅವಳು ಹಾಡುತ್ತಿದ್ದಾಗ ಗಂಡ ಢೋಲಕ್ ನುಡಿಸುತ್ತಾನೆ. ಬೊಂಬೆಗಳನ್ನು ನಿಯಂತ್ರಿಸುವವನು, ಆಟದ ಉದ್ದಕ್ಕೂ ಸಿಳ್ಳೆ ಹಾಕುವ ಸಾಧನವೊಂದರ ನೆರವಿನಿಂದ, ಕಥೆಯ ನಿರೂಪಣೆಗೆ ತಕ್ಕಂತೆ, ಬೊಂಬೆಗಳ ಪರವಾಗಿ ಅಭಿನಯಿಸುತ್ತಾನೆ. ರಾಜಾಸ್ಥಾನದ ಬೊಂಬೆಯಾಟ ಕಲಾವಿದರು ಅಮರ್ ಸಿಂಗ್ ರಾಥೋರನ ಕಥೆಯನ್ನು ಪರಿಣಾಮಕಾರಿಯಾದ ರೀತಿಯಲ್ಲಿ ಮಾರ್ಪಡಿಸಿದ್ದಾರೆ. ಅಲ್ಲಲ್ಲಿ ಹಾಸ್ಯ ಪ್ರಸಂಗಗಳನ್ನು ಸೇರಿಸಿ, ಈ ಐತಿಹಾಸಿಕ ವಸ್ತುವನ್ನು ಇನ್ನಷ್ಟು

ಪ್ರಸಿದ್ಧವಾಗಿ ಮಾಡಿದ್ದಾರೆ. ಪುತ್ಲಿವಾಲಾಗಳು, ದೆಹಲಿಯಂಥ ನಗರಗಳಲ್ಲಿ ಕೂಡ, ಪ್ರದರ್ಶನ ನಡೆಸುವ ಕಾಲದಲ್ಲಿ, ವಾರವೊಂದರಲ್ಲಿ ಸಂಗ್ರಹಿಸಲು ಸಾಧ್ಯವಾಗುವ ಕೇವಲ 15–20 ರೂಪಾಯಿಗಳಿಂದಲೇ ಸಂತೃಪ್ತರಾಗಿ ಜೀವನ ಸಾಗಿಸುತ್ತಾರೆ.

ಇತರ ಜನಪದ ಕಲೆಗಳಂತೆ ಬೊಂಬೆಯಾಟ ರಂಗಭೂಮಿಯೂ ಭಾರತದಲ್ಲಿ ಅವನತಿ ಹೊಂದುತ್ತಿದೆ. ಬೊಂಬೆಯಾಟಗಾರರು ಅಶಿಕ್ಷಿತರೂ ಅಸಂಘಟಿತರೂ ಆಗಿರುವುದೇ ಇದಕ್ಕೆ ಕಾರಣ. ಇವರು ಬಳಸುವ ಬೊಂಬೆಗಳು ಒಡ್ಡೊಡ್ಡಾಗಿರುತ್ತವೆ; ಇವರು ನಿರೂಪಿಸುವ ಕಥೆಗಳೂ ಬಳಕೆ ತಪ್ಪಿದ ಹಳೆಯ ಕಥೆಗಳಾಗಿರುತ್ತವೆ. ಸೂಕ್ತ ಕಥಾವಸ್ತುಗಳನ್ನೂ ಉತ್ತಮ ಬೊಂಬೆಗಳನ್ನೂ ಒದಗಿಸಿದರೆ ಇವರು ಪ್ರಚಾರ ಗಳಿಸಲು ಹಾಗೂ ಅನೇಕ ವರ್ಷಗಳ ಕಾಲ ಗ್ರಾಮೀಣ ಜನರಿಗೆ ಮನೋರಂಜನೆ ನೀಡಲು ಸಾಧ್ಯ. ಏಕೆಂದರೆ ಮುಂದಿನ ಕೆಲವೇ ವರ್ಷಗಳಲ್ಲಿ ಹೆಚ್ಚಿನ ಭಾರತೀಯ ಗ್ರಾಮಗಳು ವಿದ್ಯುತ್ ಸಂಪರ್ಕ ಪಡೆಯುವ ಅಥವಾ ಚಲನಚಿತ್ರ–ನಾಟಕ ಮಂದಿರಗಳ ಸೌಲಭ್ಯ ಹೊಂದುವ ಸಂದರ್ಭವಿಲ್ಲ.

ಪುನಃ ಸಂಘಟಿಸಿದ ಪಕ್ಷದಲ್ಲಿ ಬೊಂಬೆಯಾಟ ರಂಗಭೂಮಿಯ ಎದುರು ಅನೇಕ ಸಾಧ್ಯತೆಗಳಿವೆ. ಉದಯಪುರದ ಭಾರತೀಯ ಲೋಕಕಲಾ ಮಂಡಲ ಹಾಗೂ ನವದೆಹಲಿಯ ಸಂಗೀತ ನಾಟಕ ಅಕಾದೆಮಿ–ಇವರು ಒದಗಿಸಿದ ರಾಮಾಯಣ ಕಥೆ ಹಾಗೂ ಜಯಚಂದ್ ಮತ್ತು ಪೃಥ್ವೀಲಾಲ್ ಎಂಬೆರಡು ಹೊಸ ಕಥೆಗಳು ರಂಗಭೂಮಿಯ ಮೇಲೆ ಪ್ರಯೋಗಗೊಂಡಿದ್ದರಿಂದಲೇ ಇದು ಸ್ಪಷ್ಟವಾಗಿದೆ. ಲೋಕಕಲಾ ಮಂಡಲದಲ್ಲಿ ವಿಕಾಸಗೊಂಡ ಬೊಂಬೆಯಾಟ ಪ್ರದರ್ಶನಗಳು ವಿದೇಶಗಳಲ್ಲಿ ಕೂಡ ಪ್ರೇಕ್ಷಕರ ಮೇಲೆ ಅಗಾಧ ಪ್ರಭಾವ ಬೀರಿವೆ.

## ದೊಂಬರಾಟಗಳು

ಜನಪದ ವಿನೋದ ನೀಡುವಂತಹ ಇನ್ನೊಂದು ಉಲ್ಲೇಖಾರ್ಹ ಸಮುದಾಯವೇ ನಾಟರದು. ಇವರಲ್ಲಿ ಮೂರು ಗುಂಪುಗಳಿವೆ: ರಾಜ್–ನಾಟ್, ದಖಿನೀ–ನಾಟ್ ಮತ್ತು ಭಾಟ್–ನಾಟ್. ರಾಜ್–ನಾಟ್‌ರಿಗೆ ಹಿಂದೆ ರಾಜಮನೆತನದವರ ಹಾಗೂ ಅವರ ಸಾಮಂತರುಗಳ ಆಶ್ರಯವಿದ್ದಿತು. ಆದರೆ ಈಗ ಇವರು ತಮ್ಮ ಸಮುದಾಯದ ಇತರ ಗುಂಪುಗಳಿಗೆ ಸೇರಿದವರಂತೆ ತೀವ್ರ ದಾರಿದ್ರ್ಯಕ್ಕೆ ಈಡಾಗಿದ್ದಾರೆ.

ಗ್ರಾಮ ಹಾಗೂ ನಗರಗಳ ಜನರನ್ನು ರಂಜಿಸಲು, ನಾಟರು ಪ್ರದರ್ಶಿಸುವ ದೊಂಬರಾಟಗಳಲ್ಲಿ ಕೆಲವೆಂದರೆ, ಬಿಗಿಯಾಗಿ ಕಟ್ಟಿದ ಹಗ್ಗದ ಮೇಲೆ ನಡೆಯುವುದು, ಎತ್ತರವಾದ ಬಿದಿರಿನ ಕಂಬದ ಮೇಲೆ ಸಮತೋಲನ ಚಮತ್ಕಾರ ನಡೆಸುವುದು, 'ಥಾಲಿ'ಯೊಂದರಲ್ಲಿ ಎರಡೂ ಕಾಲುಗಳನ್ನಿರಿಸಿಕೊಂಡು, ಅಂತರಿಕ್ಷದಲ್ಲಿ ತೂಗುತ್ತಿರುವ ಬಿಗಿದಾರದ ನೆರವಿನಿಂದ ಚಮತ್ಕಾರಗಳನ್ನು ಪ್ರದರ್ಶಿಸುವುದು ಇತ್ಯಾದಿ. ಇಂಥ ಪ್ರದರ್ಶನಗಳ ಕಾಲದಲ್ಲಿ ಅವರು ಸಂಗ್ರಹಿಸುವ ಅಲ್ಪ ಮೊತ್ತದ ಹಣವೇ ದೊಂಬರಾಟಗಾರರ ಜೀವನ ಸಾಗಿಸಲು ಇರುವ ಆದಾಯ. ಆದಾಯ ಜೀವನ ನಿರ್ವಹಣೆಗೆ ಸಾಲದಾದಾಗ, ನಾಟ್ ಮಹಿಳೆಯರು ಭಿಕ್ಷೆ ಬೇಡಬೇಕಾದ

ಅನಿವಾರ್ಯ ಪರಿಸ್ಥಿತಿ ಎದುರಾಗುತ್ತದೆ.

ವರ್ಷದಲ್ಲಿ ಎಂಟು ತಿಂಗಳು ಜೀವನೋಪಾಯ ಹುಡುಕುತ್ತ ಅಲೆಯುವ ನಾಟರು ಮಳೆಗಾಲದಲ್ಲಿ ಕೆಲಸವಿಲ್ಲದೆ ಮನೆಗಳಲ್ಲಿ ಕುಳಿತುಕೊಳ್ಳುತ್ತಾರೆ. ಏಕೆಂದರೆ ಬೇಸಾಯ ಮಾಡಲು ಇವರಿಗೆ ಹೊಲಗದ್ದೆಗಳಿಲ್ಲ.

ಚಿತ್ತೋರ್‌ಗಢ ಜಿಲ್ಲೆಯ ನಿಂಬಾಹೆರದ ಸಮೀಪವಿರುವ 'ಸಜ್ಜನ್‌ಖಾನ್ ಕಾ ಡೇರಾ' ರಾಜಾಸ್ಥಾನದಲ್ಲಿಯೆ ಅತ್ಯಂತ ದೊಡ್ಡದಾಗಿರುವ, ನಾಟರ ಅತಿ ದೊಡ್ಡ ನೆಲೆಯಾಗಿರುತ್ತದೆ. ಇದನ್ನು ಸ್ಥಾಪಿಸಿದವನು ಸಜ್ಜನ್ ಖಾನ್. ಇವನು ಸುಮಾರು 400 ವರ್ಷಗಳ ಹಿಂದೆ ಜೀವಿಸಿದ್ದ ಮತ್ತು ಆ ಕಾಲದಲ್ಲಿ ಅತ್ಯಂತ ಪ್ರಭಾವಿ ನಾಟ್ ಆಗಿದ್ದ. ಇತರ ನಾಟ್ ಗ್ರಾಮಗಳು ರಾಜಾಸ್ಥಾನ ಮತ್ತು ಮಧ್ಯ ಪ್ರದೇಶಗಳ ಗಡಿಪ್ರದೇಶಗಳಲ್ಲಿವೆ.

ದಖಿನೀ–ನಾಟರು ಹೆಸರಿನಲ್ಲಿ ಮಾತ್ರ ನಾಟರಾಗಿದ್ದಾರೆ. ಇವರಿಗೆ ರಾಜ್–ನಾಟರಿಗಿರುವಂತಹ ಕೌಶಲವಿಲ್ಲ. ವಿಕಾರ ನೃತ್ಯಗಳನ್ನು ಮಾಡುತ್ತ ಭಿಕ್ಷೆ ಬೇಡುವ ಈ ಸಮುದಾಯಕ್ಕೆ ಸೇರಿದ ಮಹಿಳೆಯರು ಜೀವನ ನಿರ್ವಹಣೆಗಾಗಿ ವೇಶ್ಯಾವೃತ್ತಿ ನಡೆಸಬೇಕಾದ ಪರಿಸ್ಥಿತಿಯೂ ಇದೆ.

## ಜನಪದ ಕಲೆಗಳು

ಕಲೆ ಜೀವನವನ್ನು ಅರ್ಥಪೂರ್ಣವಾಗಿ ಮಾಡುತ್ತದೆ. ಹಾಡುಗಳನ್ನೂ ನೃತ್ಯಗಳನ್ನೂ ಒಳಗೊಂಡಂತೆ, ಸಂಗೀತ, ಕಾವ್ಯ ಹಾಗೂ ಪ್ರದರ್ಶನ ಕಲೆಗಳು, ದೇಶದ ಈ ಭಾಗದಲ್ಲಿನ ಜನಪದ ಜೀವನಕ್ಕೆ ಎಂಥ ಕೊಡುಗೆ ನೀಡಿವೆ ಎಂಬುದನ್ನು ಹಿಂದಿನ ಪುಟಗಳಲ್ಲಿ ನಾವು ನೋಡಿದ್ದೇವೆ.

ರಾಜಾಸ್ಥಾನದಲ್ಲಿ ಹಾಡು, ನೃತ್ಯ ಮತ್ತು ನಾಟಕಗಳನ್ನು ಏಕಕಾಲದಲ್ಲಿ ಸಂಯೋಜಿತ ರೂಪದಲ್ಲಿ ನೋಡಬಹುದು. ಅನೇಕ ಜನಪದ ಗೀತೆಗಳು 'ಸೋರಥ್', 'ಮಂಡ್', 'ದೇಶ್', 'ಸಾರಣಿ' ಮತ್ತು ಇತರ ಶಾಸ್ತ್ರೀಯ ಸಂಗೀತದ ಶ್ರುತಿಗೆ ಹೊಂದುತ್ತವೆ ಎಂಬ ವಾಸ್ತವಾಂಶವು ಲಲಿತಕಲೆಗಳ ಬಗ್ಗೆ ಜನರಿಗಿರುವ ಅಭಿರುಚಿಯನ್ನು ಎತ್ತಿ ತೋರಿಸುತ್ತದೆ. ಸುಪ್ರಸಿದ್ಧ 'ಪನಿಹರಿ' ಹಾಡು *ಗೀತಗೋವಿಂದ*ದ ಸುಮಧುರ ಪದದಂತೆಯೆ ಇದೆ. ಹದಿನಾಲ್ಕು ಹಾಗೂ ಹದಿನಾರು 'ಮಾತ್ರೆ'ಗಳಲ್ಲಿ ರಚಿತವಾದ ಅನೇಕ ಹಾಡುಗಳಿವೆ; ಇತರ ಹಾಡುಗಳು ನೃತ್ಯ ರೂಪಗಳ ಲಯಕ್ಕೆ ಸರಿಹೊಂದುತ್ತವೆ. ಭಾರತೀಯ ಶಾಸ್ತ್ರೀಯ ಸಂಗೀತವು, ದಿನದ ನಿರ್ದಿಷ್ಟ ಕಾಲಗಳಿಗಾಗಿ ರಾಗ–ರಾಗಿಣಿಗಳನ್ನು ವಿನ್ಯಾಸಗೊಳಿಸಿದಂತೆಯೆ, ರಾಜಾಸ್ಥಾನದ 'ಓಲ್ಯುನ್,' 'ಸಪ್ನೊ', 'ಹಿಚಕಿ' ಮತ್ತಿತರ ಅಸಂಖ್ಯಾತ ಪ್ರಸಿದ್ಧ ಜನಪದ ಗೀತೆಗಳು ಕೆಲವು ಸೂಕ್ತ ಸಂದರ್ಭ ಹಾಗೂ ಲಹರಿಗಳಿಗಾಗಿಯೇ ರಚಿತವಾಗಿವೆ. ಅಂಥ ಸನ್ನಿವೇಶಗಳಲ್ಲಿ ಹಾಡಿದಾಗ ಅವುಗಳ ಪ್ರಭಾವ ಮಹತ್ತರ ಹಾಗೂ ಅಧಿಕ.

ರಾಜಾಸ್ಥಾನದ ಜಾನಪದದಲ್ಲಿನ ಕಾವ್ಯಗುಣವು ಜನಪದ ಗೀತೆಗಳು ಮತ್ತು

'ಖಯಾಲ್' ಗಳೆರಡರಲ್ಲೂ ಕಂಡು ಬರುತ್ತದೆ. ಇವುಗಳಿಂದ ಅನಕ್ಷರಸ್ಥ ಜನರೂ ಸಂತೋಷಪಡಬಲ್ಲರು. 'ನಿಹಾಲ್ದೆ–ಸುಲ್ತಾನ್', 'ಗೋಪೀಚಂದ್ ಭರ್ತೃಹರಿ', 'ನರ್ಸೀಜಿ–ರೊ–ಮಾಯೆರೊ' ಮತ್ತು 'ಷೆಯೋಚಿ–ರೊ–ಬ್ಯಾಲೊ'ಗಳಂತಹ ಲಾವಣಿಗಳಿಂಧ ಸಂತೋಷಪಡಲು ಯಾವುದೇ ಶಿಕ್ಷಣದ ಅಗತ್ಯವಿಲ್ಲ. ಆದರೂ ಶಿಕ್ಷಣ ತಜ್ಞರು ಈ ಜನಪದ ರಚನೆಗಳಲ್ಲಿ ಅನೇಕ ಸ್ವಾರಸ್ಯಕರ ಅಂಶಗಳನ್ನು ಗುರುತಿಸಬಹುದಾಗಿದೆ.

ಜಾನಪದ ಸ್ವರೂಪದಲ್ಲಿರುವ ವರ್ಣಚಿತ್ರ ಕಲೆಯು 'ಮೆಹಂದಿ', 'ಮಂಡನ' ಹಾಗೂ ಗ್ರಾಮೀಣ ಮಹಿಳೆಯರ ಉಡುಗೆ ತೊಡುಗೆಯ ಒಂದು ಪ್ರಕಾರವಾಗಿರುವ ಗಾಜಿನ ತುಣುಕುಗಳಿಂದ ಕೂಡಿದ ವರ್ಣಮಯ 'ಧಬ್ಲಾ' ಗಳಲ್ಲಿ ಕಂಡುಬರುತ್ತದೆ.

ಶುಭ ಸಮಾರಂಭಗಳಲ್ಲಿ ಮನೆಗಳ ನೆಲಗಳನ್ನು 'ಮಂಡನ'ಗಳಿಂದ ಅಲಂಕರಿಸುವುದು ಜನಪದ ವರ್ಣಚಿತ್ರಕಲೆಯ ಇನ್ನೊಂದು ಸುಂದರ ರೂಪವಾಗಿದೆ. ನೆಲಗಳ ಮೇಲೆ, ವಿವಿಧ ಆಕಾರಗಳ ಹಾಗೂ ರೂಪಗಳ ಸುಂದರ ವಿನ್ಯಾಸಗಳನ್ನು ಕೆಂಪು ಮತ್ತು ಬಿಳಿ ಬಣ್ಣಗಳಲ್ಲಿ ಬಿಡಿಸಲು ನೆರೆಹೊರೆಯವರೂ ಸಂಬಂಧಿಕರೂ ಒಟ್ಟು ಸೇರುತ್ತಾರೆ.

'ಸಂಜ್ಹ್ಯಾ' ಎಂಬುದು ಜನಪದ ವರ್ಣಚಿತ್ರಕಲೆಯ ಇನ್ನೊಂದು ರೂಪವಾಗಿದ್ದು ಸಗಣಿ ಬಳಸಿ ಬಿಡಿಸುವ ಈ ಕಲೆಯಲ್ಲಿ ಅವಿವಾಹಿತ ಹುಡುಗಿಯರು ವಿಶೇಷ ಪರಿಣತಿ ಸಾಧಿಸಿದ್ದಾರೆ. 'ಕಸೇರ್' ಎಂಬ ಬಿಳಿಯ ಹೂಗಳನ್ನು ಮತ್ತು 'ಕಟೇಲ್' ಎಂಬ ಕೇಸರಿ ಬಣ್ಣದ ಹೂಗಳನ್ನು ಬಳಸಿ ಕೂಡ 'ಸಂಜ್ಹ್ಯಾ' ವನ್ನು ಬಿಡಿಸಲಾಗುತ್ತದೆ. ನವರಾತ್ರಿಗೆ 15ದಿನಗಳಿರುವಾಗ ಗೋಡೆಗಳ ಮೇಲೆ ಇವುಗಳನ್ನು ಚಿತ್ರಿಸಲಾಗುತ್ತದೆ. ಪುಟಾಣಿ ಬಾಲಕಿಯರೂ ಈ ಕಲೆಗೆ ತಮ್ಮ ನೆರವಿನ ಹಸ್ತ ನೀಡುತ್ತಾರೆ. ಇದು ಕಲಾಶಿಕ್ಷಣದ ಪ್ರಾರಂಭದ ಪರಿಚಯ ಪಡೆದಂತೆ, ಹಾಗೂ ಮೆಹಂದಿ ಮತ್ತು ಮಂಡನ ವಿನ್ಯಾಸಗಳು, ಮಣಿಗಳನ್ನು ಮತ್ತು ಮುತ್ತುಗಳನ್ನು ವ್ಯವಸ್ಥಿತವಾಗಿ ಜೋಡಿಸುವುದು ಹಾಗೂ ಬಟ್ಟೆ ಕಸೂತಿ ಕಲೆಗಳಿಗಿಂತಲೂ ಹೆಚ್ಚು ಕಷ್ಟಕರವಾದ ಕೆಲಸಗಳನ್ನು ಮುಂದೆ ಕಲಿಯಲು ಒಂದು ತರಬೇತಿಯಿದ್ದಂತೆ.

ರಾಜಾಸ್ಥಾನಿ ಮನೆಗಳ ದ್ವಾರಮಂಟಪಗಳು, ಬಾಗಿಲ ಹಲಗೆಗಳು ಮತ್ತು ಮಂಚದ ನಾಲ್ಕು ಕಂಬಗಳು–ಇವುಗಳ ಮೇಲ್ಮೈ ಮೇಲೆಯೂ ಎಲ್ಲ ಬಗೆಯ ಜನಪದ ಚಿತ್ರಗಳೂ ನಿರೂಪಣೆಗಳೂ ಕಂಡುಬರುತ್ತವೆ. ಇದೇ ರೀತಿ, ಜನಪದ ಮೂರ್ತಿ ಶಿಲ್ಪವನ್ನು 'ಬಚ್–ಬರಸ್'ದಂತಹ ಉಪವಾಸದ ದಿನಗಳಲ್ಲಿ ಅಭ್ಯಾಸ ಮಾಡಲಾಗುತ್ತದೆ. ಆಗ ಮಹಿಳೆಯರು ಆವೆಮಣ್ಣಿನ ಮೂರ್ತಿಗಳನ್ನು ತಯಾರಿಸುತ್ತಾರೆ. ಹೋಳಿಗೆ ಕೆಲವು ದಿನಗಳಿರುವಾಗ, ಸಗಣಿಯಿಂದ 'ಬಡ್ಕುಲ್ಲ'ಗಳನ್ನು ತಯಾರಿಸಿ, ಹೋಳಿಯ ದಿನ ಅವುಗಳನ್ನು ಅಗ್ನಿಗೆ ಸಮರ್ಪಿಸುತ್ತಾರೆ. ಗಂಗೌರ್‌ನಲ್ಲಿ ಅವಿವಾಹಿತ ಹುಡುಗಿಯರೂ ನವವಿವಾಹಿತ ಮಹಿಳೆಯರೂ ಗೌರಿ ಅಥವಾ ಪಾರ್ವತಿಯರ ವಿಗ್ರಹಗಳನ್ನು ತಯಾರಿಸುತ್ತಾರೆ. ಹದಿನಾರು ದಿನಗಳ ಕಾಲ ಇವುಗಳನ್ನು ಪೂಜಿಸಿ ಅನಂತರ ಸಮೀಪವಿರುವ ಕೆರೆಯಲ್ಲಿ ಅಥವಾ ಬಾವಿಯಲ್ಲಿ

ಮುಳುಗಿಸುತ್ತಾರೆ. ಗೋವಳಿಗರು ಮತ್ತು ಕುರುಬರು ಕೂಡ ತಮ್ಮ ಮೆಚ್ಚಿನ ಕ್ರೀಡೆಯಾಗಿ ಒಣಹುಲ್ಲು ಕಡ್ಡಿಗಳಿಂದ ಬೊಂಬೆಗಳನ್ನು ತಯಾರಿಸುತ್ತಾರೆ.

ವಾಸ್ತುಶಿಲ್ಪ ರಾಜಾಸ್ಥಾನದಲ್ಲಿ, ವಿಶೇಷವಾಗಿ ಅಲ್ಲಿನ ದೇವಾಲಯ, ಕೋಟೆ, ಅರಮನೆಗಳಲ್ಲಿ, ಉಚ್ಛ್ರಾಯ ಸ್ಥಿತಿಗೆ ಏರಿದೆ. ವಾಸ್ತುಶಿಲ್ಪದ ಕಡಿಮೆ ವೆಚ್ಚದ ಅಗ್ಗದ ರೂಪವನ್ನು ಗ್ರಾಮೀಣ ಪ್ರದೇಶಗಳಲ್ಲಿನ ಗುಡಿಸಲುಗಳಲ್ಲೂ ಹುಲ್ಲು ಹೊದೆಸಿದ ಮನೆಗಳಲ್ಲಿಯೂ ಕಾಣಬಹುದು. ಎಲ್ಲಕಡೆಗಳಲ್ಲೂ ಬಿದಿರನ್ನು ಬಳಸಿ ನಿರ್ಮಿಸಿದ, ಮಧ್ಯೆ ಎತ್ತರವಾದ ವೃತ್ತಾಕಾರದ ತಾರಸಿಯುಳ್ಳ, ಮಣ್ಣಿನ ಮನೆ ಕೂಡ, ಭವ್ಯ ಸೌಧದಂತೆ ಕಾಣಬಹುದು. ತಾರಸಿಯ ಕೇಂದ್ರಭಾಗದಿಂದ, ದೇವಾಲಯಗಳಲ್ಲಿ ಹೇಗೋ ಹಾಗೆ ಮೇಲೇರಿರುವ ಮಿನಾರಿನಿಂದ ಕೂಡಿದ ದೊಡ್ಡ ಗೆಡ್ಡೆಯಾಕಾರದ ಗುಮ್ಮಟವಿರುವ ಮನೆಯಾಗಿದ್ದರೂ ಅದನ್ನು ಕೇವಲ 'ಜ್ಹೂಪ್ಡ' ಅಥವಾ ಬರಿಯ ಜೋಪಡಿ ಎಂದೇ ಕರೆಯಲಾಗುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಸಾಮಾನ್ಯವಾಗಿ ಪವಿತ್ರ 'ಯಜ್ಞ'ವನ್ನು ನಡೆಸುವ ಸಂದರ್ಭಗಳಲ್ಲಿ, ಯಜ್ಞಕಾರ್ಯದಲ್ಲಿ ಭಾಗವಹಿಸುವ ಬ್ರಾಹ್ಮಣರು ಹಾಗೂ ಸಾಧುಗಳ ವಸತಿಗಾಗಿ ಆ ಸ್ಥಳದಲ್ಲಿ, ಹುಲ್ಲುಕಡ್ಡಿಗಳನ್ನು ಬಳಸಿ ನಿರ್ಮಿಸುವ ಅನೇಕ ಜೋಪಡಿಗಳು ಅತ್ಯಂತ ಸೊಗಸಾದ ಮತ್ತು ಕಲಾತ್ಮಕವಾದ ವಿನ್ಯಾಸಗಳನ್ನು ಹೊಂದಿರುತ್ತವೆ.

ರಾಜಾಸ್ಥಾನದ ಮಾಜೀ ಮುಖ್ಯಮಂತ್ರಿ, ದಿವಂಗತ ಜಯ್ ನಾರಾಯಣ್ ವ್ಯಾಸ್ ಅವರು ಗಮನಿಸಿದಂತೆ, ರಾಜಾಸ್ಥಾನದ ಜನಪದ ಕಲೆಗಳ ಕ್ಷೇತ್ರವನ್ನು ಇನ್ನೂ ಸಮಗ್ರವಾಗಿ ಶೋಧಿಸಲಾಗಿಲ್ಲ; ಈ ಅಮೂಲ್ಯ ಪರಂಪರೆಯನ್ನು ಸಂರಕ್ಷಿಸುವ ಪ್ರಯತ್ನವನ್ನು ಕಲಾವಿದರೂ ಪರಿಣತರೂ ಒಟ್ಟಾಗಿ ಮಾಡಬೇಕಾದ ಅಗತ್ಯವಿದೆ.

# ಅನುಬಂಧ

## ಮೌಖಿಕ ಸಾಹಿತ್ಯದಿಂದ ಆಯ್ದ ಭಾಗಗಳು

### ಹಾಡುಗಳು

ರಾಜಾಸ್ಥಾನದ ಸುಪ್ರಸಿದ್ಧ ಜನಪದ ಗೀತೆಗಳಲ್ಲಿ ಹಲವನ್ನು ವಿನಿಫ್ರೆಡ್ ಬ್ರೈಸ್ ಅವರು ತಮ್ಮ *ವಿಮೆನ್ಸ್ ಫೋಕ್ ಸಾಂಗ್ಸ್ ಆಫ್ ರಾಜಾಸ್ಥಾನ್* ಎಂಬ ಕೃತಿಯಲ್ಲಿ ಇಂಗ್ಲಿಷಿಗೆ ಅನುವಾದಿಸಿಕೊಟ್ಟಿದ್ದಾರೆ. ಇತರ ಕೆಲವು ಹಾಡುಗಳ ಮಾದರಿಗಳನ್ನು ಇಲ್ಲಿ ಕೊಡಲಾಗಿದೆ.

*(ಅ) ಮನೆಗೆ ಹೋಗುವ ಹಂಬಲ*

ಎಳೆಯ ಮಡದಿ ತನ್ನ ಅತ್ತೆಯ ಮನೆಯಲ್ಲಿದ್ದಾಳೆ– 'ತೀಜ್' ಎಂಬ ಸಂಭ್ರಮದ ಹಬ್ಬ ಬರುವ ಶ್ರಾವಣ ಮಾಸದಲ್ಲಿ ತವರು ಮನೆಗೆ ಹೋಗುವ ಅವಳ ಹಂಬಲ ತೀವ್ರವಾಗುತ್ತದೆ. ಇದಕ್ಕೆ ಮುಖ್ಯವಾಗಿ ಅವಳ ಅತ್ತೆಯ ಕಠೋರ ವರ್ತನೆಯೇ ಕಾರಣ. ಈ ಹಾಡಿನ ವಸ್ತು ಕೆಳಗಿನಂತಿದೆ:

ಬಂತು, ಬಂತು, ಅಮ್ಮಾ ಶ್ರಾವಣ ಮಾಸ
ನೀನೋ, ನನ್ನನ್ನು ಅತ್ತೆಯ ಮನೆಗೆ ಕಳಿಸಿದ್ದೀಯೆ,
ನನ್ನ ಸಂಗಾತಿಗಳು, ಅಮ್ಮಾ ಒಟ್ಟು ಸೇರುತ್ತಾರೆ, ಆಡುತ್ತಾರೆ
ಆದರೆ ನನಗೆ ಬೀಸುವ ಕೆಲಸ ಕೊಟ್ಟಿದ್ದಾರೆ.
ನಾನು ಬೀಸುವ ಕಲ್ಲಿನಲ್ಲಿ ಬೀಸುತ್ತಲೇ ಇರಬೇಕು,
ಬೀಸುತ್ತಲೇ ಇರಬೇಕು, ಅಮ್ಮಾ ಬೀಸುತ್ತಲೇ ಇರಬೇಕು.
ಹಿಟ್ಟೆಲ್ಲ ಅಂಗಳದಲ್ಲಿ ಹರಡಿಕೊಂಡಿದೆ.
ಗೋವಳಿಗರು ಬರುತ್ತಾರೆ, ಅಮ್ಮಾ ಬರುತ್ತಾರೆ.
ಹಿಟ್ಟನ್ನು ಕದ್ದು ಅದನ್ನೆ ಕುರುಕುತ್ತಾರೆ.
ಎಮ್ಮೆ ಮೇಯಿಸುವವರೂ ಬರುತ್ತಾರೆ, ಅಮ್ಮಾ ಬರುತ್ತಾರೆ.
ಹಿಟ್ಟನ್ನು ಕದ್ದು ಅದನ್ನೆ ಕುರುಕುತ್ತಾರೆ, ಅವರು ಕೂಡ.

ಅಮ್ಮಾ ನಾನು ದೊಡ್ಡ ದೊಡ್ಡ ಬುಟ್ಟಿಗಳು ತುಂಬುವಷ್ಟು ಬೀಸಿದೆ, ಬೀಸಿದೆ
ಅಮ್ಮಾ ಮಣಗಟ್ಟಲೆ, ಮಣಗಟ್ಟಲೆ, ರಾಗಿಯನ್ನು ಬೀಸಿದೆ, ಬೀಸಿದೆ
ಆದರೆ, ನನ್ನ ಸಂಗಾತಿಗಳು, ಅಮ್ಮಾ ಒಟ್ಟು ಸೇರುತ್ತಾರೆ, ಆಡುತ್ತಾರೆ.
ನನಗೋ, ಅಡಿಗೆಯ ಕೆಲಸ ಕೊಟ್ಟಿದ್ದಾರೆ.
ರಾಶಿ ರಾಶಿ ರೊಟ್ಟಿಗಳನ್ನು ನಾನು ತಯಾರಿಸಿದೆ, ಅಮ್ಮಾ
ಕೊನೆಯ ರೊಟ್ಟಿಯನ್ನೂ ನಾನು ಬೇಯಿಸಿದೆ ಅಮ್ಮಾ
ಇತರರಿಗೆ ಎರಡು ಅಥವಾ ನಾಲ್ಕು ರೊಟ್ಟಿಗಳಾದರೆ, ಅಮ್ಮಾ
ನನಗೆ ಸಿಕ್ಕಿದ್ದು, ಒಂದು ಸೌಟು 'ರಬ್' ಮಾತ್ರ
ಬಂತು, ಬಂತು ಅಮ್ಮಾ ಮಾವನ ಊರಿನ ಒಂದು ಕಾಗೆ
ಅದು ನನ್ನ ರೊಟ್ಟಿಯನ್ನು ಕಿತ್ತುಕೊಂಡಿತು, ಅಮ್ಮಾ
ನಾನು ಅದರ ಹಿಂದೆ ಓಡಿದೆ.
'ಕರ್' ಪೊದೆಯ ಮುಳ್ಳು ಕಾಲಿಗೆ ಚುಚ್ಚಿಕೊಂಡಿತು.
ಕಾಗೆಯೆ, ರೊಟ್ಟಿಯನ್ನು ತೆಗೆದುಕೊಂಡು ಹೋಗು, ತೆಗೆದುಕೊಂಡು ಹೋಗು
ತೆಗೆದುಕಂಡು ಹೋಗಿ ಅದನ್ನು ನನ್ನ ತಾಯಿಗೆ ತೋರಿಸು.

### *(ಬ) ತುಲ್ಲಾನಳ ಹಾಡು*

ಮದುವೆಯಾಗದೆ ಉಳಿದಿರುವುದಕ್ಕಾಗಿ ತನ್ನ ಸಂಗಾತಿಗಳ ಅಣಕಕ್ಕೆ ಈಡಾದ ಬೆಳೆದ ಹುಡುಗಿಯೊಬ್ಬಳು ಮನೆಗೆ ಬಂದು, ಆದರ್ಶ ವರನೊಬ್ಬನನ್ನು ಹುಡುಕುವುದರ ಬಗ್ಗೆ ತನ್ನ ತಂದೆಯೊಡನೆ ಚರ್ಚಿಸುತ್ತಾಳೆ–ಈ 'ತುಳ್ಳಾನಳ ಹಾಡಿ' ನಲ್ಲಿ ತಂದೆ ಮತ್ತು ಮಗಳ ನಡುವಣ ಸೂಕ್ಷ್ಮ ಹಾಗೂ ಮೃದು ಸಂಬಂಧವನ್ನು ಈ ಗೀತೆ ಪ್ರತಿಬಿಂಬಿಸುತ್ತದೆ.

ಏಳು ಜನ ಸ್ನೇಹಿತೆಯರು ನೀರು ತರಲು ಹೋದರು
ಅವರೆಲ್ಲ ಸರಿಸಮಾನ ಸುಂದರಿಯರು, ಹೋ ರಾಮ್
ಅವರು ಜಮುನಾ ನದಿಯಿಂದ ನೀರು ತರಲು ಹೋದರು
ಎಲ್ಲ ಏಳೂ ಮಂದಿ ಹೀಗೆ ಹೇಳಿದರು:
'ಓ ತುಳ್ಳಾ, ನೀನು ತುಂಬ ದೊಡ್ಡವಳು; ಆದರೆ ಇನ್ನೂ ಮದುವೆಯಾಗಿಲ್ಲ!
ಹೋ ರಾಮ್'
ಅಳುತ್ತ ಗದ್ಗದಿಸುತ್ತ ತುಳ್ಳಾ ಮನೆಗೆ ಬಂದಳು.
ತಂದೆ ಅವಳನ್ನು ಕಾಲಬಳಿ ಕುಳ್ಳಿರಿಸಿಕೊಂಡ, ಹೋ ರಾಮ್.
'ಓ ಬಾಯಿ, ಜಮುನಾ ನದಿಯಿಂದ ನೀರು ತರುವುದು ಇಷ್ಟು ಕಷ್ಟವೆ?
ಅಥವಾ ನದಿಯ ನೀರೇ ತುಂಬ ಕೆಳಗಿದೆಯೆ?' ಹೋ ರಾಮ್.
ಏಳುಮಂದಿ ಸ್ನೇಹಿತೆಯರು ನೀರು ತರಲು ಹೋದರು
ಅವರು ಸರಿಸಮಾನ ಸುಂದರಿಯರು, ಹೋ ರಾಮ್
ಎಲ್ಲ ಏಳೂ ಮಂದಿ ಹೀಗೆ ಹೇಳಿದರು:

‘ಓ ತುಳ್ಸಾ ನೀನು ತುಂಬ ದೊಡ್ಡವಳು; ಆದರೆ ಇನ್ನೂ ಮದುವೆಯಾಗಿಲ್ಲ’
ಹೋ ರಾವ್
‘ಓ ಬಾಯಿ, ನಾವು ಚಂದ್ರನಂಥ (ಸುಂದರ) ವರನನ್ನು ಹುಡುಕೋಣವೆ?
ಅಥವಾ ಸೂರ್ಯನಂಥ (ಉಜ್ವಲ) ವರನನ್ನೇ?’ ಹೋ ರಾವ್
‘ಓ ತಂದೆಯೇ, ಚಂದ್ರ ತುಂಬ ಚಪಲ,
ಸೂರ್ಯನಿಗೋ ಅನೇಕ ಕಿರಣಗಳು’ ಹೋ ರಾವ್
‘ಓ ಬಾಯಿ, ನಾವು ಶಂಕರನಂಥ ವರನನ್ನು ಹುಡುಕೋಣವೆ?
ಅಥವಾ ಕಾನುವಿನಂಥವನನ್ನೇ?’ ಹೋ ರಾವ್
‘ಶಂಕರ ಹದಿನಾರು ದಿನಗಳಿಗಾಗಿ ಮಾತ್ರ ಬರುತ್ತಾನೆ
ಕೃಷ್ಣನೋ, ಬ್ರಹ್ಮಚಾರಿ’ ಹೋ ರಾವ್’
‘ತಂದೆಯೆ, ದಯೆಯಿಟ್ಟು ಶಂಕರನಂಥವನನ್ನಾಗಲಿ,
ಕಾನುವಿಂಥವನನ್ನಾಗಲಿ ಹುಡುಕಬೇಡ
ಕಿಸಾನ್‌ನಂಥವನನ್ನೆ ನನಗೆ ವರನಾಗಿ ಹುಡುಕು’ ಹೋ ರಾವ್

## ಆಯ್ದ ಜನಪದ ಕಥೆಗಳು

### *(ಅ) ಸಾಕ್ಷಿ*

ಜಗತ್ತಿನ ದೃಷ್ಟಿಯಲ್ಲಿ ಮಂಡೋರದ ಠಾಕೂರ್ ಶ್ರೀಮಂತ. ಕೆತ್ತನೆ ಕೆಲಸದ ಬಾಲ್ಕನಿ ಮತ್ತು ಮುಂಚಾಚಿದ ಚಾವಣಿಗಳಿಂದ ಕೂಡಿದ ಅರಮನೆಯಂಥ ಆಕರ್ಷಕ ಮನೆಯಲ್ಲಿ ಅವನು ವಾಸಿಸುತ್ತಿದ್ದ. ಆ ಮನೆ ಅವನ ಪೂರ್ವಜರಿಗೆ ಸೇರಿತ್ತು. ಮನೆಯ ಪಕ್ಕ ಸೇವಕರಿಗಾಗಿಯೆ ಕಟ್ಟಲಾದ ಚಿಕ್ಕ ಮನೆಯೂ ಇತ್ತು. ಇದೂ ಅವನಿಗೆ ಪಿತ್ರಾರ್ಜಿತವಾಗಿ ಬಂದಿತ್ತು. ಸೇವಕರು ಠಾಕೂರನ ತಂದೆಯ ಸೇವೆ ಮಾಡಿದಂತೆಯೆ, ಅಷ್ಟೇ ವಿಧೇಯತೆಯಿಂದ, ಠಾಕೂರನ ಸೇವೆ ಮಾಡುತ್ತಿದ್ದರು. ಠಾಕೂರನ ತಂದೆಯ ಮರಣಾನಂತರ ಭದ್ರವಾದ ಕೊಠಡಿಯಲ್ಲಿ ಅಡಗಿಸಿಡಲಾದ ಭದ್ರ ತಿಜೋರಿಯ ಮುಚ್ಚಳ ತೆಗೆಯಲಾಯಿತು. ಅದರಲ್ಲಿ ನಾಣ್ಯಗಳಿಂದ ಮತ್ತು ಠಾಕೂರನ ಪೂರ್ವಜರ, ಹೊಳೆಯುವ ಚಿನ್ನಾಭರಣಗಳಿಂದ ತುಂಬಿದ ಭಾರೀ ದೊಡ್ಡ ಚೀಲವಿತ್ತು. ತಮ್ಮೆಲ್ಲ ಸಿರಿಸಂಪತ್ತನ್ನು ತನಗಾಗಿ ಬಿಟ್ಟುಹೋದದ್ದಕ್ಕಾಗಿ–ಕೃತಜ್ಞತೆಯ ಸಂಕೇತವಾಗಿ–ಪೂರ್ವಜರ ಆತ್ಮಗಳಿಗೆ ಶಾಂತಿ ಕೋರಲು ಠಾಕೂರ್ ಎಂದೂ ತಪ್ಪಲಿಲ್ಲ. ಆದರೆ ನಿರಂತರವಾಗಿ ಸಂಪಾದಿಸದಿದ್ದರೆ, ಕ್ರಮೇಣ ಖರ್ಚಾಗಿ ಹೋಗುವ ವಿಲಕ್ಷಣ ಗುಣ ಸಂಪತ್ತಿಗೆ ಇದೆ. ಠಾಕೂರನ ಸಂಪತ್ತಿಗೂ ಇದೇ ದುರ್ಗತಿ ಒದಗಿತು. ನಮ್ಮ ಕಥೆ ಪ್ರಾರಂಭವಾಗುವುದು ಇಂಥ ಸನ್ನಿವೇಶದಲ್ಲಿಯೇ.

ಠಾಕೂರನಿಗೆ ಹಣ ಅಗತ್ಯವಾಯಿತು. ಅವನು ಹಣವನ್ನು ಸಾಲ ಪಡೆಯ ಬಹುದಾದ ಏಕೈಕ ವ್ಯಕ್ತಿಯೆಂದರೆ ಸಾಲಕೊಡುವ ಬನಿಯ. ಮಂಡೋರದಲ್ಲಿ ಹೆಚ್ಚು ಮಂದಿ ಬನಿಯಗಳಿರಲಿಲ್ಲ. ಅವನು ಯಾರಲ್ಲಿಗೆ ಹೋಗಬೇಕು? ಅವನು

ಬನಿಯಗಳ ಹೆಸರು ಪಟ್ಟಿಯಿರುವ ತನ್ನ ಪುಸ್ತಕ ತೆರೆದು ನೋಡಿದ. ನೋಡುತ್ತ ನೋಡುತ್ತ ಒಬ್ಬರ ಅನಂತರ ಇನ್ನೊಬ್ಬರಂತೆ ಹೆಸರುಗಳನ್ನು ಇಷ್ಟವಾಗದೆ ಬಿಟ್ಟುಬಿಟ್ಟ. ಕೊನಗೆ ಪಟ್ಟಿಯಲ್ಲಿನ ಹದಿಮೂರನೆಯ ಹೆಸರು ಅವನ ಗಮನ ಸೆಳೆಯಿತು. ಈ ನಿರ್ದಿಷ್ಟ ಬನಿಯ ಮಂಡೋರದಲ್ಲಿ ಮಾತ್ರವಲ್ಲದೆ, ನೆರೆಹೊರೆಯ ಗ್ರಾಮಗಳಲ್ಲಿ ಕೂಡ ತುಂಬ ಉಚ್ಛ್ರಾಯದ ಸ್ಥಿತಿಯಲ್ಲಿ ವ್ಯವಹಾರ ನಡೆಸುತ್ತಿದ್ದ. ಹಣ ಸಾಲ ಕೊಡುವ ವ್ಯವಹಾರದಿಂದಾಗಿ ಆ ಪ್ರದೇಶದಲ್ಲಿಯೇ ಅವನೊಬ್ಬ ಅತ್ಯಂತ ಶ್ರೀಮಂತನಾಗಿದ್ದ. ತನ್ನ ವ್ಯವಹಾರದಲ್ಲಿ ಅವನೆಂದೂ ಒಂದೇ ಒಂದು ನಾಣ್ಯವನ್ನು ಕಳೆದುಕೊಂಡಿರಲಿಲ್ಲ ಎನ್ನಲಾಗಿತ್ತು. ಸಾಲ ತೆಗೆದುಕೊಂಡವನು ಹಟಬಿಡದ ಅಥವಾ ಜಾರಿಕೊಳ್ಳುವ ಸ್ವಭಾವದವನಾಗಿದ್ದರೂ, ಕೊಟ್ಟ ಹಣವನ್ನು ಬಿಡದೆ ವಸೂಲಿ ಮಾಡುವ ಚಾಕಚಕ್ಯತೆ ಆ ಬನಿಯನಿಗೆ ಸಿದ್ಧಿಸಿತ್ತು.

ಅವನಿಂದ ಸಾಲ ಪಡೆಯುವುದನ್ನು ಕುರಿತಂತೆ ಠಾಕೂರ್ ತುಂಬ ಎಚ್ಚರಿಕೆ ಯಿಂದಲೇ ವಿಚಾರ ಮಾಡಿದ. ಠಾಕೂರನಿಗೆ ಅಗತ್ಯವಾಗಿರುವ ಹಣದ ಮೊತ್ತ ತುಂಬ ಕಮ್ಮಿಯೇನೂ ಆಗಿರಲಿಲ್ಲ. 750 ರೂಪಾಯಿಗಳು ಅವನಿಗೆ ಬೇಕಾಗಿತ್ತು. ವಿಚಾರ ಮಾಡುತ್ತಿದ್ದ ಹಾಗೆ ಅವನಿಗ ತಟಕ್ಕನೆ ಒಂದು ಆಲೋಚನೆ ಹೊಳೆಯಿತು. ಈ ಯೋಚನೆ ಕ್ರೂರವಾದುದೆಂದು ಠಾಕೂರನಿಗೆ ತಿಳಿಯದೆ ಇರಲಿಲ್ಲ. ಅವನು ಬನಿಯನಿಂದ ಹಣ ಸಾಲ ಪಡೆಯಲು ಹಾಗೂ ಅದನ್ನು ವಾಪಸ್ ಕೊಡದೆ ಇರಲು ನಿರ್ಧರಿಸಿದ. ಫಲಿತಾಂಶವಾಗಿ, ಹಣವಸೂಲಿ ಮಾಡುವುದರಲ್ಲಿ ತುಂಬ ಜಾಣ ಎಂದು ಬನಿಯ ಗಳಿಸಿದ ಹೆಸರಿಗೆ ಕುಂದುಂಟಾಗಬೇಕು; ಅವನ ಜಾಣತನ ಕಾಂತಿಗುಂದಬೇಕು. ಬನಿಯನಿಗಿಂತ ಠಾಕೂರನೇ ಬುದ್ಧಿವಂತನೆಂದು ಜನರಿಗೆ ತಿಳಿಯಬೇಕು. ಇದು ಠಾಕೂರನ ಆಸೆಯಾಗಿತ್ತು.

ಈ ಯೋಜನೆಯೊಂದಿಗೆ ಅವನು ಬನಿಯನಲ್ಲಿಗೆ ಹೋಗಿ ಸಾಲ ಪಡೆದ. ಠಾಕೂರ ನಗರದ ತುಂಬ ಪ್ರತಿಷ್ಠಿತ ವ್ಯಕ್ತಿಯಾದ್ದರಿಂದ ಅವನಿಗೆ ಸಾಲ ಕೊಡಲು ಬನಿಯ ಹಿಂಜರಿಯಲಿಲ್ಲ. ಬನಿಯ ತನ್ನ ಪುಸ್ತಕದಲ್ಲಿ ಬರೆದುಕೊಂಡ ಇಬ್ಬರ ಸಾಕ್ಷಿಗಳ ಸಹಿ ಪಡೆದ ನಂತರವೇ ಠಾಕೂರನಿಗೆ ಸಾಲಕೊಟ್ಟ. ಇವೆಲ್ಲ ಠಾಕೂರನ ದೃಷ್ಟಿಯಲ್ಲಿ ನಗಣ್ಯವಾಗಿತ್ತು. ಅವನು ಹಣ ಪಡೆದುಕೊಂಡ. ಆಮೇಲೆ ದೀರ್ಘಕಾಲದವರೆಗೆ ಬನಿಯ, ಠಾಕೂರನನ್ನಾಗಲಿ, ಅವನಿಗೆ ತಾನು ಸಾಲವಾಗಿ ಕೊಟ್ಟ ಹಣವನ್ನಾಗಲಿ ನೋಡಲು ಸಾಧ್ಯವಾಗಲಿಲ್ಲ.

ಠಾಕೂರ ವರ್ಷ ಕಾಲ ಮೌನವಾಗಿ ಉಳಿದಿದ್ದು ಬನಿಯನಿಗೆ ಇಷ್ಟವಾಗಲಿಲ್ಲ. ಅವನು ಸಾಲದ ವಿಲೇವಾರಿ ಬೇಗ ಆಗಬೇಕೆಂದು ಬಯಸಿದ. ಅವನ ವ್ಯವಹಾರ ವಲ್ಲಿಯೇ ಇದೊಂದು ಅಪೂರ್ವ ಸಂದರ್ಭವಾಗಿತ್ತು. ಸಾಲಗಾರರಿಗೇನೋ ಬನಿಯನ ಕಣ್ತಪ್ಪಿಸಿ ಓಡಾಡುವ ಉಪಾಯ ತಿಳಿದಿತ್ತು. ಆದರೆ ಅವರ ಎಲ್ಲ ಉಪಾಯಗಳನ್ನೂ ಅರಿತ ಬನಿಯನಿಗೆ ಅವರನ್ನು ಎಲ್ಲಿ ಮತ್ತು ಯಾವಾಗ ಹಿಡಿಯಬೇಕೆಂಬುದೂ ತಿಳಿದಿತ್ತು. ಈಗ ಅವನು ತನ್ನೆಲ್ಲ ಗಮನವನ್ನೂ ಠಾಕೂರನ ಮೇಲೆ ಕೇಂದ್ರೀಕರಿಸಿದ.

ಅದು ಶ್ರಾವಣ ಮಾಸ. ಆ ತಿಂಗಳ ಪ್ರತಿ ಸೋಮವಾರ ಮಂಡೋರಿನಲ್ಲಿ ಜಾತ್ರೆ ನಡೆಯುತ್ತಿತ್ತು. ಅದಕ್ಕೆ ಗಂಡಸರು ಹೆಂಗಸರು ಮಕ್ಕಳು ಬಹುಸಂಖ್ಯೆಯಲ್ಲಿ ಬರುತ್ತಿದ್ದರು. ಈ ಹಬ್ಬ ಬೈಜ್‌ನಾಥಜೀ ಅಥವಾ ಶಿವನ ಪೂಜೆಗೆ ಸಂಬಂಧಿಸಿತ್ತು. ತನ್ನ ಕುಟುಂಬದವರೊಡನೆ ಠಾಕೂರನೂ ಈ ಜಾತ್ರೆಗೆ ಬರುವುದು ಬನಿಯನಿಗೆ ತಿಳಿದಿತ್ತು. ಒಂದು ಸೋಮವಾರ ಬನಿಯ ಜಾತ್ರೆಗೆ ಹೋಗಿ ಠಾಕೂರನನ್ನು ಹಿಡಿದುಬಿಟ್ಟ. ಸಾಲದ ವಿಚಾರ ಬಂದಾಗ ಠಾಕೂರ್ ಹೀಗೆಂದ: "ಇವತ್ತು ಪ್ರಾರ್ಥನೆಯ, ಭೋಜನದ ಹಾಗೂ ಸಂಗೀತದ ದಿನ. ಇಂಥ ದಿನ, ಇಂಥ ಸ್ಥಳದಲ್ಲಿ ಹಣದ ಬಗ್ಗೆ ಏಕೆ ಮಾತನಾಡುತ್ತಿದ್ದೀಯ ? ಬರುವ ತಿಂಗಳು ನಿನ್ನ ಹಣವನ್ನು ತಪ್ಪದೆ ಪಾವತಿ ಮಾಡುತ್ತೇನೆ."

ಶ್ರಾವಣಮಾಸ ಕಳೆದುಹೋಯಿತು. ಆದರೆ ಠಾಕೂರನಾಗಲಿ ಹಣವಾಗಲಿ ಬನಿಯನಿಗೆ ಸಿಗಲಿಲ್ಲ. ಒಂದು ಸಂಜೆ ಬನಿಯ, ಅವನ ಮನೆಗೇ ಹೋದ. ಠಾಕೂರನ ಸುತ್ತ ಅವನ ಅನೇಕ ಗೆಳೆಯರಿದ್ದರು. ಇದೇ ತಕ್ಕ ಸಮಯ– ಬನಿಯ ನಿರ್ಧರಿಸಿದ.

"ಠಾಕೂರ್ ಜೀ. ನೀವು ಹಣ ಸಾಲ ಪಡೆದು ತುಂಬ ಸಮಯವಾಯಿತು. ಯಾವಾಗ ವಾಪಸ್ ಕೊಡುತ್ತೀರಾ ?"

ಸ್ನೇಹಿತರೆದುರು ಬನಿಯ ಸಾಲ ಪ್ರಸ್ತಾಪ ಮಾಡಿದ್ದು ಠಾಕೂರನಿಗೆ ಇಷ್ಟವಾಗಲಿಲ್ಲ. ಆದರೂ ಶಾಂತನಾಗಿದ್ದ ಮತ್ತು ಹಗುರವಾಗಿ ಉತ್ತರಿಸಿದ: ನಾಳೆ ನಾನೇ ನಿನ್ನ ಮನೆಗೆ ಬಂದು ಹಣ ಕೊಡುತ್ತೇನೆ."

"ನಿಮ್ಮ ನಾಳೆಗಳ ಬಗ್ಗೆ ನನಗೆ ವಿಶ್ವಾಸವೇ ಉಳಿದಿಲ್ಲ ಠಾಕೂರಜೀ. ಅಂಥ ಅಸಂಖ್ಯಾತ ನಾಳೆಗಳು ಈಗಾಗಲೇ ಕಳೆದುಹೋಗಿವೆ. ಆದರೆ ನನ್ನ ಕೈಗೆ ಇನ್ನೂ ಹಣ ಬಂದಿಲ್ಲ."

"ಇದು ಮಾತನಾಡುವ ರೀತಿಯಲ್ಲ"–ಮುಖ ಕೆಂಪು ಮಾಡಿಕೊಂಡು ಠಾಕೂರ್ ಪ್ರತಿಭಟಿಸಿದ. "ಹಣವೇ ನೀನು ನಡವಳಿಕೆ ಮೀರಿ ಮಾತನಾಡುವಂತೆ ಮಾಡಿದೆ."

"ಈ ಎಲ್ಲ ತಿಂಗಳೂ ನಾನು ನಡೆವಳಿಕೆ ಬಗ್ಗೆ ತುಂಬ ಎಚ್ಚರ ವಹಿಸಿದ್ದೇನೆ, ಆದರೆ, ನನ್ನ ಹಣವನ್ನು ವಾಪಸ್ ಕೊಡಲೇಬಾರದೆಂಬ ನಿಮ್ಮ ನಿರ್ಧಾರವೇ ಸ್ವಲ್ಪ ನನ್ನ ಎಚ್ಚರ ತಪ್ಪಿಸಿರಬಹುದು ಅಷ್ಟೆ. ಆದರೆ ನಿಮ್ಮ ನಡೆವಳಿಕೆಯ ಬಗ್ಗೆ ಏನು ಹೇಳುತ್ತೀರಿ ? ಹಣ ಸಾಲ ಪಡೆದು ಅದನ್ನು ವಾಪಸ್ ಕೊಡದವನನ್ನು ನೀವು ಅಥವಾ ಯಾರಾದರೂ ಏನೆಂದು ಕರೆಯುತ್ತಾರೆ ? ಬಹುಶಃ ಇದೇ ಒಳ್ಳೆಯ ಸ್ವಭಾವ ಎಂದು ನಿಮ್ಮ ಅಭಿಪ್ರಾಯವಿರಬಹುದು ಅಲ್ಲವೆ ?"

ಬನಿಯನ ಈ ಎಲ್ಲ ಮಾತುಗಳಿಂದ ಠಾಕೂರನಿಗೆ ತುಂಬ ಅಪಮಾನ ವಾದಂತಾಯಿತು. ಅವನು ಕೋಪದಿಂದ ಬುಸುಗುಟ್ಟಿದ. ಈ ಅಪಮಾನಕ್ಕೆ ಸೇಡು ತೀರಿಸಿಕೊಳ್ಳಲೇಬೇಕೆಂದು ಅವನು ಪ್ರತಿಜ್ಞೆ ಮಾಡಿದ. ಆ ಸಂದರ್ಭಕ್ಕಾಗಿ ಠಾಕೂರ್ ಹೊಂಚು ಹಾಕತೊಡಗಿದ. ಒಮ್ಮೆ ಬನಿಯ ಪಕ್ಕದ ಊರಿಗೆ ಹೋಗಿರುವುದು ಅವನಿಗೆ ತಿಳಿದು ಬಂತು. ಬೆಳಗ್ಗೆಯೇ ಕುದುರೆ ಏರಿ ಅವನು, ಮಂಡೋರ್‌ನಿಂದ ಸುಮಾರು 20ಮೈಲು ಸಾಗಿ ಅಲ್ಲಿ ಇಳಿದುಕೊಂಡ, ಬನಿಯನನ್ನೇ ಕಾಯುತ್ತಾ. ಸ್ವಲ್ಪ

ಹೊತ್ತಿನಲ್ಲಿಯೇ ಬನಿಯ ಅವನ ದೃಷ್ಟಿಗೆ ಬಿದ್ದ. ಬನಿಯ ಸನಿಹ ಬಂದೊಡನೆ ಠಾಕೂರ್ ತನ್ನ ಕೈಯಲ್ಲಿ ಹಿಡಿದ ಕತ್ತಿಯನ್ನೆತ್ತಿ ಹೀಗೆಂದ: "ಕೊನೆಗೂ ಸಿಕ್ಕಿದೆ. ಅಂದು ಸ್ನೇಹಿತರೆದುರು ನನ್ನನ್ನು ಅಪಮಾನಗೊಳಿಸಿದೆಯಲ್ಲ! ಸೇಡು ತೀರಿಸಿಕೊಳ್ಳುತ್ತೇನೆ; ಈ ಕತ್ತಿಯಿಂದ ನಿನ್ನನ್ನು ಕತ್ತರಿಸಿ ಕೆಳಗೆ ಉರುಳಿಸುತ್ತೇನೆ."

ಕತ್ತಿ ನೋಡುತ್ತಲೇ ಬನಿಯ ಹೆದರಿದ. ಆದರೂ ಸಮಚಿತ್ತತೆ ಕಳೆದುಕೊಳ್ಳಲಿಲ್ಲ. ಕತ್ತಿಯಿಂದ ಅಪಾಯವಾಗದಷ್ಟು ದೂರದಲ್ಲಿಯೆ ನಿಂತುಕೊಂಡು, ಹೇಳಿದ: "ನಿಮ್ಮ ಸ್ವಭಾವವನ್ನು ಸರಿಯಾಗಿ ಊಹಿಸಿದೆ ಠಾಕೂರ್‌ಜೀ. ನೀವು ಇಲ್ಲಿ ಬಂದು ನನಗಾಗಿ ಹೊಂಚು ಹಾಕುತ್ತೀರಿ ಎಂದು ಭಾವಿಸಿದ ನಾನು, ರಾತ್ರಿಯೊಳಗೆ ಮನೆ ಸೇರದ ಪಕ್ಷದಲ್ಲಿ ಠಾಕೂರನಿಂದ ನನ್ನ ಹತ್ಯೆಯಾಗಿದೆ ಎಂದು ತಿಳಿಯುಬೇಕು ಎಂಬ ಪತ್ರವೊಂದನ್ನು ಬರೆದು ಹೆಂಡತಿಗೆ ಕೊಟ್ಟು ಬಂದಿದ್ದೇನೆ. ನೀವು ನನ್ನನ್ನು ಕೊಂದಿರಿ ಎಂದರೆ, ಆಗ ಅವಳು ಆ ಪತ್ರವನ್ನು ರಾಜನಲ್ಲಿಗೆ ಒಯ್ಯುತ್ತಾಳೆ. ರಾಜ ನಿಮಗೆ ಶಿಕ್ಷೆ ವಿಧಿಸುತ್ತಾನೆ. "

ಬನಿಯುನ ಮಾತು ಕೇಳಿ ಠಾಕೂರ್ ಬೆಚ್ಚಿಬಿದ್ದ. ಆದರೂ ತನ್ನ ಯೋಚನೆಯನ್ನು ಅಡಗಿಸಿಕೊಳ್ಳುತ್ತಾ ಅವನೆಂದ: "ನೀನೇನೂ ಗೊಡ್ಡು ಬೆದರಿಕೆ ಹಾಕಬೇಕಾಗಿಲ್ಲ."

"ಸರಿ. ಹಾಗಾದರೆ ಮುಂದೆ ಬಂದು ನನ್ನನ್ನು ಕೊಂದೇ ಬಿಡು, ಅನಂತರ ನಿನಗೇ ತಿಳಿಯುತ್ತದೆ–ಮುಂದೆ ಏನಾಗುತ್ತದೆ ಎಂದು."

ಬನಿಯು ಈ ಮಾತನ್ನು ಎಷ್ಟು ಭರವಸೆಯಿಂದ ಆಡಿದನೆಂದರೆ, ಈತ ಅಂಥ ಪತ್ರ ಬರೆದು ಮನೆಯಲ್ಲಿಟ್ಟೇ ಬಂದಿರಬೇಕು ಎಂದು ಠಾಕೂರನಿಗೆ ಅನಿಸಿತು. ಅವನು ಅಸ್ತವ್ಯಸ್ತಗೊಂಡ. ಆದರೂ ತೋರಿಕೆಯ ಧೈರ್ಯ ತಂದುಕೊಂಡು ಅವನೆಂದ: "ಇವೆಲ್ಲದರ ಬಗ್ಗೆ ನಾನೇನೂ ಹೆದರುವುದಿಲ್ಲ. ನನ್ನನ್ನು ಅಪಮಾನಗೊಳಿಸಿದ್ದಕ್ಕಾಗಿ ನಿನ್ನ ಮೂಗನ್ನಾದರೂ ಇವತ್ತು ಕತ್ತರಿಸಿಬಿಡುವುದು ಖಚಿತ."

ಬನಿಯ ದೀರ್ಘ ನಿಟ್ಟುಸಿರುಬಿಟ್ಟ. ತನ್ನ ಮೂಗಿನ ಬಗ್ಗೆ ಅವನು ಜೀವನವಿಡೀ ಕಾಳಜಿ ವಹಿಸಿದ್ದ. ಆದರೆ ತನ್ನನ್ನು ಕೊಲ್ಲಲು ಮುಂದೆ ಬಂದ ಠಾಕೂರ್ ಈಗ ಮೂಗಿನ ಮೇಲೆ ಮಾತ್ರ ಗಮನಹರಿಸಿದ್ದು ಎಷ್ಟೋ ಸಮಾಧಾನಕರವಾದ ಸಂಗತಿ. 'ಕಲ್ ಸಲ್ ಹೊವಾಯ್ ಜೀಕೊ ಬಲ್ ಸನ್ ನಹೀ ಹವಾಯ್' (ಬಲ ತಗ್ಗಿದಲ್ಲಿ ಬುದ್ಧಿವಂತಿಕೆಯಿಂದ ಗೆಲ್ಲಲು ಸಾಧ್ಯ) ಎಂದು ಬನಿಯನಿಗೆ ತಿಳಿದಿತ್ತು. ತನ್ನ ಪ್ರಾಣವನ್ನು ರಕ್ಷಿಸಿಕೊಳ್ಳಲು ಅವನು ತನ್ನ ಬುದ್ಧಿವಂತಿಕೆಯನ್ನೇ ಬಳಸಿದ. ಅವನು ಹೀಗೆಂದ: "ಠಾಕೂರಜೀ, ಆ ದಿನ ನಾನು ನಿಮ್ಮೊಂದಿಗೆ ಒರಟಾಗಿ ಮಾತನಾಡಿದ್ದು ನಿಜ. ಅದಕ್ಕಾಗಿ ನನಗೆ ಸ್ವಲ್ಪವಾದರೂ ಶಿಕ್ಷೆ ಆಗಲೇಬೇಕು. ನೀವು ನನಗೆ ಹಣ ವಾಪಸ್ ಕೊಡಬೇಕಾಗಿಲ್ಲ ಎಂದು ನಾನು ಹೇಳುತ್ತೇನೆ ಎಂದುಕೊಳ್ಳಿ. ಆಗಲಾದರೂ ನನ್ನನ್ನು ಕ್ಷಮಿಸುತ್ತೀರಾ ?"

"ನಿನ್ನ ಎಲ್ಲ ಉಪಾಯಗಳೂ ತಿಳಿದಿವೆ ನನಗೆ. ಪ್ರಾಣದ ಆಸೆಯಿಂದ ನೀನು ಹೀಗೆ ಹೇಳುತ್ತಿದ್ದೀಯ. ಅಷ್ಟೆ! ಆದರೆ ಮುಂದೆ ನಿನ್ನ ಪುಸ್ತಕಗಳೊಂದಿಗೆ ಕೋರ್ಟಿಗೆ ಹೋಗಿ ದಾವೆ ಹೂಡಿ ನನಗೆ ಶಿಕ್ಷೆಯಾಗುವ ಹಾಗೆ ಮಾಡುತ್ತೀ."

"ಅಂಥದೇನನ್ನೂ ಮಾಡುವುದಿಲ್ಲ. ಸಾಲದ ಹಣ ಬಂದಿದೆಯೆಂದು ರಸೀದಿಯನ್ನು ಬರೆದುಕೊಡುತ್ತೇನೆ. ಸಾಲದೇ ?"

"ಅಂಥ ರಸೀದಿ ಇಂದೇ, ಇಲ್ಲಿಯೇ ನನಗೆ ಬೇಕು. ಬರೆದುಕೊಡುತ್ತೀಯಾ ?"

"ಓಹೋ. ಸರಿ" – ಬನಿಯ ತನ್ನ ಪುಸ್ತಕ ತೆರೆದು ರಸೀದಿ ಬರೆಯಲು ಉದ್ಯುಕ್ತನಾಗಿ ಹೇಳಿದ: "ಠಾಕೂರಜೀ, ನನಗೆ ಸಾಕ್ಷಿ ಮಾತ್ರ ಬೇಕೇ ಬೇಕು. ನಿನಗೆ ನಾನು ಸಾಲ ಕೊಡುವಾಗಲೂ ಇಬ್ಬರು ಸಾಕ್ಷಿಗಳಿದ್ದರು. ಆದ್ದರಿಂದ ಸಾಲ ಸಂದಾಯದ ರಸೀದಿ ಬರೆದುಕೊಡುವಾಗ ಕೂಡ ಇಬ್ಬರು ಸಾಕ್ಷಿಗಳಿರಬೇಕಾದ್ದು ಅಗತ್ಯ."

ಠಾಕೂರ ಇದಕ್ಕೆ ಒಪ್ಪಲಿಲ್ಲ. ಇಂಥ ಸಂದರ್ಭದಲ್ಲಿ ಸಾಕ್ಷಿಗಳನ್ನು ಬಳಸಿಕೊಂಡರೆ, ಆಗ ರಸೀದಿ ಸುಳ್ಳೆಂಬುದು ಸಾಬೀತಾಗುತ್ತದೆ; ನೇರವಾಗಿ ಬನಿಯ ತನ್ನನ್ನು ಸೆರೆಮನೆಗೆ ಕಳುಹಿಸಬಹುದು. ಅವನು ಜೋರಾದ ಧ್ವನಿಯಲ್ಲಿ ಹೇಳಿದ: "ಒರಟು ಮಾತನಾಡದೆ, ರಸೀದಿ ಬರೆದು ಕೊಟ್ಟುಬಿಡು."

"ಸಾಕ್ಷಿಗಳಿಲ್ಲದೆ ರಸೀದಿ ಊರ್ಜಿತವಾಗುವುದಿಲ್ಲ. ತಿಳಿಯದೇ ?" – ಬನಿಯ ವಿರೋಧಿಸಿದ. ಅವನು ರಸ್ತೆಯ ಆಚೀಚೆ ನೋಡಿದ. ಅತಿ ಹಳೆಯ ಆಲದ ಮರವೊಂದು ಕಂಡುಬಂತು. ಅದಕ್ಕಾಗಿರುವ ವಯಸ್ಸಿನಿಂದಾಗಿ, ಆಸುಪಾಸಿನ ಜನರಿಗೆಲ್ಲ ಆ ಮರ ತಿಳಿದಿರುತ್ತದೆ. ಅದನ್ನು ತೋರಿಸುತ್ತ ಬನಿಯ ಹೇಳಿದ : "ನನಗೊಂದು ಒಳ್ಳೆಯ ಆಲೋಚನೆ ಹೊಳೆಯುತ್ತಿದೆ. ಆ ಆಲದ ಮರ ನಿನಗೆ ತೋರುತ್ತಿದೆ ತಾನೆ ? ಸಾಕ್ಷಿಯಾಗಿ ಆ ಮರದ ಹೆಸರನ್ನೇ ನಾನು ಪುಸ್ತಕದಲ್ಲಿ ಬರೆದುಕೊಳ್ಳುತ್ತೇನೆ. ಅದೇ ಸರಿ. ಆಗದೆ ?"

ಠಾಕೂರನಿಗೂ ಈ ಸಲ ಒಪ್ಪಿಗೆಯಾಯಿತು. ನಡೆದುದೇನೆಂದರೆ ಆ ಮರ ಎಂದೂ ಯಾರಿಗೂ ತಿಳಿಸಲಾರದು; ಸಾಕ್ಷಿಗೆ ಸಾಕ್ಷಿಯೂ ಆಯಿತು. ಬನಿಯ ರಸೀದಿ ಬರೆದುಕೊಟ್ಟ. ಇಬ್ಬರಿಗೂ ಸಮಾಧಾನವಾದುದರಿಂದ, ತಮ್ಮ ತಮ್ಮ ದಾರಿ ಹಿಡಿದರು. ಆದರೆ ಬನಿಯ ಕಾಲವನ್ನು ವ್ಯರ್ಥಮಾಡದೆ ನೇರವಾಗಿ ರಾಣಾನಲ್ಲಿಗೆ ಹೋಗಿ ಹೀಗೆಂದ:

"ಠಾಕೂರನೊಬ್ಬ ನನ್ನಿಂದ ಸಾಲ ಪಡೆದಿದ್ದ. ಈಗಷ್ಟೇ ಅವನು, ಕತ್ತಿ ತೋರಿಸಿ, ನನ್ನನ್ನು ಹೆದರಿಸಿ, ಸಾಲದ ಹಣವನ್ನು ಸಂದಾಯ ಮಾಡಲಾಗಿದೆಯೆಂದು ನನ್ನಿಂದ ಸುಳ್ಳು ರಸೀದಿ ಬರೆದುಕೊಂಡು ಹೋಗಿದ್ದಾನೆ. ಆದರೆ ಒಂದೇ ಒಂದು ನಾಣ್ಯವನ್ನೂ ಮರಳಿಕೊಟ್ಟಿಲ್ಲ."

"ಅವನು ಹಾಗೆ ಮಾಡಲು ನೀನು ಏಕಾದರೂ ಅವಕಾಶ ಮಾಡಿಕೊಟ್ಟೆ ?"

"ನಿರ್ಜನ ಪ್ರದೇಶದಲ್ಲಿ ಹೊಂಚು ಹಾಕಿ ಕಾಯುತ್ತಿದ್ದ ಅವನು, ರಸೀದಿ ಬರೆದುಕೊಡುವಂತೆ ಬಲವಂತ ಮಾಡಿದ. ಅವನ ಕೈಯಲ್ಲಿ ಕತ್ತಿಯಿತ್ತು. ರಸೀದಿ ಬರೆದುಕೊಡಲೇಬೇಕಾಯಿತು. ಸಮೀಪ ಯಾರೂ ಇರಲಿಲ್ಲ. ಆದ್ದರಿಂದ ಹಳೆಯ ಆಲದ ಮರವನ್ನೇ ಸಾಕ್ಷಿಯಾಗಿ ಮಾಡಿಕೊಂಡೆ."

ಅವನ ಕಥೆಯನ್ನು ನಂಬುವುದು ರಾಣಾನಿಗೆ ಕಷ್ಟವಾಯಿತು. ಅವನು ಠಾಕೂರನನ್ನು ಕರೆಸಿಕೊಂಡು ಕೇಳಿದ: "ಈ ವ್ಯಕ್ತಿಯಿಂದ ನೀನು ಸಾಲ ಪಡೆದದ್ದುಂಟೆ ?"

"ಹೌದು ಸ್ವಾಮಿ."

"ಅದನ್ನು ವಾಪಸ್ ಕೊಟ್ಟಿರುವಿಯಾ ?"

"ಹೌದು. ಆ ಬಗೆಗಿನ ರಸೀದಿಯೂ ನನ್ನಲ್ಲಿದೆ"

"ಸಾಕ್ಷಿ ಇದೆಯೆ ?"

"ಮಂಡೋರ್‌ನಿಂದ ಸುಮಾರು 20 ಮೈಲು ದೂರವಿರುವ ಹಳೆಯ ಆಲದ ಮರವೇ ಸಾಕ್ಷಿ."

"ನೀನು ಮರವನ್ನೇಕೆ ಸಾಕ್ಷಿಯಾಗಿ ಮಾಡಿಕೊಂಡೆ ?"

ಅಲ್ಲಿ ಅದನ್ನು ಬಿಟ್ಟು ಇನ್ನಾರೂ ಇರಲಿಲ್ಲ"

"ಈಗ ಸತ್ಯ ಹೇಳು. ಬನಿಯ ಮತ್ತು ನೀನು ಇಬ್ಬರೂ ಬೇರಾರೂ ಇಲ್ಲದ ಸ್ಥಳದಲ್ಲಿ ನೀನೇಕೆ ರಸೀದಿ ಪಡೆದುಕೊಂಡೆ ?"

ಠಾಕೂರ್ ತೊದಲತೊಡಗಿದ, ಮೇಲುಸಿರುಬಿಟ್ಟ. ಈ ಪ್ರಶ್ನೆಗೆ ಅವನಲ್ಲಿ ಉತ್ತರವಿರಲಿಲ್ಲ. ಅವನನ್ನು ಸೆರೆಮನೆಗೆ ಕಳಿಸುವಂತೆ ರಾಣಾ ಆದೇಶ ನೀಡಿದ. ಬನಿಯ ಸಂತೋಷದಿಂದ ಮನೆಗೆ ಹೋದ. ಠಾಕೂರನನ್ನು ಬೀಳ್ಕೊಡುವಾಗ ಅವನು ಹೀಗೆಂದ:"ಖದ್ ಖಿನಾಯ್ ಜಿನಾಯ್ ಕೌ ಟಾಯರ್" – ಇತರರಿಗಾಗಿ ಗುಂಡಿ ತೋಡಿದವನು ತಾನೇ ಅದರಲ್ಲಿ ಬೀಳುತ್ತಾನೆ.

### (ಬ) ಅದೃಷ್ಟ ಹಸ್ತ

ಮೊದಲ ಮುಂಗಾರುಮಳೆ ಬಿದ್ದನಂತರ ಪೈಪರ್‌ನಲ್ಲಿ ತುಂಬ ಚಟುವಟಿಕೆ ಇತ್ತು. ಹೊಲಗಳನ್ನು ಉಳಬೇಕಾಗಿತ್ತು; ಬೀಜ ಬಿತ್ತಬೇಕಾಗಿತ್ತು. ಮಾಡಬೇಕಾದ ಇಂಥವೇ ಇನ್ನೂ ನೂರಾರು ಚಿಕ್ಕಪುಟ್ಟ ಕೆಲಸಗಳಿದ್ದುವು. ನೇಗಿಲುಗಳನ್ನೂ ಎತ್ತುಗಳನ್ನೂ ಹೊರಡಿಸಲಾಯಿತು. ಉಳುವ ಕಾರ್ಯ ರಭಸವಾಗಿ ನಡೆಯಿತು. ಸಮನಾದ ವೇಗದಲ್ಲಿ ಬೀಜಗಳನ್ನೂ ಬಿತ್ತಲಾಯಿತು. ಕೆಲವೇ ದಿನಗಳಲ್ಲಿ ಹಸಿರಾದ ಮೃದು ಮೊಳಕೆಗಳು ಹೊಲದಲ್ಲಿ ಕಾಣಿಸಿಕೊಂಡು ರೈತರಿಗೆ ಅಪಾರ ಸಂತೋಷವಾಯಿತು. ಎಂತ ಸುಂದರ ದೃಶ್ಯ ! ದಿನೇ ದಿನೇ ಮೊಳಕೆಗಳು ಬೆಳೆದವು–ಮಳೆ ಅಗತ್ಯವಾದಷ್ಟೇ ಪ್ರಮಾಣದಲ್ಲಿ ಬಂದದ್ದರಿಂದ. ಆದರೆ ಒಮ್ಮೆಲೇ ಯಾವ ಸ್ಪಷ್ಟ ಕಾರಣವೂ ಇಲ್ಲದೆಯೇ ಬಿಸಿಲ ದಿನಗಳ ಪ್ರಾರಂಭವಾದವು. ಸೂರ್ಯ ಎಷ್ಟು ಪ್ರಖರನಾದ ನೆಂದರೆ ಮಧ್ಯಾಹ್ನದ ಮೇಲೆ ಹೊಲದಲ್ಲಿ ಉಳಿಯುವುದೇ ಅಶಕ್ಯವೆನಿಸಿತು. ರೈತರು ಖಿನ್ನರಾದರು. ಮತ್ತೆ ಮಳೆ ಬಂದೀತೇ ? ಆ ತಾಪದಲ್ಲಿ ಮೊಳಕೆಯೊಡೆದ ಸಸಿಗಳು ಬದುಕಿಯಾವೇ ? ರೈತರಿಗೆ ರಾತ್ರಿ ನಿದ್ದೆ ಬರಲಿಲ್ಲ. ಒಂದು ದಿನ ಇದ್ದಕ್ಕಿದ್ದಂತೆ ಮೋಡವೊಂದು ಕಂಡು ಬಂತು. ಅದು ಮನುಷ್ಯನ ಅಂಗೈಗಿಂತ ಹೆಚ್ಚೇನೂ ದೊಡ್ಡದಾಗಿರಲಿಲ್ಲ. ಆದರೂ ಅದು ಮೋಡವೇ ಆಗಿತ್ತು. ರೈತರು ಆಸೆಯಿಂದ ಅದರತ್ತ ದೃಷ್ಟಿ ನೆಟ್ಟರು. ಮೋಡ ದೊಡ್ಡದಾಗಿ ಕಪ್ಪಗಾಗಿ ಬೆಳೆಯಿತು. ಕ್ರಮೇಣ ಹೆಚ್ಚು ಹೆಚ್ಚು ಮೋಡಗಳು ಕಾಣಿಸಿಕೊಂಡವು. ಒಮ್ಮೆಲೇ ಭಾರೀ ಗುಡುಗಿನೊಂದಿಗೆ ಮಳೆ ಸುರಿಯಲು ಪ್ರಾರಂಭವಾಯಿತು. ಅದು ಧಾರಾಕಾರ ಮಳೆ. ಮೋಡಗಳು

ಸಮಸ್ತ ಸಾಗರಗಳ ನೀರನ್ನೂ ಹೀರಿಕೊಂಡಂತೆ ಮತ್ತು ಗ್ರಾಮದ ಮೇಲೆ ಮಳೆಯಾಗಿ ಸುರಿದಂತೆ ಭಾಸವಾಗುತ್ತಿತ್ತು. ರೈತರು ಅವಸರದಿಂದ ತಮ್ಮ ಗುಡಿಸಲುಗಳನ್ನು ಸೇರಿದರು.

ಗ್ರಾಮದಿಂದ ಸ್ವಲ್ಪ ದೂರದ ಪ್ರದೇಶಗಳಲ್ಲಿ ಹೊಲಗಳನ್ನುಳ್ಳ ದೊಡ್ಡ ಅರಳಿಮರ ವೊಂದರ ಕೆಳಗೆ ಐದುಮಂದಿ ರೈತರು ಆಶ್ರಯ ಪಡೆದರು. ಆದರೆ ಆ ಮರ ಅವರೈವರಿಗೂ ಆಶ್ರಯ ನೀಡಲು ಶಕ್ತವಾಗಿರಲಿಲ್ಲ. ಮಳೆ ಎಷ್ಟು ಜೋರಾಗಿ ಬರುತ್ತಿತ್ತೆಂದರೆ, ಒತ್ತೊತ್ತಾದ ಎಲೆಗಳಿರುವ ಆ ಅರಳಿಮರ ಕೂಡ ಅವರ ಮೇಲೆ ಸುರಿಯುವ ಮಳೆನೀರನ್ನು ತಡೆಯಲು ಸಮರ್ಥವಾಗಲಿಲ್ಲ. ಭೂಮಿ ಆಗಲೇ ತೇವವಾಗಿತ್ತು. ಮಳೆ ನೀರು ಅವರ ಶರೀರಗಳಿಂದ ಕೆಳಗಿಳಿಯುತ್ತಿತ್ತು. ಮಿಂಚು ಸಿಡಿಲು ಗುಡುಗುಗಳ ಅಬ್ಬರ. ಮಿಂಚಿನಿಂದ ಇಡೀ ಆಕಾಶ, ಭೂಮಿ ಬೆಳಗುತ್ತಿತ್ತು. ಪ್ರತಿಸಾರಿ ಮಿಂಚಿದಾಗಲೂ, ಸಿಡಿಲು ಆ ಅರಳಿಮರವನ್ನೇ ಗುರಿಯಾಗಿಟ್ಟುಕೊಂಡಂತೆ ಆ ಐವರಿಗೂ ಅನಿಸುತ್ತಿತ್ತು; ಆ ಮರದ ವಿನಾಶ ಮಾಡಲು ಕಾಯುತ್ತಿರುವಂತೆ ಅನಿಸುತ್ತಿತ್ತು. ಯಾವ ಕ್ಷಣಕ್ಕೂ ಸಿಡಿಲು ಬಡಿದೀತು. ಅವರು ತುಂಬ ಕಂಗಾಲಾದರು. ಆ ಜಡಿಮಳೆಯಲ್ಲಿ, ಮರದ ಕೆಳಗೆ ನಿಂತಿರುವುದನ್ನು ಬಿಟ್ಟು, ಗ್ರಾಮಕ್ಕೆ ಹಿಂದಿರುಗುವುದು ಅಸಾಧ್ಯವಾಗಿತ್ತು.

''ಈ ಮರದ ಕೆಳಗೆ ನಿಂತಿರುವುದು ಅಪಾಯಕರ. ಸಿಡಿಲು ಯಾವ ಕ್ಷಣಕ್ಕೂ ಬಡಿಯಬಹುದು'' – ಅವರಲ್ಲೊಬ್ಬ ಹೇಳಿದ.

''ಆದರೆ ನಾವೇನು ಮಾಡುವಂತಿದೆ ?''

''ಇದೇ ಪರಿಹರಿಸಬೇಕಾಗಿರುವ ಸಮಸ್ಯೆ. ಸಿಡಿಲು ಸಾವಿನ ದೂತನಂತೆ ವರ್ತಿಸು ತ್ತಿರುವುದು ಸ್ಪಷ್ಟ. ನಮ್ಮಲ್ಲಿ ಯಾರಾದರೂ ಒಬ್ಬನನ್ನು ಸಾವು ಆಯ್ಕೆ ಮಾಡಿರು ವುದು ಖಂಡಿತ.''

ಇತರರು ಅವನ ಮಾತನ್ನು ಮೌನವಾಗಿ ಕೇಳಿದರು. ಅವರನ್ನೂ ಇದೇ ಭೀತಿ ಕಾಡುತ್ತಿತ್ತು. ಮೊದಲನೆಯವ ಮುಂದುವರಿಸಿದ: ''ನಾನು ಹೇಳುವುದು ನಿಜವಾಗಿ ದ್ದರೆ, ಅವನನ್ನು ನಮ್ಮೊಂದಿಗೆ ಇರಿಸಿಕೊಂಡು ನಾವೆಲ್ಲ ಏಕೆ ನಮ್ಮ ಪ್ರಾಣವನ್ನು ಅಪಾಯಕ್ಕೆ ಒಡ್ಡಬೇಕು ?''

''ಆದರೆ ಸಾಯಬೇಕಾದುದು ಯಾರು ಎಂದು ನಮಗೆ ತಿಳಿದಿಲ್ಲವಲ್ಲ ? ಹೀಗಿರುವಾಗ ನಾವು ಹೇಗೆ ತಾನೇ ನಮ್ಮನ್ನು ರಕ್ಷಿಸಿಕೊಳ್ಳಬಲ್ಲೆವು ?''

''ನಾನೂ ಅದನ್ನೇ ಯೋಚಿಸುತ್ತಿದ್ದೇನೆ ......... ನನಗೊಂದು ಉಪಾಯ ಹೊಳೆಯುತ್ತಿದೆ., ನೀವೆಲ್ಲ ಅದನ್ನೊಪ್ಪುವ ಭರವಸೆ ನೀಡುವುದಾದರೆ ಹೇಳುತ್ತೇನೆ.''

''ಈ ವಿಚಾರ ನಮ್ಮೆಲ್ಲರಿಗೂ ಸಂಬಂಧಿಸಿರುವುದರಿಂದ, ನೀನು ಏನೇ ಹೇಳಿದರೂ ಒಪ್ಪುತ್ತೇವೆ. ಆದರೆ ಒಂದು ಷರತ್ತು. ನೀನು ಹೇಳುವ ಉಪಾಯ, ಅಸಾಧ್ಯ ಕಾರ್ಯವೇನೂ ಆಗಿರಕೂಡದು.''

ಆಗಲೇ ಮಿಂಚು ರಭಸವಾಗಿ ಹೊಡೆಯಿತು. ಸಿಡಿಲಿನ ಶಬ್ದದಿಂದ ಕಿವಿ ಕಿವುಡಾದಂತೆ ಅನಿಸಿತು. ವ್ಯಕ್ತಿ ನಡುಗುತ್ತಿದ್ದ.

"ಬೇಗ, ಬೇಗ" – ಉಳಿದ ನಾಲ್ವರು ಹೇಳಿದರು: "ನಾವೂ ನಿನ್ನ ಉಪಾಯವೇನೆಂದು ತಿಳಿದುಕೊಳ್ಳುತ್ತೇವೆ. ಸಿಡಿಲು ತಾಳ್ಮೆಗೆಡುತ್ತಿರುವ ಹಾಗೆ ಕಾಣುತ್ತಿದೆ. ನಾವು ತಡಮಾಡಿದರೆ ಅದು ಈಗಲೇ ನಮ್ಮ ಮೇಲೆ ಬಿದ್ದೀತು."

"ಹಾಗಾದರೆ ಸರಿ. ಸಿಡಿಲಿನ ರೂಪದಲ್ಲಿ ಸಾವು ನಮ್ಮಲ್ಲಿ ಒಬ್ಬರನ್ನು ಕರೆದುಕೊಂಡು ಹೋಗಲು ಕಾಯುತ್ತಿದೆ ಎಂದು ನಾವೆಲ್ಲ ಒಪ್ಪಿದ ಹಾಗಾಯಿತು. ಅಲ್ಲವೇ ?"

ಉಳಿದ ನಾಲ್ಕೂ ಜನ ಒಟ್ಟಿಗೆ ತಲೆ ಅಲ್ಲಾಡಿಸಿದರು.

"ಆ ಚಿಕ್ಕ ಗದ್ದೆಯ ಆಚೆಕಡೆ ಜಾಲಿಮರವೊಂದಿರುವುದು ನಿಮಗೆ ತೋರುತ್ತಿದೆಯೆ ?"

ಮತ್ತೆ ನಾಲ್ವರೂ ತಲೆ ಅಲ್ಲಾಡಿಸಿದರು.

"ನಾವು ಒಬ್ಬರ ಅನಂತರ ಒಬ್ಬರಂತೆ ಗದ್ದೆಯ ಆಚೆಗೆ ಓಡಿ ಆ ಮರದ ಕೊಂಬೆಯನ್ನು ಮುಟ್ಟಿ ಇಲ್ಲಿಗೆ ಹಿಂದಿರುಗೋಣ. ದುರ್ಗತಿಗೀಡಾದ ವ್ಯಕ್ತಿ ಈ ಮರದ ರಕ್ಷಣೆ ತೊರೆದು ಹೊರಗೆ ಹೆಜ್ಜೆಯಿರಿಸಿದಾಗಲೇ ಸಿಡಿಲು ಬಡಿಯುತ್ತದೆ. ಈ ರೀತಿ ನಮ್ಮಲ್ಲಿ ನಾಲ್ವರ ಪ್ರಾಣವನ್ನು ರಕ್ಷಿಸಿಕೊಳ್ಳಬಹುದು."

ಈ ಯೋಚನೆ ಎಲ್ಲರಿಗೂ ಸರಿಯೆನಿಸಿತು. ಮೊದಲು ಓಡಿ ಜಾಲಿಮರ ಮುಟ್ಟಿ ಬರಬೇಕಾದವನ ಹೆಸರೂ ನಿರ್ಧಾರವಾಯಿತು. ಆಗ ಅವನ ಮುಖ ಪೇಲವವಾಯಿತು. ಅವನ ಕಾಲುಗಳು ನಡುಗತೊಡಗಿದವು. ಆದರೂ ಅವನು ಧೈರ್ಯ ತಂದುಕೊಂಡು ಹೊರಟ. ಮಿಂಚು ಮಿಂಚಿತು; ಸಿಡಿಲು ಗುಡುಗಿತು. ಸಾವಿರಾರು ಪ್ರಖರ ದೀಪಗಳು ಒಟ್ಟಿಗೇ ಉರಿದಂತೆ ಭೂಭಾಗವಿಡೀ ಬೆಳಗಿತು. ಹೊರಟ ವ್ಯಕ್ತಿ ಭಯದಿಂದ ಕುಸಿದನೆಂದರೂ ತಪ್ಪಾಗಲಾರದು. ಆದರೂ ಅವನು ಹೊಲದಾಚೆಗಿರುವ ಜಾಲಿಮರದ ಕೊಂಬೆಯನ್ನು ಮುಟ್ಟಿ ಅರಳಿಮರದ ನೆರಳಿಗೆ ಅದೆಂತೋ ಮರಳಿದ.

ಇದೇ ರೀತಿ ಅನಂತರ ಮೂರು ಜನರು ಜಾಲಿಮರವನ್ನು ಮುಟ್ಟಿ ಬಂದರು. ಹೊರಟಲ್ಲಿಗೆ ಮರಳಿ ಬರುವವರೆಗಿನ ಅವರ ಮನಸ್ಸಿನ ಭೀತಿ ಹೇಳತೀರದು. ಅದೊಂದು ಅಗ್ನಿಪರೀಕ್ಷೆಯಂತೆ. ಮರಳಿ ಬಂದ ಅನಂತರ ಅವರ ನಿಟ್ಟುಸಿರು ಎಷ್ಟು ದೀರ್ಘವಾಗಿರುತ್ತಿತ್ತೆಂದರೆ, ಅವರು ತಮ್ಮೆಲ್ಲ ಉದ್ವೇಗ–ಆತಂಕಗಳನ್ನು ಮರೆಯುತ್ತಿದ್ದರು.

ಈಗ ಐದನೆಯ ಅಥವಾ ಕೊನೆಯ ವ್ಯಕ್ತಿಯ ಸರದಿ. ಆದರೆ ಹೆದರಿಕೆಯಿಂದ ಅವನಾಗಲೇ ಅರ್ಧ ಸತ್ತಿದ್ದನೆಂದು ಹೇಳಬೇಕಾಗಿಲ್ಲ. ಏಕೆಂದರೆ ಉಳಿದ ನಾಲ್ವರು ಆಗಲೇ ಜಾಲಿಮರ ಮುಟ್ಟಿ ಸುರಕ್ಷಿತವಾಗಿ ಮರಳಿಬಂದಿದ್ದರು. ಆದ್ದರಿಂದ ಅವನಿಗೆ ಮತ್ತು ಇತರ ನಾಲ್ವರಿಗೂ, ಅವನೇ ಸಾವು ಆಯ್ಕೆ ಮಾಡಿದ ಬಲಿಪಶು ಎಂದು ಖಚಿತವಾಗಿತ್ತು. ಅವನ ತಾನು ಸಾಗಬೇಕಾದ ಗದ್ದೆಯ, ಮುಟ್ಟಲೇ ಬೇಕಾದ ಜಾಲಿಮರದ ಕಡೆ ನೋಡಿದ. ಅವನ ಕಾಲುಗಳು ನಡುಗತೊಡಗಿದವು. ಅವನು ಪ್ರಜ್ಞೆ ತಪ್ಪಿ ಒದ್ದೆ ಕೆಸರಿನ ಮೇಲೆ ಕುಸಿದು ಬಿದ್ದ.

"ಏಳು" ಇತರರು ಕೂಗಿದರು. "ನಾವು ಮಾಡಿದಂತೆ ಮಾಡು, ಜಾಲಿ ಮರವನ್ನು ಮುಟ್ಟಿ ಬಾ."

"ಇಲ್ಲಾ" – ಅವನು ಕಿರುಚಿದ; "ನಾನು ಹೋಗುವುದಿಲ್ಲ, ಇಲ್ಲಿಂದ ಕಾಲ್ತೆಗೆದರೆ ಸಾಕು; ನಾನು ಸಾಯುತ್ತೇನೆ."

"ಅದು ನಿಜವಿರಬಹುದು. ನಿಜವಾಗಿ ನೀನೇ ಸಾವಿನಿಂದ ಆಯ್ಕೆಯಾದವನು ಎಂಬುದು ನಮಗೂ ಖಚಿತವಾಗಿ ತಿಳಿದಿದೆ. ಆದರೆ ನೀನು ಹಿಮ್ಮೆಟ್ಟಲು ನಾವು ಬಿಡುವುದಿಲ್ಲ. ನೀನು ಹೊರಡಲೇ ಬೇಕು; ಜಾಲಿ ಮರವನ್ನು ಮುಟ್ಟಿ ಬರಲೇಬೇಕು."

"ದಯೆಯಿಟ್ಟು, ತಿಳಿದೂ ತಿಳಿದೂ ಯಮರಾಯನಲ್ಲಿಗೆ ನನ್ನನ್ನು ಕಳಿಸಬೇಡಿ. ನಿಮ್ಮೆದುರು ಸ್ಪಷ್ಟವಾಗಿ ದೀರ್ಘವಾದ ಜೀವನವಿದೆ. ನಾನು ಇಲ್ಲಿ ನಿಮ್ಮೊಂದಿಗಿದ್ದರೆ, ಪ್ರಾಯಃ ನಾನೂ ಬದುಕಿಯೇನು ಅನಿಸುತ್ತದೆ. ಸಿಡಿಲು – ನೀವೆಲ್ಲ ಇಲ್ಲಿರುವಷ್ಟು ಕಾಲ ಬಡಿಯಲಾರದ್ದರಿಂದ, ನಾನೂ ಬದುಕುತ್ತೇನೆ. ದಯೆ ತೋರಿ. ನನ್ನನ್ನು ರಕ್ಷಿಸಿ. ನಾನು ಎಂದೆಂದಿಗೂ ನಿಮಗೆ ಕೃತಜ್ಞನಾಗಿರುತ್ತೇನೆ."

"ಮೂರ್ಖತನ ಮಾಡಬೇಡ. ನಿನಗಾಗಿ ನಾವು ನಮ್ಮ ಪ್ರಾಣವನ್ನು ಕಳೆದುಕೊಳ್ಳಲಾರೆವು. ಕೂಡಲೇ ಹೊರಡು."

ಈ ನುಡಿಗಳೊಂದಿಗೆ ಆ ನಾಲ್ಕು ಜನರೂ ಐದನೆಯವನನ್ನು ಹೊಲಕ್ಕೆ ದಬ್ಬಿದರು. ಆತ ಕೆಲವೇ ಹೆಜ್ಜೆಗಳಷ್ಟು ದೂರ ಹೋಗಿರಬಹುದಷ್ಟೆ. ಮಿಂಚು ಮಿಂಚಿತು. ಅವನ ಕಣ್ಣು ಮಂಜಾಯಿತು. ಸಿಡಿಲು ಬಡಿಯಿತು. ಕಿವಿ ಕಿವುಡಾದಂತೆ ಅನಿಸಿತು. ಆ ಸಿಡಿಲು ನಾಲ್ವರು ಆಶ್ರಯ ಪಡೆದಿದ್ದ ಆರಳಿ ಮರಕ್ಕೇ ಹೊಡೆದಿತ್ತು. ನೆಲದಲ್ಲಿ ಗುಹೆ ಉಂಟಾಯಿತು. ಮರ ಬೂದಿಯಾಗಿ ಉರುಳಿಬಿತ್ತು. ನಾಲ್ವವೂ ಭಸ್ಮವಾದರು.

ಐದನೆಯ ವ್ಯಕ್ತಿ, ತನ್ನ ಮೈಮೇಲೆ ಬೀಳುತ್ತಿರುವ ಮಳೆಯನ್ನೂ ಲೆಕ್ಕಿಸದೆ ದಿಗ್ಭ್ರಮೆಗೊಂಡು ನಿಂತಿದ್ದ. ತನ್ನೆದುರೇ ಸಂಭವಿಸಿದ ದುರಂತ ಕಂಡ ಅವನು ಮೂಕನಾಗಿದ್ದ*.

## ಒಗಟುಗಳು, ಗಾದೆಗಳು ಹಾಗೂ ಸೂಕ್ತಿಗಳು

ಕನಹಯ್ಯಾಲಾಲ್ ಸಹಾಲ್ ಅವರು, ತಮ್ಮ ವಿದ್ವತ್ಕೃತಿಯಾದ **ರಾಜಾಸ್ಥಾನಿ *ಕಹಾವತೇ: ಏಕ್ ಅಧ್ಯಯನ***ದಲ್ಲಿ ರಾಜಾಸ್ಥಾನದ ಗಾದೆ ಹಾಗೂ ಸೂಕ್ತಿಗಳನ್ನು ಒಂಬತ್ತು ಶೀರ್ಷಿಕೆಗಳಲ್ಲಿ ವಿಷಯಾನುಸಾರವಾಗಿ ವರ್ಗೀಕರಿಸಿದ್ದಾರೆ: ಐತಿಹಾಸಿಕ; ಸ್ಥಳಸಂಬಂಧಿ; ಜಾತಿಗಳು, ಸಮುದಾಯಗಳು, ಮಹಿಳೆಯರು, ಹಬ್ಬಗಳು, ನಡೆವಳಿಕೆಗಳು ಮತ್ತು ವೃತ್ತಿಗಳನ್ನೂ ಒಳಗೊಂಡಂತೆ ಸಮಾಜ ಸಂಬಂಧಿ; ಶೈಕ್ಷಣಿಕ, ಮನೋವೈಜ್ಞಾನಿಕ ಮತ್ತು ಸಾಹಿತ್ಯಿಕ; ಧಾರ್ಮಿಕ ಹಾಗೂ ತಾತ್ವಿಕ; ಕೃಷಿ ಸಂಬಂಧಿ;

---

* ಈ ಎರಡೂ ಜನಪದ ಕಥೆಗಳನ್ನು ಬನಿರಾಯ್ ಚೌಧುರಿ ಅವರ 'ಫೋಕ್ ಟೇಲ್ಸ್ ಆಫ್ ರಾಜಾಸ್ಥಾನಿ' ಎಂಬ ಕೃತಿಯಿಂದ ಎತ್ತಿಕೊಳ್ಳಲಾಗಿದೆ.

ನೈಸರ್ಗಿಕ ಮತ್ತು ವೈಜ್ಞಾನಿಕ; ಖಗೋಳ ವೈಜ್ಞಾನಿಕ ಮತ್ತು ಸಂಕೀರ್ಣ (ಇತರ). ರಾಜಾಸ್ಥಾನದ ಜಾನಪದ, ಯುಗಯುಗಾಂತರಗಳಿಂದ, ಜನರು ಸಹಜವಾಗಿ ಸಂಗ್ರಹಿಸುತ್ತ ಹಾಗೂ ಅಭಿವ್ಯಕ್ತಿಸುತ್ತ ಬಂದ ಜನಪ್ರಿಯ ಜ್ಞಾನದ ನಿಧಿಯಾಗಿದೆ ಎಂದು ಈ ಸ್ಥೂಲ ವರ್ಗೀಕರಣದಿಂದ ಸ್ಪಷ್ಟವಾಗುತ್ತದೆ.

*1. ಐತಿಹಾಸಿಕ*

'ತಿರಿಯಾ ತೇಲ್ ಹಮೀರ್ ಹತ್ ಛದಾ ನೋ ದೂಜಿ ಬಾರ್'

ಮಹಿಳೆ ಮದುವೆಯ ಸಮಾರಂಭದ ಅಲಂಕಾರಕ್ಕಾಗಿ ಮೈಗೆ ಎಣ್ಣೆ ಹಚ್ಚಿಕೊಳ್ಳುವುದು ಬದುಕಿನಲ್ಲಿ ಒಂದೇ ಒಂದು ಸಲ; ಹಾಗೆಯೇ ರಣಥಂಬೋರಿನ ಹಮೀರ್ ಕೂಡ ಒಮ್ಮೆ ಒಂದು ನಿರ್ಧಾರಕ್ಕೆ ಬಂದನೆಂದರೆ ಮತ್ತೆ ಅದನ್ನು ಸರ್ವಥಾ ಬದಲಾಯಿಸುವುದಿಲ್ಲ.

'ಗಾವ್ನೋನ್-ಗಾವ್ನೋನ್ ಗೋಗೋ ನೆ ಗಾವ್ನೋನ್-ಗಾವ್ನೋನ್ ಖೀಜ್ರಿ'

ಖೀಜ್ರಿ ಮರ ಎಲ್ಲೆಡೆ ಕಂಡು ಬರುವಂತೆ, ದೇವನೆಂದು ಪೂಜಿಸಲ್ಪಡುವ ಜನಪ್ರಿಯ ನಾಯಕ ಗೋಗಾನಿಗೆ ಪ್ರತಿ ಗ್ರಾಮದಲ್ಲಿಯೂ ಗುಡಿಯುಂಟು.

'ಪೋಪಾಬಾಯ್ ರೋ ರಾಜ್' ಎಂಬುದು ರಾಜಾಸ್ಥಾನದ ಆದ್ಯಂತ ವ್ಯಾಪಿಸಿರುವ ಕೆಟ್ಟ ಆಳ್ವಿಕೆ ಹಾಗೂ ಪಕ್ಷಪಾತದಿಂದ ಕೂಡಿದ ಆಡಳಿತವನ್ನು ಸೂಚಿಸುವ ಗಾದೆಯಾಗಿದೆ.

'ಕಥೇ ರಾಜಾ ಭೋಜ್, ಕಥೇ ಕಥೇ ಗಾಂಗ್ಲೋ ತೇಲಿ !'

(ಮಾಳವದ) ಭೋಜರಾಜ ಮತ್ತು ಗಾಣಿಗ ಗಂಗ್ಲಾ-ಇವರ ನಡುವೆ ಹೋಲಿಕೆ ಎಲ್ಲಿ ಸಾಧ್ಯ ?

*2. ಸ್ಥಳನಾಮಗಳು*

'ಜೇ ನಾ ದೇಖ್ಯೋ ಜೈಪುರಿಯೊ ತೂ
ಕಲ್ ಮೆನ್ ಆಕಾರ್ ಕೇದಾರಿಯೊ'

ಜಯಪುರ ನೋಡದಿದ್ದವನು ಬದುಕಿದ್ದು ಫಲವೇನು ?

'ಕನೇ ಪೈಸೊ ತೂ ಜಯಪುರ್
ನಹೀನ್ ತೂ ಜಯಪುರ್'

ಕೈಯಲ್ಲಿ ಹಣವಿದ್ದವನು ಮಾತ್ರ ಜಯಪುರ ನೋಡಿ ಸಂತೋಷಪಡಲು ಸಾಧ್ಯ. ಪಾಪರನ ಪಾಲಿಗೆ ಅದೊಂದು ನರಕ.

'ಶಂಶೇರ್ ತೂ ಸಿರೋಹಿ ಕೀ !'

ಸಂಭಾರ್ ಉಪ್ಪು ಸರೋವರಕ್ಕೆ ಬಿದ್ದುದೆಲ್ಲವೂ ಉಪ್ಪು ಉಪ್ಪಾಗುತ್ತದೆ.

'ಭಂಗೋ ಗರ್ ಚಿತ್ತೂರ್'

ಚಿತ್ತೂರಿನ ಕೋಟೆ, ಎಲ್ಲ ಕೋಟೆಗಳಲ್ಲಿಯೂ ಅತ್ಯುತ್ಕೃಷ್ಟವಾದುದು.

*3. ಸಮಾಜ*

'ಬಮ್ಮನ್ ಹಾಥೀ ಛರಹ್ಯೋ ಭಿ ಮಾಂಗೆ'

ಬ್ರಾಹ್ಮಣ ಶ್ರೀಮಂತನಾದ ಮೇಲೂ ಭಿಕ್ಷೆ ಬೇಡುವುದನ್ನು ನಿಲ್ಲಿಸುವುದಿಲ್ಲ.

'ಬನಿಯೋ ಖಟ್ ಮೇ ತೂ ಬಮನ್ ಥತ್ ಮೇ'

ಬನಿಯನಿಗೆ ಕಾಯಿಲೆ ಬಂದರೆ, ಬ್ರಾಹ್ಮಣನಿಗೆ ಒಳ್ಳೆಯ ಭವಿಷ್ಯ. ಏಕೆಂದರೆ ಆಗ ತನ್ನ ಉಳಿವಿಗಾಗಿ ಬನಿಯ, ಬ್ರಾಹ್ಮಣನಿಂದ ಪೂಜೆ ನಡೆಸುತ್ತಾನೆ.

'ಬನಿಯೋ ಲಿಖೇ ಪರೇಹ ಕರ್ತಾರ್'

ಓದಲಾಗದ ಹಸ್ತಾಕ್ಷರದಲ್ಲಿ ಬನಿಯ ಬರೆದುದನ್ನು ದೇವನೊಬ್ಬನೇ ಓದಬಲ್ಲ.'

'ಬನಿಯೋ ಮಿತ್ ನಾ ಬೇಸ್ಯಾಸತಿ
ಕಾಯಾ ಹನ್ಸ್ ನೋಯಿ ಗಧಾ ಜತಿ'

ಬನಿಯ ಎಂದೂ ಸ್ನೇಹಿತನಾಗಲಾರ; ವೇಶ್ಯೆ ಎಂದೂ ಗರತಿಯಾಗಳು-ಕಾಗೆ ಎಂದೂ ಹಂಸವಾಗಲಾರದ ಹಾಗೆ ಅಥವಾ ಕತ್ತೆ ಎಂದೂ ಜತಿಯಾಗಲಾರದ ಹಾಗೆ.

'ಗುಜರ್ ಜಹಾನ್ ಉಜರ್'

ಗುಜರರು ನೆಲೆಸಿದ್ದಲ್ಲಿ ಇನ್ನಾರೂ ಜೀವಿಸಲಾರರು.

'ಜಾಟ್ ಪಥೇ ಥಾಥ್'

ಜಾಟರು ನೆಲೆಸಿರುವಲ್ಲಿ ಸಮೃದ್ಧಿ ಇರುತ್ತದೆ.

'ಬೇಟೀ ಭಾಲೀ ನೋ ಏಕ್'

ಒಬ್ಬಳೇ ಮಗಳಿರುವುದು ಒಳ್ಳೆಯದಲ್ಲ.

'ದುನಿಯಾ ಮೇ ದೋ ಗರೀಬ್
ಕಾಯ್ ಬೀಟೀ ಕಾಯ್ ಬೇಲ್'

ಜಗತ್ತಿನಲ್ಲಿ ಇಬ್ಬರು ದುರದೃಷ್ಟಶಾಲಿಗಳೇ ಮಗಳು ಮತ್ತು ಎತ್ತು.

'ಸಸು ಮರ್ಗೀ ಕತಖೀ ಬೇರೀ
ಭೂ ಛದಗೀ ಹರ್ ಕೀ ಫೈರೀ

ಅತ್ತೆಯು ಸಾವಿನಿಂದ ಸೊಸೆಗೆ ಬಂಧನದಿಂದ ಬಿಡುಗಡೆಯಾಯಿತು.

'ಛೋಟಿ ಮೋಟಿ ಕಮಾನೀ
ಸಗ್ಲೀ ಬಿಶ್ ಕೀ ಬೇಲ್'

ಎಲ್ಲ ಮಹಿಳೆಯರೂ ವಿಷಯುಕ್ತರು.

'ಬಂಧೀ ಭಾರೀ ಲಕಕೀ
ಖುಲ್ಲೀ ಬಿಖಾರ್ ಜಯಾ'

ಸಂಯುಕ್ತ ಕುಟುಂಬದಲ್ಲಿ ಜೀವನ ಸಾಗಿಸುವುದು ಪ್ರತಿಷ್ಠೆಯ ಸೂಚಕ; ಸಹೋದರರು ಬೇರೆಯಾಗಿ ಪ್ರತ್ಯೇಕ ಜೀವಿಸಲಾರಂಭಿಸಿದಾಗ ಅವರು ಪ್ರತಿಷ್ಠೆ ಕಳೆದುಕೊಳ್ಳುತ್ತಾರೆ.

*4. ಶಿಕ್ಷಣ*

'ಗುರು ಕೀ ಛೋಟ್
ವಿದ್ಯಾ ಕೀ ಪೋಟ್'

ಗುರುವಿನ ಹೊಡೆತವೇ ಶಿಷ್ಯನಿಗೆ ಜ್ಞಾನ ಮತ್ತು ಶಿಕ್ಷಣಗಳನ್ನು ನೀಡುತ್ತದೆ.

'ಮಾಯಾ ಅಂತ್ ಕೀ
ವಿದ್ಯಾ ಕಂತ್ ಕೀ'

ಚೀಲದ ಒಳಗಿರುವ ಹಣ ಮತ್ತು ಅನುಭವದಿಂದ ದೊರೆತ ಜ್ಞಾನ– ಇವೆರಡೇ ಉಪಯುಕ್ತ.

'ಲಿಚಮಿ ತೂ ಆಗಿ – ಜಾನಿ'

ಶ್ರೀಮಂತರಿಗೆ ಪುಕ್ಕಗಳಿರುತ್ತವೆ.

''ಥೋಥೋ ಛಾನೋ ಬಜೇ ಘಾನೋ'

ತುಂಬಿದ ಕೊಡ ತುಳುಕುವುದಿಲ್ಲ

'ರಾಣಿ ಖೇತಿ ರಜಪೂತ್ ರೀ'

ರಣರಂಗವೇ ರಜಪೂತನ ವ್ಯವಸಾಯ ಭೂಮಿ

*5. ಧರ್ಮ ಮತ್ತು ತತ್ವಶಾಸ್ತ್ರ*

'ಕಿರೀ ನಾ ಕಾನ್ ಹಾಥೀ ನಾ ಮಾನ್'

ಅವನು ಇರುವೆಗೆ ಕಡ್ಡಿಯನ್ನೂ ಆನೆಗೆ ಗುಡ್ಡವನ್ನೂ ನೀಡುತ್ತಾನೆ.

'ರಾಮ್‌ಸನ್ ಜೋರ್ ನಹೀ'

ಮಾನವ, ದೇವನೆದುರು ಅಸಹಾಯಕ.

'ಸಂಚ್ ಸ್ ಆಂಚ್ ನಹೀ'

ಸತ್ಯಕ್ಕೆ ವಿವರಣೆಯು ಅಗತ್ಯವಿರುವುದಿಲ್ಲ.

'ಧರಮ್ ಕಿಯಾ ಧನ್ ಬಾಧೇ'

ಧಾರ್ಮಿಕ ಬದುಕು ಸಂಪತ್ತನ್ನು ಹೆಚ್ಚಿಸುತ್ತದೆ.

'ಸೂರ್ ನೋ ಪೂಛೇ ತೀಪಾನಿ
ಸುಕನ್ ನೋ ದೇಖೇ ಸೂರ್'

ಧೈರ್ಯಶಾಲಿಗಳು ತಮ್ಮ ಜಾತಕಗಳನ್ನು ಜ್ಯೋತಿಷಿಗಳಿಗೆ ತೋರಿಸುವುದಿಲ್ಲ, ಅವರು ಶಕುನಗಳನ್ನು ನಂಬುವುದಿಲ್ಲ.

'ಕರಮ್ ಹೀನ್ ಖೇತೀ ಕಾರೇ
ಕೀ ಕಲ್ ಪಾರೇ ಕೀ ಬಲದ್‌ಮಾರೇ'

ದುರದೃಷ್ಟಶಾಲಿ ಹೊಲ ಉತ್ತರೆ, ಒಂದೋ ಬರಗಾಲ ಬರುತ್ತದೆ ಅಥವಾ ಅವನ ಎತ್ತುಗಳು ಸಾಯುತ್ತವೆ.

'ಹೊನ್ನಿ ನೇ ನಮಸ್ಕಾರ್'

ಭವಿಷ್ಯದಲ್ಲಿ ಎದುರಾಗುವುದನ್ನು ಸ್ವೀಕರಿಸು.

'ರೂಪ್ ಕೀ ರೋವೆ, ಕರಮ್ ಕೀ ಖಾಯೆ'

ದುರದೃಷ್ಟಶಾಲಿ ಸುಂದರ ಮಹಿಳೆ ಜೀವನವಿಡೀ ನರಳುತ್ತಾಳೆ. ಆದರೆ ಅದೃಷ್ಟಶಾಲಿ, ಕುರೂಪಿಯಾಗಿದ್ದರೂ, ಜೀವನದ ಎಲ್ಲ ಸುಖಸಂತೋಷಗಳನ್ನು ಅನುಭವಿಸುತ್ತಾಳೆ.

*6. ಕೃಷಿ*

'ಸಾವನ್ ಮೇ ಜೋ ಸೂರ್ಯೋ ಛಲೇ
ಭಾಮರೇ ಪರ್ವಾಯ್
ಅಸೋಜನ್ ಮೇ ಷಿಛ್ವಾ ಛಲೇ
ಭರ್ - ಭರ್ ಗರಾ ಲ್ಯಾಯ್'

ಗಾಳಿಯು ಶ್ರಾವಣದಲ್ಲಿ ಈಶಾನ್ಯದಿಂದಲೂ ಭಾದ್ರಪದದಲ್ಲಿ ಪೂರ್ವದಿಂದಲೂ ಅಶ್ವಯುಜದಲ್ಲಿ ಪಶ್ಚಿಮದಿಂದಲೂ ಬೀಸಿದರೆ ಸುಗ್ಗಿ ಸಮೃದ್ಧವಾಗುತ್ತದೆ.

'ನದಾ ತಂಕನ್ ಬಲದ್ ಬಿಕಾವನ್'

ಶ್ರಾವಣದಲ್ಲಿ ಪಶ್ಚಿಮದಿಂದ ಬೀಸುವ ಗಾಳಿಯು, ಕೃಷಿಕರು ತಮ್ಮ ಎತ್ತುಗಳನ್ನು ಮಾರುವಂತೆ ಮಾಡುತ್ತದೆ.

'ಸಾವನ್ ಪತ್ತಿ ಪಂಚಮಿ ಜೋ ಬಜೇ ಬಹು ಬಾಯಾ
ಕಲ್‌ಪರೇ ಸಹು ದೇಶ್‌ಮೇ ಮಿನಖ್ ನಾಯ್ ಖಾಯಾ'

ಶ್ರಾವಣ ಬಹುಳ ಪಂಚಮಿಯಂದು ಜೋರಾದ ಗಾಳಿ ಬೀಸಿದರೆ, ಅದು ಮನುಷ್ಯ ಮನುಷ್ಯನನ್ನೇ ತಿನ್ನಬೇಕಾದಂತಹ ರಾಷ್ಟ್ರವ್ಯಾಪಿ ಕ್ಷಾಮ ಬರುವ ಲಕ್ಷಣ.

'ಖೀತ್ ಖೋವೆ ಗೈಲಿ'

ಹೊಲದ ನಡುವೆ ಹಾದಿಯಿರುವುದು ಕೃಷಿಗೆ ಅಪಾಯಕರ.

'ಖತ್ ಪಾರೆ ತೂ ಖೇತ್
ನಹೀ ತೂ ಕುರೋ - ರೆತ್'

ಸಹಜ ಅಥವಾ ಕೃತಕ ಗೊಬ್ಬರಗಳನ್ನು ಬಳಸದ ಕೃಷಿಭೂಮಿ ಮರಳು ಹಾಗೂ ಒಡ್ಡೊಡ್ಡಾದ ಕಲ್ಲುಗಳ ಗುಡ್ಡೆಯಲ್ಲದೆ ಇನ್ನೇನೂ ಅಲ್ಲ.

'ಧನ್ ಖೇತಿ - ಧೀ ಛಾಕ್ರಿ'

ಕೃಷಿಯನ್ನು ಹೊಗಳು; ಸೇವೆಯನ್ನಲ್ಲ.

*7. ಮಳೆ*

'ಛರೀಜಾ ನಹಾವೆ ಧೂಲ್ ಮೇ
ಮೆ ಹಾ ಆವನ್ಹಾರ್
ಜಲ್ ಮೇ ನಹಾವೆ ಛರ್ಸಾಲಿ
ಮೆಹ್ ಬಿದಾ ಥಿನ್ ಯಾರ್'

ಗುಬ್ಬಿ ಮರಳಲ್ಲಿ ಸ್ನಾನ ಮಾಡಿದರೆ, ಧಾರಾಕಾರ ಮಳೆ ಬರುತ್ತದೆ. ಆದರೆ ಅದು ನೀರಿನಲ್ಲಿ ಸ್ನಾನ ಮಾಡಿತೋ, ಮಳೆಯೇ ಬರುವುದಿಲ್ಲ.

'ಆಮ್ಮರ್ ರಥ್ಯೋ
ಮೇ ಮಥ್ಯೋ

ಆಕಾಶ ಕಡುಕೆಂಪು ಬಣ್ಣಕ್ಕೆ ತಿರುಗಿದರೆ ಮಳೆ ಜೋರಾಗಿ ಬರುತ್ತದೆ.

'ಬದಲ್ ರಹೇ ರಾತ್ ರಾ ಬಾಸಿ
ಮೆಹ್ ಸೀಲೋ'

ಆಕಾಶ ಪೇಲವವಾಗಿದ್ದರೆ, ಮುಂಗಾರು ಮಾರುತ ದುರ್ಬಲವಾಗುತ್ತದೆ.

'ಅಂಧೀ ಜಿತ್ರಾ ಮೆಹ್'

ಮಳೆಬರುವ ಆವೃತ್ತಿ ದೂಳಿನಿಂದ ಕೂಡಿದ ಬಿರುಗಾಳಿಯ ಆವೃತ್ತಿಯನ್ನು ಅವಲಂಬಿಸಿರುತ್ತದೆ.

'ಆಗಸ್ತ್ ಅವ್ಗಾ ಮೆಹ್ ಪೊವ್ಗಾ'

ಅಗಸ್ತ್ಯ ನಕ್ಷತ್ರದ ಉದಯ ಮಳೆಗಾಲ ಮುಗಿದುದರ ಸಂಕೇತ.

*8. ಸಂಕೀರ್ಣ*

'ಗರ್ಮೀ ಗರೀಬ್ ಕೀ
ಸ್ಯಾಲೋ ಸಾಹುಕಾರನ್ ಕೋ'

ಬಡವ ಬೇಸಿಗೆಯಲ್ಲೂ ಶ್ರೀಮಂತ ಚಳಿಗಾಲದಲ್ಲಿಯೂ ಸುಖಿಸುತ್ತಾನೆ.

'ಆಧೇ ಮಾಹ್,
ಕಂಧೇ ಕಮ್ಲೀ'

ಮಾಘ ಮಾಸದ ಅರ್ಧಭಾಗ ಕಳೆದರೆ ಸಾಕು, ಉಣ್ಣೆ ಶಾಲು ಭುಜವನ್ನೇರುತ್ತವೆ.

'ಕಬೂತರ್ ನಾ ಕುವ್ಹೋ ಹೀ ದೀಖೇ'

ಪಾರಿವಾಳಕ್ಕೆ ತೋರುವುದು ಬಾವಿ ಮಾತ್ರ.

'ಪಖೇರುವನ್ ಮೇ ಕಾಗ್'

ಕಾಗೆ ಎಲ್ಲ ಪಕ್ಷಿಗಳಲ್ಲಿಯೂ ಜಾಣ ಪಕ್ಷಿ.

'ಆಪ್ ಗುರೂಜೀ ಕತ್ರಾ ಮಾರೇ
ಛೇಲನ್ ನಾ ಪರ್‌ಮೋದ್ ಸಿಖಾವೇ'

ಕೀಟವನ್ನು ಕೊಲ್ಲುವ ಗುರುವೇ ಕೊಲ್ಲಬಾರದೆಂದು ವಿದ್ಯಾರ್ಥಿಗಳಿಗೆ ಉಪದೇಶ ಮಾಡುತ್ತಾನೆ.

'ಹಾಥೀ ಕೀ ಗೈಲ್
ಕುತ್ತಾ ಘಾನಾ ಹೀ ಘುಸೇ'

ನಾಯಿ ಬೊಗಳಿದರೇನು? ಕಾರವಾನ್ ಮುಂದೆ ಸಾಗುತ್ತಲೇ ಇರುತ್ತದೆ.

## ಗ್ರಾಮೀಣ ನಾಟಕವೊಂದರ ಉದ್ಧೃತ ಭಾಗ

### *ಸಜ್ಜಾಳ ಲಾವಣಿ*

ಒಬ್ಬ ವೃದ್ಧ ರಜಪೂತನಿಗೆ ತನ್ನ ಸಾಮಂತ ಮುಖಂಡನಿಂದ, ರಾವ್ ಅಥವಾ ರಾಣಾನಿಂದ ತನ್ನ ಸೇವೆ ಮಾಡಲು ಬರಬೇಕೆಂಬ ಕರೆ ಬಂತು. ಸ್ವಾತಂತ್ರ್ಯ ಬಯಸುವ ಠಾಕೂರ್ ರಾಣಾನಲ್ಲಿಗೆ ಹೋಗಲು ಇಷ್ಟಪಡಲಿಲ್ಲ. ಮಗನಾದರೂ ಇದ್ದಿದ್ದರೆ ಅವನನ್ನು ತನ್ನ ಬದಲು ಕಳುಹಿಸಬಹುದಿತ್ತು. ಆದರೆ ಅವನಿಗಿದ್ದುದು ಮಗಳು ಮಾತ್ರ. ಅವಳೇ ತಂದೆಯ ಬದಲಿಗೆ ಸಾಮಂತನ ಸೇವೆ ಮಾಡಲು ಒಪ್ಪಿದಳು, ಹನ್ನೆರಡು ವರ್ಷಗಳ ಕಾಲ ಸಾಮಂತ ಮುಖಂಡನ ಸೇವೆ ಮಾಡಿ ಅನಂತರ ತಂದೆಯ ಮನೆಗೆ ಹಿಂದಿರುಗಿದಳು.

ತಂದೆ ವೇದಿಕೆಯ ಮೇಲೆ ಕುಳಿತಿದ್ದಾನೆ.
"ಮಹಾರಾಣಾನಿಂದ ಪತ್ರ ಬಂದಿದೆ."
"ಹೌದೇ ಅಪ್ಪ ? ನನಗೆ ಓದಿ ಹೇಳುತ್ತೀಯಾ ?"
"ಮಗಳೇ, ನನಗೆ ಅದನ್ನು ಓದುವ ಸಹನೆಯಿಲ್ಲ.
ನನ್ನ ಹೃದಯ ಭಾರವಾಗಿದೆ; ನಾನು ಕಾತರನಾಗಿದ್ದೇನೆ, ಓ ಸಜ್ಜಾ
ಪತ್ರದ ಅಂಚಿನಲ್ಲೇನೋ ಶುಭಾಶಯಗಳಿವೆ
ಆದರೆ ಮಧ್ಯಭಾಗದಲ್ಲಿ, ಓ ಸಜ್ಜಾ, ಕೂಡಲೇ ಬರಬೇಕೆಂಬ ಆಜ್ಞೆಯಿದೆ."
"ಅಪ್ಪಾ, ವ್ಯಾಕುಲನಾಗಬೇಡ
ನಿನ್ನ ಬದಲಿಗೆ ನಾನೇ ರಾಣಾನ ಸೇವೆ ಮಾಡುತ್ತೇನೆ–12 ವರ್ಷಗಳ ಕಾಲ."
ಸಜ್ಜಾ ಪುರುಷವೇಷ ಧರಿಸಿ ಹೊರಟಳು –
ಬೆಳಗ್ಗೆ ಹೊತ್ತು, ಒಂಟೆಯನ್ನೇರಿ
ದಾರಿಯಲ್ಲಿ ಗೋವಳಿಗನನ್ನು ಕೇಳಿದಳು:
"ಓ ಅಣ್ಣಾ, ದಯೆಯಿಟ್ಟು ರಾವ್‌ನ ರಾಜ್ಯದ ಗಡಿ ತೋರಿಸುತ್ತೀಯಾ ?"
"ಓ ಒಂಟೆ ಸವಾರ, ಇದೇ ರಾಜನ ಸಾಮ್ರಾಜ್ಯದ ಗಡಿ"
ಸಜ್ಜಾ ಮಾಲಿಯ ಮಗನನ್ನು ಕೇಳಿದಳು:
"ಓ ತಮ್ಮ, ರಾಜನ ತೋಟ ಯಾವುದು ? ತೋರಿಸುತ್ತೀಯಾ ?"
"ಓ ಒಂಟೆ ಸವಾರ, ಇದೇ ರಾಜನ ತೋಟ,
ಓ ಒಂಟೆ ಸವಾರ, ಮಾವು ಹಣ್ಣಾಗಿದೆ, ಅಂಬೆ ಹಣ್ಣು ರಸಭರಿತವಾಗಿದೆ."
ಸಜ್ಜಾ ಮತ್ತೆಮತ್ತೆ ಸುತ್ತಮುತ್ತ ನೋಡಿದಳು.
ತನ್ನ ಬೆಳಗಿನ ಫಲಾಹಾರಕ್ಕಾಗಿ ಹಸಿರು ಬಾಳೆ ಎಲೆ ತೆಗೆದುಕೊಂಡಳು.
ನೀರು ಒಯ್ಯುತ್ತಿದ್ದ ಮಹಿಳೆಯೊಬ್ಬಳನ್ನು ಕಳಿದಳು;
"ಓ, ನೀರು ಒಯ್ಯುವವಳೆ, ರಾವ್ ಅವರ ಸರೋವರ ತೋರಿಸುತ್ತೀಯಾ ?"

"ಓ, ಒಂಟಿ ಸವಾರ, ಇದೇ ಸಮುದ್ರ ಸದೃಶವಾಗಿರುವ ಕರೆ."
ಸಜ್ನಾ ಆ ಸಮುದ್ರ ಸದೃಶ ಕರೆಯ ಪಕ್ಕ ಬೀಡು ಬಿಟ್ಟಳು.
ಗಾರೆಯವನ ಮಗನನ್ನು ಕೇಳಿದಳು:
"ಓ ಅಣ್ಣಾ, ರಾವ್‌ನ ಅರಮನೆ ತೋರಿಸುತ್ತೀಯಾ ?"
"ಓ ಒಂಟಿ ಸವಾರ, ಇದೇ ರಾಜಾಜಿಯ ಅರಮನೆ;
ಈ ಬಾಳೆ ಮರಗಳು ಅರಮನೆ ಬಾಗಿಲುಗಳತ್ತಲೇ ತೊನೆಯುತ್ತಿವೆ"

(ಇಲ್ಲಿ ನಿರೂಪಣೆ ತುಂಡಾಗಿದೆ. ಈ ಭಾಗದಲ್ಲಿ ಸಜ್ನಾ ರಾಣಾನ ಸೇವೆ ಮಾಡುತ್ತಿದ್ದಳೆಂದು ಭಾವಿಸಲಾಗಿದೆ. ಮೊದಲು ಅವಳು ಹುಡುಗನಲ್ಲ ಎಂದು ಯಾರೂ ಭಾವಿಸಲಿಲ್ಲ. ಆದರೆ ಕೊನೆಗೆ ರಾಜನ ಕುತೂಹಲ ಕೆರಳಿತು. ಅವನು ತನ್ನ ನಾದಿನಿಯೊಡನೆ ಸಮಾಲೋಚನೆ ನಡೆಸುತ್ತಾನೆ.)

"ನಾದಿನಿಯೆ, ನನಗೆ ಅಚ್ಚರಿಯಾಗುತ್ತದೆ
ಅವನ ಕಣ್ಣುಗಳು ಹುಡುಗಿಯ ಕಣ್ಣುಗಳಂತಿವೆ; ಆದರೆ ಅವನು ಹುಡುಗ
ನಂತೆ ಮಾತನಾಡುತ್ತಾನೆ."
"ಭಾವಾಜೀ ನಾವವನನ್ನು ತೋಟಕ್ಕೆ ಕರೆದುಕೊಂಡು ಹೋಗೋಣ
ಗಂಡಸೇ ಹೆಂಗಸೇ ಎಂದು ಕಂಡುಹಿಡಿಯೋಣ
ಹೆಂಗಸೇ ಆಗಿದ್ದರೆ ಅವಳು ಮರದ ಕೆಳಗೆ ಬಿದ್ದ ಹಣ್ಣುಗಳನ್ನು ತಿನ್ನುತ್ತಾಳೆ
ಗಂಡಸಾಗಿದ್ದರೆ ಗುಲಾಬಿ ಹೂ ಕೀಳುತ್ತಾನೆ.
ರಾಜಾ ಜೈಮಲ್ ಬಿದ್ದ ಹಣ್ಣು ತಿನ್ನಬಹುದು.
ಆದರೆ ಗಾಯುವರ್ಾಲ್‌ನ ಸಜ್ನಾ ಗುಲಾಬಿ ಹೂ ಕೀಳುತ್ತಾಳೆ."
"ನಾದಿನಿಯೆ, ನನಗೆ ಅಚ್ಚರಿಯಾಗುತ್ತಿದೆ
ಅವನ ಕಣ್ಣುಗಳು ಹುಡುಗಿಯ ಕಣ್ಣುಗಳಂತಿವೆ; ಆದರೆ ಹುಡುಗನಂತೆ
ಮಾತನಾಡುತ್ತಾನೆ."
"ಭಾವಾಜೀ, ನಾವವನನ್ನು ಕೆರೆಗೆ ಕರೆದುಕೊಂಡು ಹೋಗೋಣ.
ಹೆಂಗಸೇ ಆಗಿದ್ದರೆ ಅವಳು ದಡದ ಬದಿಯಲ್ಲಿ ಸ್ನಾನ ಮಾಡುತ್ತಾಳೆ
ಗಂಡಸಾಗಿದ್ದರೆ ಕೆರೆಯ ಮಧ್ಯಕ್ಕೆ ಹೋಗಿ ಸ್ನಾನ ಮಾಡುತ್ತಾನೆ
ಮತ್ತು ಹುರುಪಿನಿಂದ ನೀರನ್ನು ಮೈಗೆ ಅಪ್ಪಳಿಸಿಕೊಳ್ಳುತ್ತಾನೆ."
"ನಾದಿನಿಯೆ, ನನ್ನ ಮನಸ್ಸಿಗೆ, ಕ್ಷೋಭೆಯುಂಟಾಗಿದೆ
ಅವನ ಕಣ್ಣುಗಳು ಹೆಂಗಸಿನ ಕಣ್ಣುಗಳಂತಿವೆ;
ಆದರೆ ಅವನು ಗಂಡಸಿನಂತೆ ಮಾತನಾಡುತ್ತಾನೆ."
"ಭಾವಾಜೀ, ನಾವವನನ್ನು ಅಡಿಗೆ ಮನೆಗೆ ಕರೆದುಕೊಂಡು ಹೋಗೋಣ
ಗಂಡಸೇ ಹೆಂಗಸೇ ಎಂದು ಕಂಡುಹಿಡಿಯೋಣ
ಗಂಡಸೇ ಆಗಿರಲಿ, ಹೆಂಗಸೇ ಆಗಿರಲಿ –
ಹೆಂಗಸಾಗಿದ್ದರೆ ನಿಧಾನವಾಗಿ ಊಟ ಮಾಡುತ್ತಾಳೆ.
ನಿಜವಾದ ಗಂಡಸಾಗಿದ್ದರೆ, ಮೀಸೆಗೆ ಆಹಾರ ಅಂಟಿಕೊಳ್ಳುವಂತೆ ಊಟ

ಮಾಡುತ್ತಾನೆ, ಬೇಗ ಬೇಗ ಕೈಬಾಯಿಗಳನ್ನು ತೊಳೆದುಕೊಳ್ಳುತ್ತಾನೆ."
"ನಾದಿನಿಯೆ, ನನ್ನ ಮನಸ್ಸು ಕ್ಷೋಭೆಗೊಂಡಿದೆ.
ಅವನ ಕಣ್ಣುಗಳು ಹೆಂಗಸಿನ ಕಣ್ಣುಗಳಂತಿವೆ; ಆದರೆ ಗಂಡಸಿನಂತೆ ಮಾತನಾಡುತ್ತಾನೆ."
"ಭಾವಾಜೀ, ನಾವವನನ್ನು ಮಲಗುವ ಮನೆಗೆ ಕರೆದುಕೊಂಡು ಹೋಗೋಣ
ಅವನು ಗಂಡಸೇ ಹೆಂಗಸೇ ಎಂದು ಕಂಡುಹಿಡಿಯೋಣ
ಹೆಂಗಸಾಗಿದ್ದರೆ ನಾಚುತ್ತಾಳೆ ಮತ್ತು ಪೇಲವಗೊಳ್ಳುತ್ತಾಳೆ
ಆದರೆ ನಿಜವಾದ ಗಂಡಸಾಗಿದ್ದರೆ ಕೊಂಚವೂ ಅಂಜುವುದಿಲ್ಲ."

ಈಗ ಸಜ್ಜಾಳ ಸೇವೆ ಪೂರೈಸುತ್ತದೆ. ಯಾವುದೇ ರೀತಿಯಲ್ಲಿಯೂ ಅವಳು ಬಲೆಗೆ ಬೀಳುವುದಿಲ್ಲ)

ಸಜ್ಜಾ ತನ್ನ ಕುದುರೆಯನ್ನೇರಿ ಹೊರಟಳು
ಬೆಳಗ್ಗೆ ಹೊತ್ತು ತಂದೆಯ ಮನೆಯ ಹತ್ತಿರ ಬಂದಳು
ಕೆರೆ ಸರೋವರಗಳನ್ನು ದಾಟಿ ಅವಳು ಬಂದಳು.
ಅವಳು ಮನೆ ತಲುಪಿ, ಎಡಭುಜದ ತೋಳ್ಬದಿಯನ್ನು ತೋರಿಸಿದಳು.
'ಏಳು ಅಪ್ಪಾ, ಬಾಗಿಲು ತೆರೆ,
ಸಜ್ಜಾ 12 ವರ್ಷಗಳ ಸೇವೆ ಸಲ್ಲಿಸಿ ಮನೆಗೆ ಮರಳಿದ್ದಾಳೆ."

Printed at The Central Electric Press A-12/1 Naraina Indl. Area, Phase-I, New Delhi-28.